ದಿವ್ಯ ಪ್ರಬಂಧಮಾಲಾ-ಕುಸುಮ ೭

ತಿರುಮಂಗೈಯಾಳ್ವಾರ್ರವರು ಅನುಗ್ರಹಿಸಿದ

# ಪೆರಿಯ ತಿರುಮೊೞಿ

(ಸಂಚಿಕೆ-ಮೂರು)

(ಮೂರನೆಯಂಪತ್ತಿನ ಎಂಟನೆಯ ದಶಕದಿಂದ ಐದನೆಯಂಪತ್ತಿನ ಐದನೆಯ ದಶಕ ಪೂರ್ತಿ)

This book is Published with the financial assistance of

TIRUMALA TIRUPATI DEVASTHANAMS

UNDER THEIR SCHEME AID TO PUBLISH RELIGIOUS BOOKS

ಅನುವಾದ ಮತ್ತು ವಿವರಣೆ

ವೇದಾಂತವಿದ್ವಾನ್ ವೇದಾಂತವಿದ್ವನ್ಮಣಿ
ಸತ್ಸಂಪ್ರದಾಯಭೂಷಣಮ್

ಡಾ|| ಎನ್. ಎಸ್. ಅನಂತರಂಗಾಚಾರ್ಯ

ಬೆಂಗಳೂರು

Divya Prabandha Mala–Vol. 7 consisting three decades of third centum, the fourth centum and five decades of the fifth centum–in all 180 pasurams of Periya Thirumoli of Sri Thirumangai Alwar–Kannada translation and explanation by Dr. N. S. Anantha Rangachar,
780, V Main Road, Vijayanagara, Bangalore–560 040.



First Edition 1990
No. of copies printed–1000

Price Rs. 16-00
ಬೆಲೆ: ಹದಿನಾರು ರೂಪಾಯಿಗಳು

55428

ಮುದ್ರಕರು :
ಲೋಟಸ್ ಪ್ರಿಂಟರ್ಸ್
ಬೆಂಗಳೂರು–44

# ಅರಿಕೆ

ಶ್ರೀ ತಿರುಮಂಗೈ ಆಳ್ವಾರ್ ಅವರು ಹಾಡಿದ ಪೆರಿಯ ತಿರುಮೊಳಿಯ ಮೂರನೆಯ ಸಂಚಿಕೆಯನ್ನು ದಿವ್ಯ ಪ್ರಬಂಧಮಾಲೆಯ ಏಳನೆಯ ಕುಸುಮವಾಗಿ ಸಹೃದಯ ಮಹಾಶಯರಲ್ಲಿ ಸಮರ್ಪಿಸಲು ಸಾಧ್ಯವಾದುದಕ್ಕಾಗಿ ಸಂತೋಷವೆನಿಸಿದೆ. ಹದಿನೆಂಟು ದಶಕಗಳ ಕನ್ನಡಾನುವಾದ ಮತ್ತು ವಿವರಣೆಯನ್ನು ಈ ಕುಸುಮದಲ್ಲಿ ಅಳವಡಿಸಲಾಗಿದೆ. ಹೀಗೆಯೇ ಕ್ರಮವಾಗಿ ಭಗವದ್ಭಾಗವತರ ಸಂಕಲ್ಪಕ್ಕನುಸಾರವಾಗಿ ಉಳಿದ ಭಾಗವನ್ನು ಪ್ರಕಟಿಸಬೇಕೆಂಬ ಆಶೆಯಿದೆ. ಸಹೃದಯರ ಸಹಕಾರ ಮತ್ತು ಪ್ರೋತ್ಸಾಹಗಳಿಂದ ಅದು ಸಾಧ್ಯವಾಗುವುದೆಂದು ನಂಬಲಾಗಿದೆ.

ಈ ಪ್ರಕಟಣೆಗೆ ಉದಾರವಾಗಿ ಆರ್ಥಿಕ ನೆರವನ್ನಿತ್ತು ಪರಮೋಪಕಾರ ಮಾಡಿರುವ ಶ್ರೀ ತಿರುಮಲೆ ತಿರುಪತಿ ದೇವಸ್ಥಾನವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ತಿರುಮಲೆ ತಿರುಪತಿ ದೇವಸ್ಥಾನದ ನಿರ್ವಹಣಾಧಿಕಾರಿಗಳಿಗೂ ಸಂಪಾದಕರಾದ ಶ್ರೀ ಕೆ. ಸುಬ್ಬಾರಾವ್ ಅವರಿಗೂ ನನ್ನ ಅನಂತ ವಂದನೆಗಳು. ವದಾನ್ಯರಾದ ಶ್ರೀ ಎಂ. ಎಸ್. ಶಿಂಗ್ರಾಚಾರ್ಯರು ಈ ಕೃತಿಯ ಪ್ರಕಟಣೆಗೆ ಒಂದು ಸಹಸ್ರ ರೂಪಾಯಿಗಳ ಸಹಾಯ ಮಾಡಿದ್ದಾರೆ. ಅವರಿಗೆ ಕೃತಜ್ಞನಾಗಿದ್ದೇನೆ. ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ ಲೋಟಸ್ ಪ್ರಿಂಟರ್ಸ್‌ನವರಿಗೂ ನಾನು ಆಭಾರಿಯಾಗಿದ್ದೇನೆ.

ಶ್ರೀರಂಗನಾಯಕೀ ಸಮೇತನಾದ ಶ್ರೀ ರಂಗನಾಥನ ದಿವ್ಯಚರಣಾರವಿಂದಗಳಲ್ಲಿ ಈ ಕೃತಿ ಭಕ್ತಿಪೂರ್ವಕವಾಗಿ ಸಮರ್ಪಿತವಾಗಿದೆ.

ಪ್ರಮೋದ ಚೈತ್ರ<br>ಶುಕ್ಲ ಪ್ರತಿಪತ್<br>೨೭-೩-೯೦

ಇಂತು ಸಜ್ಜನ ವಿಧೇಯ<br>**ಎನ್. ಎಸ್. ಅನಂತರಂಗಾಚಾರ್ಯ**

# ಪೆರಿಯ ತಿರುಮೊೞಿ

## ಮೂರನೆಯ ಪತ್ತು—ಎಂಟನೆಯ ತಿರುಮೊೞಿ

# 'ನಂದಾ ವಿಳಕ್ಕೇ'

## ಪ್ರವೇಶ

ಭಗವಂತನನ್ನು ಕುರಿತಂತೆ ತಮಗೆ ಉಂಟಾದ ಪ್ರಾವಣ್ಯಾತಿಶಯವನ್ನು ಆೞ್ವಾರವರು ಪಾರ್ಶ್ವಸ್ಥರ ಮಾತಿನಲ್ಲಿ ಅನುಭವಿಸಿದರು. ತಂದೆ ತಾಯಿಗಳಿಗಾಗದೆ 'ಮಯಲಾಲಿಮಣವಾಳ'ನಿಗೇ ತಾವು ಆಗಿರುವ ಸ್ಥಿತಿಯನ್ನು ತಾಯಿಯು ಹೇಳಿದ ಮಾತಿನಲ್ಲಿ ಅನುಭವಿಸಿದರು. ತಮಗೆ ಉಂಟಾದ ಪ್ರಾವಣ್ಯವನ್ನು ಭಗವದನುಭವವಲ್ಲದೆ ಅಡಗಿಸಿಕೊಳ್ಳಲಾಗದ ಕಾರಣ ಅವರ ಮನಸ್ಸು ಶಿಥಿಲವಾಯಿತು. ಹೀಗೆ ಭಗವತ್ಪ್ರವಣವಾದ ಮನಸ್ಸನ್ನು ಪ್ರಶಂಸೆ ಮಾಡಿ, 'ಆ ಮಹತ್ತರವಾದ ಲಾಭವನ್ನು ಪಡೆಯುವವರೆಗೆ ಇಲ್ಲಿ ಅನುಭವಿಸಿ ಧಾರಣೆ ಮಾಡಿಕೊಂಡು ಸಮಾಧಾನ ಮಾಡಿಕೊಳ್ಳುವುದಕ್ಕಾಗಿ ತಾನೇ ಆ ದೇವದೇವ ನಿತ್ಯೋಜ್ವಲಜ್ಯೋತಿರ್ಮಯವಿಗ್ರಹನಾಗಿ ಪರಮ ಕರುಣೆಯಿಂದ 'ಮಣಿಮಾಡಕ್ಕೋಯಿಲ್' ಕ್ಷೇತ್ರದಲ್ಲಿ ಇರುತ್ತಿರುವುದು. ಅಲ್ಲಿ ಹೋಗಿ ಅವನನ್ನು ಅನುಭವಿಸು'—ಎಂದು ತಮ್ಮ ಮನಸ್ಸಿಗೆ ಸೂಚನೆ ನೀಡಿದ್ದಾರೆ ಈ ದಶಕದಲ್ಲಿ.

**ನಂದಾ ವಿಳಕ್ಕೇ, ಅಳತ್ತರ್ಕ್ಕರಿಯಾಯ್**
**ನರನಾರಣನೇ, ಕರು ಮಾ ಮುಹಿಲ್ ಪೋಲ್**
**ಎಂದಾಯ್, ಎಮಕ್ಕೇ ಅರುಳಾಯ್, ಎನ ನಿನ್ರು**
**ಇಮೈಯೋರ್ ಪರವುಮ್ ಇಡಂ, ಎತ್ತಿಶೈಯುಂ**
**ಕಂದಾರಂ ಅಮ್ ತೇನ್ ಇಶೈ ಪಾಡ, ಮಾಡೇ**
**ಕಳಿವಂಡು ಮಿೞತ್ತ, ನಿೞಲ್ ತುದೈನ್ದು**
**ಮಂದಾರಂ ನಿನ್ರು ಮಣಮಲ್ಹುಂ, ನಾಙ್ಗೂರ್**
**ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ** ॥೧॥

'(ನಂದಾ ವಿಳಕ್ಕೇ) ಅಳಿಯದೆ ಇರುವ ಬೆಳಕೇ, (ಅಳತ್ತರ್ಕ್ಕರಿಯಣಾಯ್) ಪರಿಚ್ಛೇದಿಸುವುದಕ್ಕೆ ಅಶಕ್ಯನಾದವನೇ, (ನರನಾರಣನೇ) ನರನಾರಾಯಣಾವ ತಾರವನ್ನು ಮಾಡಿ ಕರುಣಿಸಿದವನೇ, (ಕರುಮಾಮುಹಿಲ್ ಪೋಲ್ ಎಂದಾಯ್) ನೀಲವಾದ ಹಿರಿಯ ಮೋಡವನ್ನು ಹೋಲುವ ನನ್ನ ಸ್ವಾಮಿಯೇ, (ಎಮಕ್ಕೇ ಅರುಳಾಯ್) ನಮಗೇ ನೀನು ಕೃಪೆ ಮಾಡಬೇಕು'–(ಎನ) ಎಂದು ಹೇಳಿಕೊಂಡು (ಇಮೈಯೋರ್ ನಿನ್ರು ಪರವುಂ ಇಡಂ) ದೇವತೆಗಳು ಬಂದು ನಿನ್ನನ್ನು ಸ್ತುತಿಸುವ ಸ್ಥಾನವಾದುದೂ, (ಅಮ್‌ತೇನ್) ಸುಂದರವಾದ ಜೇನು ಗಳು (ಎತ್ತಿಶೈಯುಂ) ಎಲ್ಲ ಜಾಗಗಳಲ್ಲಿಯೂ (ಕಂದಾರಂ ಇಶೈಪಾಡ) ದೇವ ಗಾಂಧಾರಿ ರಾಗವನ್ನು ಹಾಡತಕ್ಕದಾದುದೂ, (ಕಳಿವಂಡು) ದುಂಬಿಗಳು (ಮಾಡೇ) ಪಕ್ಕಗಳಲ್ಲಿ (ಮಿಃಟತ್ತಿ) ಆಲಾಪನೆ ಮಾಡತಕ್ಕದೂ, (ಮಂದಾರಂ) ಪಾರಿಜಾತ ವೃಕ್ಷಗಳು (ನಿಟಿಲ್ ತಂತ್ತೈನ್ದು ನಿನ್ರು) ನೆರಳನ್ನು ಕೊಡಲು ಸಾಂದ್ರವಾಗಿ ನಿಂತು (ಮಣಮ್‌ಮಲ್‌ಹುಂ) ಪರಿಮಳವನ್ನೆಲ್ಲೆಲ್ಲಿಯೂ ತುಂಬುತ್ತಿರುವಂಥದೂ ಆದ (ನಾನ್ಗೂರ್) ತಿರುನಾನ್ಗೂರಿನಲ್ಲಿ ರುವ (ಮಣಿಮಾಡಕ್ಕೋಯಿಲ್) ಮಣಿಮಾಡಕ್ಕೋಯಿಲ್ ಎಂಬ ದಿವ್ಯಕ್ಷೇತ್ರ ವನ್ನು (ಎನ್‌ಮನಮೇ ವಣಂಗು) ನನ್ನ ಮನಸ್ಸೇ, ತಲೆಬಾಗಿ ನಮಿಸು, ಸೇವಿಸು.

ಬ್ರಹ್ಮಾದಿದೇವತೆಗಳು 'ನಮ್ಮ ಅಭಿಮತಗಳನ್ನು ನಡೆಸಿಕೊಡಬೇಕೆಂದು' ಯಾವ ಕ್ಷೇತ್ರಕ್ಕೆ ಹೋಗಿ ಪ್ರಾರ್ಥಿಸುವರೋ ಅಂತಹ ಮಣಿಮಾಡಕ್ಕೋಯಿಲ್ ದಿವ್ಯಕ್ಷೇತ್ರಕ್ಕೆ ಹೋಗಿ ಆ ಸ್ವಾಮಿಯನ್ನು ಸೇವಿಸಬೇಕೆಂದು ತಮ್ಮ ಮನಸ್ಸಿಗೆ ಹೇಳುತ್ತಾರೆ ಇಲ್ಲಿ. ಈ ನಂದಾದೀಪ ನಿತ್ಯವಾದುದು. ಪ್ರಭಾಪ್ರಭಾವಾನ್ ಆಗಿ ಇರುವ ದೀಪ ಈ ಸ್ವಾಮಿ. ಸ್ವಯಂ ಪ್ರಕಾಶವಾದ ಜ್ಞಾನವನ್ನು ಸ್ವರೂಪ ವನ್ನಾಗಿ ಉಳ್ಳವನವನು. ವಿಭುತ್ವದಿಂದಲೂ, ಗುಣ ವಿಭೂತಿಗಳಿಂದಲೂ ಅವನು ಅಪರಿಚ್ಛೇದ್ಯನಾದವನು. ಮೇಘದಂತೆ ಶ್ರಮಹರವಾದ ರೂಪವನ್ನು ತೋರಿ ನಮ್ಮನ್ನು ತನ್ನ ಅನನ್ಯಭಕ್ತರನ್ನಾಗಿ ಮಾಡಿಕೊಂಡವನವನು. ದೇವತೆ ಗಳು ಬಂದು ಸ್ತೋತ್ರಾದಿಗಳನ್ನು ಮಾಡಿ ಆಶ್ರಯಿಸುವ ಸ್ಥಾನ ಈ ದಿವ್ಯಕ್ಷೇತ್ರ. ಎಲ್ಲೆಲ್ಲಿ ನೋಡಿದರೂ ಮಧುಪಾನ ಮಾಡಿ ಗಾನ ಮಾಡುವ ಜೇನುಗಳೂ

ದುಂಬಿಗಳೂ ನೆರೆದಿರುವ ದರ್ಶನೀಯವಾದ ಜಾಗ ಇದು. ಇಂಥ ಕ್ಷೇತ್ರ ವನ್ನು ಹೋಗಿ ಆಶ್ರಯಿಸು ಎಂದು ಹೇಳುತ್ತಾರೆ.

> ಮುತಲೈ ತನಿ ಮಾ ಮುರಣ್ ತೀರ ವನ್ರು
> ಮುಡು ನೀರ್ ತಡತ್ತು ಶೆಮ್ ಕಣ್ ವೇೞಮ್‌ಉಯ್ಯ
> ವಿತಲೈತ್ತಲೈಶೆನ್ರು ಅದಕ್ಕೇ ಉದವಿ
> ವಿನ್ನೈತೀರ್‌ತ್ತ ಅಮ್ಮಾನ್ ಇಡಂ ವಿಣ್ ಅಣವುಂ
> ಪತಲೈ ಕಪೋತಮ್ ಒಳಿಮಾಡ ನೆತ್ತಿ
> ಪವಳಂ ಕೊಟುಂಕಾಲ ಪೈಂಗಾಲ್ ಪುರವುಂ
> ಮತಲೈತ್ತಲೈ ಮೆನ್ ಪೆಡೈ ಕೂಡು ನಾನ್ಗೂರ್
> ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ ॥೨॥

(ಅನ್ರು) ಹಿಂದಿನ ಆ ಒಂದು ಕಾಲದಲ್ಲಿ (ಮುಡು ನೀರ್ ತಡತ್ತು) ಅಗಾಧವಾದ ನೀರನ್ನುಳ್ಳ ಸರಸ್ಸಿನ ತೀರದಲ್ಲಿ (ಮುದಲೈ) ಮೊಸಳೆಯು (ತನಿಮಾ ಮುರಣ್ ತೀರ) ಅತ್ಯಂತವಾಗಿ ಹೆಚ್ಚಾದ ದುಷ್ಟತನವು ನಾಶವಾಗುವಂತೆಯೂ. (ಶೆವರ್‌ಕಣ್ ವೇೞಮ್ ಉಯ್ಯ) ಕೆಂಪಾದ ಕಣ್ಣುಗಳನ್ನುಳ್ಳ ಗಜೇಂದ್ರನು ಉಜ್ಜೀವಿಸುವಂತೆಯೂ (ವಿದಲೈತ್ತಲೈ ಶೆನ್ರು) ಆ ಆನೆಯು ಬಹಳವಾಗಿ ನಡುಗಿಹೋಗಿದ್ದ ಸಮಯದಲ್ಲಿ ದಯಮಾಡಿ ಬಂದು (ಅದಕ್ಕೇ ಉದವಿ) ಆ ಆನೆಗೆ ಒದಗಿ ಬಂದು ಉಪಕರಿಸಿ (ವಿನ್ನೈ ತೀರ್‌ತ್ತ ಅಮ್ಮಾನ್ ಇಡಂ) ಅದರ ದುಃಖವನ್ನು ಕಳೆದು ಹಾಕಿದ ಭಗವಂತನು ಬಂದು ಇರುತ್ತಿರುವ ದಿವ್ಯ ಕ್ಷೇತ್ರ ವಾದುದೂ (ವಿಣ್ ಅಣವುವರ್) ದೇವಲೋಕದವರೆಗೂ ವ್ಯಾಪಿಸಿದ್ದು (ಪದಲೈಕಪೋತಂ) ಕಲಶಗಳನ್ನೂ ಗೂಡುಗಳಲ್ಲಿ ಕೆತ್ತಲ್ಪಟ್ಟ ಕಪೋತಗಳನ್ನೂ ಹೊಂದಿದ್ದು (ಒಳಿ) ಕೆತ್ತಿದ ರತ್ನಗಳಿಂದ ಪ್ರಕಾಶಿಸುವ (ಮಾಡಂ) ಮಾಳಿಗೆಗಳ (ನೆತ್ತಿ) ನೆತ್ತಿಯ ಮೇಲೆ (ಪವಳಂ ಕೊಟುಕಾಲ) ಸುಂದರವಾದ ಹವಳದ ಸ್ತಂಭಗಳನ್ನು ಹೋಲುವ (ಪೈಂಗಾಲ್) ಕೆಂಪಾದ ಕಾಲುಗಳನ್ನುಳ್ಳ (ಪುರವುಂ) ಪಕ್ಷಿಗಳು (ಮದಲೈತ್ತಲೈ) ಪ್ರಾಕಾರದ ಕಿರುಕಂಬಗಳ ಮೇಲೆ (ಮುನ್‌ಪೆಡೈ) ಸಂಶ್ಲೇಷಿಸುವುದಕ್ಕೂ ಆಗದಂತಿರುವ ಮಾರ್ದವವುಳ್ಳ ಪ್ರಿಯೆಯರೊಡನೆ (ಕೂಡು) ಸಂಶ್ಲೇಷಿಸುವ (ನಾನ್ಗೂರ್) ತಿರುನಾನ್ಗೂರಿನಲ್ಲಿರುವುದೂ ಆದ

(ಮಣಿವಾಡಕ್ಕೋಯಿಲ್) ಮಣಿವಾಡಕ್ಕೋಯಿಲ್ ಕ್ಷೇತ್ರವನ್ನು, (ಎನ್ ಮನನೇ ವಣಂಗು) ಎಲ್ಲೆನನ್ನ ಮನಸ್ಸೇ, ಹೋಗಿ ಆಶ್ರಯಿಸಿ ನಮಿಸು.

ಮೊಸಳೆಗೆ ಬಂದಿದ್ದ ವಿಪತ್ತು ಉಪಮಾನರಹಿತವಾದುದು. ಕೊನೆ ಕಾಣುವುದಕ್ಕೆ ಆಗದುದು. ಬಲಪರಾಕ್ರಮಗಳನ್ನು ಹೊಂದಿದ್ದರೂ ಆ ಗಜೇಂದ್ರ ಅವುಗಳನ್ನು ಆ ಜಾಗದಲ್ಲಿ ಅನ್ವಯಿಸುವುದಕ್ಕಾಗದೇ ಹೋದ ಕಾರಣ ಉಂಟಾದ ಸಿಟ್ಟಿನಿಂದ ಅದರ ಕಣ್ಣುಗಳು ಕೆಂಪಾಗಿದ್ದವಂತೆ ! ಆ ಗಜೇಂದ್ರನಿಗೆ ವಿರೋಧಿಯಾದ ಮೊಸಳೆಯನ್ನು ನಿಗ್ರಹಿಸಿ ರಕ್ಷಿಸಿದ ಆ ಪರಮ ಕರುಣಾಳು. ಅದರ ದುಃಖವನ್ನು ಕಳೆದು ಹಾಕಿದುದು ಎಂದರೆ ಗಜೇಂದ್ರ ತಾನು ಇಚ್ಛಿಸಿದಂತೆ ಭಗವಂತನ ಪಾದಗಳ ಮೇಲೆ ಪುಷ್ಪಗಳನ್ನರ್ಪಿಸುವುದಕ್ಕಾಗು ವಂತೆ ಅದಕ್ಕೆ ಪ್ರತ್ಯಕ್ಷನಾದುದೇ ಆಗಿದೆ.

ಆ ದಿವ್ಯಕ್ಷೇತ್ರದಲ್ಲಿರುವ ಭವನಗಳನ್ನು ಉತ್ತರಾರ್ಧದಲ್ಲಿ ವರ್ಣಿಸಿದೆ, ಸ್ವರ್ಗವನ್ನು ಮುಟ್ಟುವ ಉನ್ನತವಾದ ಭವನಗಳು ಅವು. ಮೇಲೆ ಕುಂಭದ ಸಾಲುಗಳನ್ನೂ ಕಪೋತಗಳ ಗೂಡುಗಳನ್ನೂ ಹೊಂದಿವೆಯಂತೆ ಅವು. ಚಿನ್ನ, ರತ್ನಗಳ ಅಲಂಕಾರ ಹೊಂದಿ ಪ್ರಕಾಶಿಸುತ್ತ ಇವೆಯಂತೆ ! ಹವಳದಂತೆ ಕೆಂಪಾದ ಕಾಲುಗಳನ್ನುಳ್ಳ (ಪುರಾಗಳು) ಪಕ್ಷಿಗಳು ತಮ್ಮದಯಿತೆಯರೊಡನೆ ಸಂಶ್ಲೇಷಿಸುತ್ತವೆ ಆ ಭವನದ ಮೇಲ್ಭಾಗದಲ್ಲಿ ಕೆತ್ತಿರುವ ಕಂಬಗಳ ಮೇಲಿರುವ ಕಿರು ಕಂಬಗಳಲ್ಲಿ. ಅಂಥ ಸಮೃದ್ಧಿ ಇರುವ ಕ್ಷೇತ್ರ ಆ ತಿರು ನಾನ್ಗೂರ್ ಎಂಬುದು.

**ಕೊಲ್ಲೈ ಪುಣ್‌ತಲೈಕುನ್ರಂ ಒನ್ರುಉಯ್ಯ ನೆನ್ರು**
**ಕೊಡುಮಾ ಮುದಲೈಕ್ಕು ಇಡರ್‌ಶೆಯ್‌ದು, ಕೊಂಗು ಆರ್**
**ಇಲ್ಲೈ ಪುಂಡರೀಕತ್ತವಳ್ ಇನ್ಬಂ ಅನ್ಬೋಡು**
**ಅಣೈನ್ದು ಇಟ್ಟ ಅಮ್ಮಾನ್ ಇಡಂ, ಆಳರಿಯಾಲ್**
**ಅಲೈಪ್ಪುಂಡ ಯಾನೈ ಮರುಪ್ಪುಮ್ ಅಹಿಲುಂ**
**ಅಣಿಮುತ್ತುಂ ವೆಣ್‌ಶಾಮರೈಯೊಡು, ಪೊನ್ನಿ**
**ಮಲೈ ಪಣ್ಡಮ್ ಅಣ್ಡ ತಿರೈ ಉನ್ದು ನಾನ್ಗೂರ್**
**ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ** ॥೩॥

(ಅನ್ರು) ಅಂದೊಮ್ಮೆ ಹಿಂದಿನ ಕಾಲದಲ್ಲಿ (ಕೊಲೈ) ಕೊಲೆಯ ವ್ಯಾಪಾರ ಮಾಡಬಲ್ಲದೂ (ಪುಣ್‌ತಲೈ) ನೋವನ್ನು ಹೊಂದಿದ ತಲೆಯನ್ನುಳ್ಳದೂ (ಒನ್ರುಕುನ್ರುಂ) ಒಂದು ಬೆಟ್ಟವನ್ನು ಹೋಲುತ್ತಿದ್ದುದೂ ಆದ ಒಂದು ಆನೆಯು (ಉಯ್ಯ) ಉಜ್ಜೀವಿಸುವುದಕ್ಕಾಗಿ (ಕೊಡು ವಾ ಮುದಲೈಕ್ಕು ಇಡರ್ ಶೆಯ್‌ದು) ಕ್ರೌರ್ಯದಲ್ಲಿ ಹೆಚ್ಚಿದ್ದ ಮೊಸಳೆಗೆ ದುಃಖವನ್ನುಂಟು ಮಾಡಿ, ಆ ಸಂತೋಷದಲ್ಲಿ (ಕೊಂಗು ಆರ್ ಇಲೈ ಪುಂಡರೀಕತ್ತವಳ್) ಪರಿಮಳವು ಹರಡಿದ ದಳಗಳನ್ನುಳ್ಳ ತಾವರೆಯ ಹೂವಿನಲ್ಲಿ ಜನಿಸಿದವಳಾದ ಶ್ರೀದೇವಿಯ (ಇನ್ಬಂ ಅನ್ಬೋಡು ಅಣೈಂದಿಟ್ಟ) ಸಂಶ್ಲೇಷದ ಸುಖವನ್ನು ಆನಂದದಿಂದ ಅನುಭವಿಸಿದ (ಅವಮ್ಮಾನ್ ಇಡಂ) ಸ್ವಾಮಿಯು ಇರುತ್ತಿರುವ ಕ್ಷೇತ್ರವಾದುದೂ (ಪೊನ್ನಿ) ಕಾವೇರಿಯು (ಅಳ್ ಅರಿಯಾಲ್) ವೀರ ಸಿಂಹ ಗಳಿಂದ (ಅಲೈಪ್ಪುಂಡ) ಸಂಹರಿಸಲ್ಪಟ್ಟ (ಯಾನೈಮರುಪ್ಪುಂ) ಆನೆಗಳ ದಂತ ಗಳನ್ನೂ (ಅಹಿಲುಂ) ಅಹಿಲ್ ಮರಗಳನ್ನೂ (ಅಣಿ ಮುತ್ತುಂ) ಸುಂದರವಾದ ಮುತ್ತುಗಳನ್ನೂ (ವೆಣ್‌ಶಾಮರೈಯೊಡು) ಬೆಳ್ಳಗಿರುವ ಚಾಮರಗಳನ್ನೂ (ಮಲೈ ಪಣ್ಡಂ ಅಣ್ಡ) ಬೆಟ್ಟದಲ್ಲಿ ಬೆಳೆಯುವ ಮತ್ತೂ ಅನೇಕ ವಸ್ತುಗಳನ್ನೂ (ತಿರೈ ಉನ್ದು) ಅಲೆಗಳಿಂದ ತಳ್ಳಿಕೊಂಡು ಬಂದು ಹರಿಯುವಂತಹ (ನಾನ್ನೂರ್) ತಿರುನಾನ್ಗೂರಿನಲ್ಲಿ (ಮಣಿಮಾಡಕ್ಕೋಯಿಲ್ ಎನ್ ಮನನೇ ಪಣಿಂಗು) ಮಣಿಮಾಡಕ್ಕೋಯಿಲ್ ಕ್ಷೇತ್ರವನ್ನು, ಎಲೈ ನನ್ನ ಮನಸ್ಸೇ, ನಮಿಸಿ ಸೇವಿಸು.

ಗಜೇಂದ್ರನಿಗೆ ವಿರೋಧಿಯಾದ ಮೊಸಳೆಯನ್ನು ಸ್ವಾಮಿ ನಿರಸನ ಮಾಡಲು ಅದರಿಂದ ಪ್ರೀತಳಾದ ದೇವಿಯು ಭಗವಂತನನ್ನು ಆಲಿಂಗಿಸಿ ಕೊಂಡಳು__ಖರದೂಷಣಾದಿ ಹದಿನಾಲ್ಕು ಸಾವಿರ ರಕ್ಕಸರನ್ನು ಶ್ರೀರಾಮ ಏಕಾಕಿಯಾಗಿ ವಧಿಸಿದಾಗ ಸೀತಾದೇವಿ ಅವನನ್ನು ಆಲಂಗಿಸಿಕೊಂಡಂತೆ. ಅವಳ ಸಂಶ್ಲೇಷ ಹೊಂದಿದ ಸ್ವಾಮಿ ಈ ದಿವ್ಯ ಕ್ಷೇತ್ರದಲ್ಲಿದ್ದಾನೆ. ಅವನನ್ನು, ಅಲ್ಲಿ ಹೋಗಿ ಸೇವಿಸು ಎನ್ನುತ್ತಾರೆ ಈ ಪಾಶುರದಲ್ಲಿ. ಸತ್ವಸ್ಥನಾದ ಗಜೇಂದ್ರನಿಗೆ ತಲೆಯಲ್ಲಿ ಹುಣ್ಣು ಎಲ್ಲಿಂದ ಬರಬಹುದು ? ಕಾಡಾನೆಯಾದುದರಿಂದ ಇತರ ಆನೆಗಳೊಡನೆ ಹೋರಾಡಿದುದರಿಂದ ಆಗಿರುವ ಹುಣ್ಣು ಅದು. ಪ್ರಿಯಪುತ್ರನ

ದುಃಖವನ್ನು ಹೋಗಲಾಡಿಸಿ ಅವನಿಗೆ ಸಂತೋಷವುಂಟುಮಾಡಿದ ಭರ್ತೃವನ್ನು ಭಾರ್ಯೆ ಸಮ್ಮಾನಿಸುವಳಷ್ಟೇ ?

ಶಿರೈ ಆರ್ ಉವಣಪ್ಪುಳ್ ಒನ್ರೇರಿ ಅನ್ರು
ತಿಶೈ ನಾನ್ಗುಮ್ ನಾನ್ಗುಮ್ ಇರಿಯ ಶೆರುವಿಲ್
ಕರೈ ಆರ್ ನೆಡುವೇಲ್ ಅರಕ್ಕರ್ ಮಡಿಯ
ಕಡಲ್‌ಶೂಟ್ ಇಲಂಗೈ ಕಡಂದಾನ್ ಇಡಂದಾನ್
ಮುರೈಯಾಲ್ ವಳರ್‌ಕ್ಕಿನ್ರ ಮುತ್ತೀಯರ್
ನಾಲ್‌ವೇದರ್ ಐವೇಳ್ವಿ ಆರುಅಂಗರ್ ಏಳಿನ್ ಇಶೈಯೋರ್
ಮರೈಯೋರ್ ವಣಂಗ ಪುಹಟ್ ಎಯ್‌ದು ನಾನ್ಗೂರ್
ಮಣಿಮಾಡಕ್ಕೋಯಿಲ್ ವಣಂಗು ಎನ್‌ಮನನೇ ॥೪॥

(ಅನ್ರು) ಹಿಂದೊಂದು ಕಾಲದಲ್ಲಿ (ಶಿರೈ ಆರ್) ರೆಕ್ಕೆಗಳೊಡನೆ ಕೂಡಿದ (ಒನ್ರು) ತನಗೆ ಸಮರಿಲ್ಲದ (ಉವಣಮ್ ಪುಳ್) ಗರುಡಪಕ್ಷಿಯ ಮೇಲೆ (ಏರಿ) ಏರಿಕೊಂಡು ಬಂದು (ಶೆರುವಿಲ್) ಯುದ್ಧದಲ್ಲಿ (ಕರೈ ಆರ್ ನೆಡು ವೇಲ್ ಅರಕ್ಕರ್) ರಕ್ತದ ಕಲೆಗಳು ತುಂಬಿರುವ ದೊಡ್ಡ ಮೇಲಾಯುಧವನ್ನುಳ್ಳ ರಾಕ್ಷಸರುಗಳು (ತಿಶೈನಾನ್ಗುಂ ನಾನ್ಗುಂ ಇರಿಯ) ಎಂಟು ದಿಕ್ಕುಗಳಲ್ಲಿಯೂ ಚೆದರಿ ಓಡಿಹೋಗುವಂತೆಯೂ, (ಮಡಿಯ) ಮತ್ತೆ ಕೆಲವರು ಪ್ರಾಣವನ್ನು ಕಳೆದುಕೊಂಡು ಸಾಯುವಂತೆಯೂ (ಕಡಲ್ ಶೂಟ್ ಇಲಂಗೈ ಕಡನ್ದಾನ್) ಸಮುದ್ರದಿಂದ ಸುತ್ತುವರಿಯಲ್ಪಟ್ಟ ಲಂಕಾಪುರಿಯನ್ನು ಧ್ವಂಸಮಾಡಿದ ಸ್ವಾಮಿಯು (ಇಡಂ ತಾನ್) ವಾಸಮಾಡುವ ಸ್ಥಾನವಾದುದೂ (ಮುರೈಯಾಲ್ ವಳರ್‌ಕ್ಕಿನ ಮುತ್ತೀಯರ್) ಸರದಿಗನುಸಾರ ಹೋಮ ಮಾಡುವ ಮೂರು ಅಗ್ನಿಗಳನ್ನುಳ್ಳವರೂ (ನಾಲ್‌ವೇದರ್) ಚತುರ್ವೇದಗಳನ್ನು ಅಧಿಕರಿಸಿದವರೂ, (ಐ ವೇಳ್ವಿ) ಪಂಚಮಹಾಯಜ್ಞಗಳನ್ನು ಅನುಷ್ಠಿಸುವವರೂ (ಆರು ಅಂಗರ್) ಆರು ವೇದಾಂಗಗಳನ್ನು ಅಭ್ಯಾಸ ಮಾಡಿದವರೂ (ಏಳಿನ್ ಇಶೈಯೋರ್) ಸಪ್ತಸ್ವರಗಳನ್ನೂ ಅರಿತವರೂ ಆದ (ಮರೈಯೋರ್ ವಣಂಗ ಪುಹಟ್ ಎಯ್‌ದು) ಬ್ರಾಹ್ಮಣರುಗಳು ಸೇವಿಸುವುದರಿಂದ ಹಿರಿಮೆಯನ್ನು ಹೊಂದಿರುವುದೂ ಆದ (ನಾನ್ಗೂರ್) ನಾನ್ಗೂರಿನಲ್ಲಿರುವ (ಮಣಿ

ಮಾಡಕ್ಕೋಯಿಲ್ ಎನ್ ಮನನೇ ವಣಂಗು) ಮಣಿಮಾಡಕ್ಕೋಯಿಲ್ ಕ್ಷೇತ್ರವನ್ನು, ಎಲೈ ನನ್ನ ಮನಸ್ಸೇ, ಹೋಗಿ ಸೇವಿಸು.

ಪ್ರಬಲರಾದ ಮಾಲಿ, ಸುಮಾಲಿ ಮೊದಲಾದ ರಾಕ್ಷಸರನ್ನು ಮರ್ದಿಸಿದ ವೀರಾಧಿವೀರನು ನೆಲೆಸಿರುವ ದಿವ್ಯಕ್ಷೇತ್ರ ಇದು. ಅದ್ವಿತೀಯನಾದ ಗರುಡ ನನ್ನೇರಿ ನಡೆಸುವ ಮಹಾನುಭಾವ ಇವನು. ಲಂಕೆಗೆ ಸಂದು ಅಲ್ಲಿದ್ದ ರಾಕ್ಷಸರು ದಿಕ್ಕು ದಿಕ್ಕುಗಳಲ್ಲಿ ಓಡಿ ಹೋಗುವಂತೆಯೂ, ನಾಶವಾಗುವಂತೆಯೂ ಜಯಿಸಿ ದವನು ಇರುವ ದಿವ್ಯಕ್ಷೇತ್ರ ಇದು. ವಿಲಕ್ಷಣರಾದ ಜ್ಞಾನ ಕ್ರಿಯಾನಿಷ್ಠರು ಆ ಸ್ವಾಮಿಯನ್ನು ಆ ಕ್ಷೇತ್ರದಲ್ಲಿ ಸೇವಿಸಿ ಆಶ್ರಯಿಸಿರುವವರಾಗಿದ್ದಾರೆ. ನೀನೂ ಅವನನ್ನು ಸೇವಿಸಿ ಉಜ್ಜೀವಿಸು ಎಂದು ತಮ್ಮ ಮನಸ್ಸಿಗೆ ಹೇಳುತ್ತಾರೆ.

ಇಟ್ಟ್ರೈ ಆಡು ಕೊಂಗೈತ್ತಲೈ ನಂಜು ಉಂಡಿಟ್ಟು
ಇಳಂಕನ್ರುಕೊಂಡು ವಿಳಂಗಾಯ್ ಎರಿಂದು
ತಟ್ಟೈ ವಾಡ ವನ್ ತಾಳ್ ಕುರುನ್ದಂ ಒಶಿತ್ತು
ತಡಂ ತಾಮರೈ ಪೊಯ್‌ಹೈ ಪುಕ್ಕಾನ್, ಇಡಂತಾನ್
ಕುಟ್ಟ್ರೈ ಅಡ ವಲ್ಲಿಕುಲಂ ಅಡ ಮಾಡೇ
ಕುಯಿಲ್ ಕೂವ ನೀಡುಕೊಡಿ ಮಾಡಂ ಮಲ್‌ಹು
ಮಟ್ಟ್ರೈ ಆಡು ಶೋಲೈ ಮುಯಿಲ್ ಅಲುಂ ನಾಙ್ಗೂರ್
ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ ॥೫॥

(ಇಟ್ಟೈಆಡು) ಆಭರಣಗಳು ಪ್ರಕಾಶಿಸುತ್ತಿದ್ದ (ಕೊಂಗೈತ್ತಲೈ) ಪೂತನಿಯ ಸ್ತನದಲ್ಲಿದ್ದ (ನಂಜು ಉಂಡಿಟ್ಟು) ವಿಷವನ್ನು ಅವಳ ಪ್ರಾಣದೊಡನೆ ಉಂಡವ ನಾಗಿ, (ಇಳಂಕನ್ರು ಕೊಂಡು ವಿಳಂಗಾಯ್ ಎರಿಂದು) ವತ್ಸಾಸುರನನ್ನು ಎತ್ತಿ ಕಪಿತ್ಥಾಸುರನ ಮೇಲೆ ಬೀಸಿ ಎಸೆದು ಇಬ್ಬರನ್ನೂ ಮುಗಿಸಿದವನಾಗಿ, (ವನ್‌ತಾಳ್ ಕುರುನ್ದಂತಟ್ಟೈವಾಡ ಒಶಿತ್ತು) ಬಲವಾದ ಬುಡವನ್ನುಳ್ಳ ಕುರುನ್ದ ವೃಕ್ಷವನ್ನು ಅದರ ಎಲೆಗಳೆಲ್ಲಾ ಬಾಡಿ ಉದುರುವಂತೆ ಮುರಿದು ಹಾಕಿದವನಾಗಿ (ತಡ ತಾಮರೈಪೊಯ್‌ಹೈ ಪುಕ್ಕಾನ್) ದೊಡ್ಡದಾದ ತಾವರೆಯ ಕೊಳದಲ್ಲಿಳಿದು ಗೋಪಿಯರೊಡನೆ ಜಲಕ್ರೀಡೆಯನ್ನಾಡಿದವನೂ ಆದ ದೇವನು (ಇಡಂತಾನ್)

ಇರುತ್ತಿರುವ ಕ್ಷೇತ್ರವಾದುದೂ (ಕು ಟ್ಟ್ರಿಆಡ) ಮರಗಳ ಚಿಗುರುಗಳು ಮಂದ ಮಾರುತದ ಕಾರಣ ತೊನೆಯುತ್ತಿರಲು (ಮಾಡೇವಲ್ಲಿಕುಲಂ) ಅವುಗಳ ಸಮೀಪ ದಲ್ಲಿರುವ ಹೂಬಳ್ಳಿಗಳ ಸಂಕುಲವು (ಆಡ) ತೂಗಾಡುತ್ತಿರುವಂಥದೂ, (ಕುಯಿಲ್‌ಕೂವ) ಕೋಗಿಲೆಗಳು ಹಾಡುತ್ತಿರುವುದೂ (ಮೇಟ್ಟ್ರಿಆಡುಶೋಲೈ ಮಯಿಲ್‌ಆಲುಂ) ಮೇಘಗಳು ಸಂಚರಿಸುತ್ತಿರುವ ತೋಪುಗಳಲ್ಲಿ ನವಿಲುಗಳು ನರ್ತನಮಾಡುತ್ತಿರುವುದೂ, (ನೀಡು ಕೊಡಿ ಮಾಡಂಮಲ್‌ಹು) ನೀಳವಾದ ಧ್ವಜಗಳನ್ನು ಎತ್ತಿಕಟ್ಟಿರುವ ಮಹಾಳಿಗೆಗಳಿಂದ ತುಂಬಿರುವಂಥದೂ ಆದ (ನಾನ್ನೂಗ್ಗ್ ರ್) ತಿರುನಾನ್ಗೂರಿನಲ್ಲಿರುವ (ಮಣಿಮಾಡಕ್ಕೋಯಿಲ್ ಎನ್ ಮನನೇ ವಣಂಗು) ಮಣಿಮಾಡಕ್ಕೋಯಿಲ್ ಕ್ಷೇತ್ರವನ್ನು ಹೋಗಿ ಸೇರಿ, ಎಲೈ ಮನಸ್ಸೇ, ಸೇವಿಸಿ ನಮಿಸು.

'ಪ್ರತಿಕೂಲವರ್ಗವನ್ನು ನಿರಸನ ಮಾಡಿ ಗೋಪಿಯರೊಡನೆ ಸಂಶ್ಲೇಷಿಸಿದ ಸ್ವಾಮಿಯು ತಿರುಮಣಿಮಾಡಕ್ಕೋಯಿಲ್ ಕ್ಷೇತ್ರದಲ್ಲಿ ನೆಲಸಿದ್ದಾನೆ. ಮನಸ್ಸೇ, ಅಲ್ಲಿ ಹೋಗಿ ಅವನನ್ನು ಸೇವಿಸು'—ಎಂದು ಮನಸ್ಸಿಗೆ ಉಪದೇಶಿ ಸಿದ್ದಾರೆ. ಪೂತನಿ ಯಶೋದೆಯ ಹಾಗೆ ರೂಪಧರಿಸಿ ಬಂದಳು. ಅವಳ ಸ್ತನ ಮಂಡಲದ ಮೇಲೆ ಆಭರಣಗಳು ಆಡುತ್ತಿದ್ದವು. ಆದರೆ ಅಲ್ಲಿ ಘೋರ ವಾದ ವಿಷವೇ ಇತ್ತು. ಆ ವಿಷಸ್ತನ್ಯವನ್ನು ರಸ್ಯತೆಯಿಂದ ಸ್ವಾಮಿ ಪಾನ ಮಾಡಿದ. ಅಸುರಾವೇಶದಿಂದ ಕೂಡಿದ್ದ ಕುರುಂದವೃಕ್ಷ ಇವನು ಹತ್ತಿರ ಸಾರಿ ದಾಗಲೇ ಬಾಡಿಹೋದ ಎಲೆಗಳನ್ನು ಹೊಂದಿದುದಾಯಿತು. ತಾನೂ ಗೋಪಿಯರೂ ಜಲಕ್ರೀಡೆಯಾಡಲು ತಕ್ಕುದಾದ ಜಾಗದಲ್ಲಿ ಕಾಳಿಯನು ಹೊಕ್ಕಕಾರಣ ಅವನನ್ನು ಅಲ್ಲಿಂದ ಹೊರ ಹೊರಡಿಸಲು ಆ ಮಡುವಿನಲ್ಲಿ ಅವನು ಧುಮ್ಮಿಕ್ಕಿದನು. ಸ್ವಾಮಿ ನೆಲಸಿರುವ ದಿವ್ಯಕ್ಷೇತ್ರವಾದ ತಿರುನಾನ್ಗೂರಿನ ಸುಂದರವಾದ ಸನ್ನಿವೇಶವನ್ನು ಉತ್ತರಾರ್ಧದಲ್ಲಿ ಹೇಳಿದೆ. ಮುಕ್ತರು ಸಾಮ ಗಾನ ಮಾಡುವಂತೆ ಕೋಗಿಲೆಗಳು ವಿಕಸಿತವಾದ ಹೂಗಳ ಸೌಗಂಧ್ಯವನ್ನು ಆಘ್ರಾಣಿಸಿ ಗಾನ ಮಾಡುತ್ತವೆ. ಸ್ವಾಮಿ ನೆಲಸಿರುವ ಆ ದಿವ್ಯಕ್ಷೇತ್ರಕ್ಕೆ ಹೋಗಿ ಅವನನ್ನು ಸೇವಿಸಬೇಕು.

**ಪಣ್ ನೇರ್ ಮುಟಿ ಆಯ್‌ಚ್ಚಿಯರ್ ಅಂಜ**
**ವಂಜಂ ಪೆಹುವಾಯ್ ಕ್ಕುಟುತುಕ್ಕು ಇರಂಗಾದು, ಅವಳ್ ತನ್**
**ಉಣ್ಣಾ ಮುಲೈ ಮತ್ತವಳ್ ಆವಿಯೋಡುಂ ಉಡನೇ**
**ಶುವೈತ್ತಾನ್ ಇಡಂ ಓಂಗು ಪೈಂದಾಳ್**
**ಕಣ್ಣಾರ್ ಕರುಂಬಿನ್ ಕಟಿಕ್ಕೈತಿನ್ರು ವೈಹಿ**
**ಕಟುನೀರಿಲ್ ಮಾಟಿಹಿ ಶೆಟುನೀರ್ ತಡತ್ತು**
**ಮಣ್ ಏನ್ದು ಇಳ ಮೇತಿಹಳ್ ವೈಹುಂ ನಾನ್ಗೂರ್**
**ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ ॥೬॥**

(ಪಣ್ ನೇರ್ ಮುಟಿ) ಮಧುರವಾದ ಗಾನದ ಇಂಪನ್ನು ಹೋಲುವ ಮಾತು ಗಳನ್ನಾಡುವವಳಾಗಿ (ಆಯ್‌ಚ್ಚಿಯುರ್ ಅಂಜ) ಗೋಪಿಯರು ಹೆದರುವಂತ ಆಕಾರವನ್ನುಳ್ಳವಳಾಗಿ (ವಂಜಂ ಪಹು ವಾಯ್ ಕುಟುತುಕ್ಕು) ವಂಚನೆಯನ್ನೂ ದೊಡ್ಡಬಾಯಿಯನ್ನೂ ಹೊಂದಿದವಳಾದ ಪೂತನಿ ಎನ್ನುವ ರಾಕ್ಷಸಿಯ ಬಗೆಗೆ (ಇರಂಗಾದು) ತಾನು ಸ್ವಲ್ಪವೂ ನೋವು ಹೊಂದದವನಾಗಿ (ಅವಳ್ ತನ್) ಆ ಪೂತನಿಯ (ಉಣ್ಣಾ ಮುಲೈ) ಉಣ್ಣಲು ಅರ್ಹವಲ್ಲದ ಸ್ತನವನ್ನು (ಮತ್ತವಳ್ ಆವಿಯೊಡುಂ ಉಡನೆ) ಅವಳ ಪ್ರಾಣದೊಡನೆ ಕೂಡಲೇ (ಶುವೈತ್ತಾನ್ ಇಡಂ) ಹೀರಿ ಉಂಡ ಹಿರಿಮೆಯನ್ನುಳ್ಳ ಸ್ವಾಮಿಯು ಇರು ತ್ತಿರುವ ಜಾಗವಾದುದೂ, (ಓಂಗು ಪೈಂದಾಳ್) ಎತ್ತರವಾಗಿ ರಸಮಯವಾಗಿ ಬೆಳೆದ ಕಾಂಡಗಳನ್ನು ಹೊಂದಿ (ಕಣ್ ಆರ್ ಕರುಂಬಿನ್ ಕಟಿಕ್ಕೈ ತಿನ್ರು) ಗಿಣ್ಣು ಗಳು ತುಂಬಿರುವ ಕಬ್ಬಿನ ಕಾಂಡಗಳನ್ನು ತೃಪ್ತಿಯಾಗಿ ತಿಂದು (ವೈಹಿ) ಚಲಿಸುವುದಕ್ಕಾಗದ ಕಾರಣ ಅಲ್ಲಿಯೇ ಬಿದ್ದುಕೊಂಡು (ಕಟುನೀರಿನ್) ಶೆಂಗಟು ನೀರ್ ಹೂಗಳೊಡನೆ ಕೂಡಿದ (ಶೆಟುನೀರ್ ಕಡತ್ತು) ಸುಂದರವಾದ ನೀರು ತುಂಬಿದ ತಟಾಕದಲ್ಲಿ (ಮಾಟಿಹಿ) ಮುಳುಗಿ (ಮಣ್ ಏನ್ದಿ) ಕೊಂಬುಗಳಲ್ಲಿ ಮಣ್ಣನ್ನು ಹೊಂದಿರುತ್ತಿರುವ (ಇಳ ಮೇತಿಹಳ್) ಎಳೆಯ ಪ್ರಾಯದ ಎಮ್ಮೆಗಳು (ವೈಹುಂ) ದಡವನ್ನೇರಿ ಹೋಗದೆ ಆಲಸ್ಯದಿಂದ ನೀರಿನಲ್ಲೇ ಇರುತ್ತಿರುವಂಥ (ನಾನ್ಗೂರ್) ತಿರುನಾನ್ಗೂರಿನಲ್ಲಿರುವ (ಮಣಿಮಾಡ ಕ್ಕೋಯಿಲ್ ಎನ್ ಮನನೇ ವಣಂಗು) ಮಣಿಮಾಡಕ್ಕೋಯಿಲ್ ಕ್ಷೇತ್ರಕ್ಕೆ **ಹೋಗಿ, ಎಲೈ ನನ್ನ ಮನಸ್ಸೇ, ಸೇವಿಸಿ ನಮಿಸುವವನಾಗು.**

ಭಯಂವನ್ನುಂಟುಮಾಡುವುದೂ, ಜಾತ್ಯುಚಿತವಾದುದೂ ಆದ ದೊಡ್ಡ ಬಾಯಿಯುನ್ನುಳ್ಳ ಪೂತನಿಯಿಂದ ತಾನು ಸ್ವಲ್ಪವೂ ನೋವು ಪಡದೆ ಅವಳ ಉಣ್ಣಬಾರದ ವಿಷಸ್ತನ್ಯವನ್ನು ಅದಕ್ಕಾಶ್ರಯವಾದ ಪ್ರಾಣದೊಡನೆ ಹೀರಿ ಉಂಡ ಸ್ವಾಮಿ ಇರುತ್ತಿರುವ ದಿವ್ಯಕ್ಷೇತ್ರ ಇದು. ಆ ಕ್ಷೇತ್ರದಲ್ಲಿನ ಸಸ್ಯ ಸಮೃದ್ಧಿ, ಪಶುಸಮೃದ್ಧಿ ಮತ್ತು ಜಲಸಮೃದ್ಧಿಯನ್ನು ಉತ್ತರಾರ್ಧ ತಿಳಿಸುತ್ತದೆ. ಪುಷ್ಟವಾಗಿ, ಉದ್ದವಾಗಿ ರಸಮಯವಾಗಿ ಬೆಳೆದಿರುವ ಕಬ್ಬಿನ ಗರಿಗಳನ್ನು ತಮ್ಮ ಶಕ್ತಿಗೂ ಮೀರಿ ತಿಂದ ಎಮ್ಮೆಗಳು ಸಂಚರಿಸುವುದಕ್ಕಾಗದೆ ಅಲ್ಲೇ ಎಡ ಬಲಕ್ಕೆ ಹೊರಳಿ, ಬಾಯಾರಿ, ಆ ಉಷ್ಣವು ಹೋಗುವುದಕ್ಕಾಗಿ ಶೆಂಗಟುನೀರ್ ಹೂಗಳಿರುವ ತಟಾಕದಲ್ಲಿ ಮುಳುಗಿದ್ದು ಅಲ್ಲಿಂದ ಏಳುವುದಕ್ಕೂ ಆಗದೆ ಅಲ್ಲೇ ತಂಗಿ ಬಿದ್ದುಕೊಂಡಿರುವ ಕ್ಷೇತ್ರ ಇದು.

**ತಳ್ಳೈ ಕಟ್ಟು ಅವಿಟ್ ತಾಮರೈ ವೈಹು**
**ಪೊಯ್‌ಹೈ ತಡಂ ಪುಕ್ಕು ಅಡಂಗಾ ವಿಡಂಕಾಲ್ ಅರವಂ**
**ಇಳೈಕ್ಕ ತಿಳೈತ್ತಿಟ್ಟು ಅದನ್ ಉಚ್ಚಿ ತನ್ ಮೇಲ್**
**ಅಡಿವೈತ್ತ ಅಮ್ಮಾನ್ ಇಡಂ, ಮಾಮದಿಯಮರ್**
**ತಿಳೈಕ್ಕುಂ ಕೊಡಿ ಮಾಳಿಕೈಶೂಳ್‌ತೆರುವಿಲ್**
**ಶೆಟು ಮುತ್ತು ವೆಣ್ ನೆಕ್ಕಿರ್ ಎನಶೆನ್ರುಮುನ್ರಿಲ್**
**ವಳೈಕೈ ನುಳೈಪ್ಪಾವೈಯರ್ ಮಾರುಂ ನಾಙ್ಗೂರ್**
**ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ** ॥೭॥

(ತಳ್ಳೈ) ಇನ್ನೂ ಅರಳದೆ ಮೊಗ್ಗಾಗಿರುವ ತಾವರೆ ಹೂಗಳೂ, (ಕಟ್ಟು ಅವಿಟ್ ತಾಮರೈ) ದಳಬಿರಿದು ಅರಳಿರುವ ತಾವರೆ ಹೂಗಳೂ (ವೈಹಿ) ತಂಗಿರುವಂತಹ (ಪೊಯ್‌ಹೈತಡಂ ಪುಕ್ಕು) ಸರೋವರದ ಮಡುವಿನಲ್ಲಿ ಹೊಕ್ಕು (ಅಡಂಗಾ) ಯಾರಿಗೂ ಅಡಗದೆ ಅಲ್ಲಿ ಇರುತ್ತಿದ್ದ (ವಿಡಂ ಕಾಲ್) ವಿಷವನ್ನು ಕಕ್ಕುತ್ತಿದ್ದ (ಅರವಂ) ಕಾಳಿಂಗ ಸರ್ಪವು (ಇಳೈಕ್ಕ ತಿಳೈತ್ತಿಟ್ಟು) ಬಸವಳಿಯುವಂತೆ ಆಟ ಮಾಡಿ (ಅದನ್ ಉಚ್ಚಿ ತನ್ ಮೇಲ್) ಅದರ ತಲೆಯ ಮೇಲೆ (ಅಡಿವೈತ್ತ) ತನ್ನ ಶ್ರೀಪಾದವನ್ನಿಟ್ಟು ಅನುಗ್ರಹ ಮಾಡಿದ (ಅಮ್ಮಾನ್ ಇಡಂ) ಸರ್ವೇಶ್ವರನು ಇರುತ್ತಿರುವ ಸ್ಥಳವಾದುದೂ, (ವಳೈಕೈ) ಬಳೆಗಳನ್ನು ತೊಟ್ಟ ಕೈಗಳನ್ನುಳ್ಳ

(ನುಳ್ಳೈಪ್ಪಾಪ್ಪೈಯಂರ್) ಕುರತ್ತಿ ಸ್ತ್ರೀಯರುಗಳು (ಪಾಮುದಿಯುಂ ತಿಳೈಕ್ಕುಂ ಕೊಡಿಪಾಳಿಕ್ಕೈ ಶೂಟ್ ತೆರುವಿಲ್) ಚಂದ್ರನು ಆಟವಾಡುವುದಕ್ಕಾಗುವಂತೆ ಉನ್ನತವಾದ ಧ್ವಜಗಳನ್ನುಳ್ಳ ಪಾಳಿಗೆಗಳು ದಟ್ಟವಾಗಿರುತ್ತಿರುವ ಬೀದಿಯಲ್ಲಿ (ಶೆಟುಮುತ್ತು) 'ಶ್ರೇಷ್ಠವಾದ ಮುತ್ತುಗಳನ್ನು (ವೆಣ್ ನೆಕ್ಕ್ಯ ಎನ) ಬಿಳಿಯ ಬಟ್ಟೆಕ್ಕೆ ಕೊಡುತ್ತೇವೆ' ಎಂದುಕೊಂಡು (ಮುನ್ರಿಲ್) ಒಂದೊಂದು ಮನೆಯ ಮುಂಭಾಗದಲ್ಲಿಯೂ (ಶೆನ್ರುಪಾರುಂ) ಹೋಗಿ ಪಾರುತ್ತ ಇರು ವಂಥದೂ ಆದ (ನಾನ್ಗೂರ್) ತಿರುನಾನ್ಗೂರಿನಲ್ಲಿರುವ (ಮಣಿಮಾಡ ಕ್ಕೋಯಿಲ್ ಎನ್ ಮನನೇ ವಣಂಗು) ಮಣಿಮಾಡಕ್ಕೋಯಿಲ್ ಕ್ಷೇತ್ರವನ್ನು ನನ್ನ ಮನಸ್ಸೇ, ಹೋಗಿ ನಮಿಸುವವನಾಗು.

ಕಾಳಿಯ ಸರ್ಪನಿಂದ ಒದಗಿದ ಆಪತ್ತನ್ನು ಹೋಗಲಾಡಿಸಿ ರಕ್ಷಿಸಿದ ಸ್ವಾಮಿಯುಂ ಇರುವಂಥ ಮಣಿಮಾಡಕ್ಕೋಯಿಲ್ ಕ್ಷೇತ್ರವನ್ನು ಸೇರಿ ಸೇವಿಸು ಎಂದು ಮನಸ್ಸಿಗೆ ಇಲ್ಲಿ ಉಪದೇಶಿಸಿದ್ದಾರೆ. ಆ ಕ್ಷೇತ್ರದಲ್ಲಿ ಅಲಂಕೃತೆಯರಾದ ಕುರತ್ತಿ ಸ್ತ್ರೀಯರು ಮುತ್ತುಗಳನ್ನು ಮಾರಲು ಓಡಾಡುತ್ತಿರುತ್ತಾರಂತೆ. ಗೋಪಿಯರು ಮೊಸರು ಕಡೆದು ಬೆಣ್ಣೆಯನ್ನು ಮಾರುವಂತೆ. 'ಕೆಂಬಟ್ಟೆವೂ ಬೇಕಾಗಿಲ್ಲ, ಬಿಳಿ ಬಟ್ಟೆ ಸಾಕು' ಎನ್ನುವರಂತೆ ಅವರು. ಮುತ್ತುಗಳು ಸಮೃದ್ಧಿ ಯಾಗಿರುವುದರಿಂದ ಬಂದು ಕೊಳ್ಳುವವರಿಲ್ಲದ ಕಾರಣ ಇವರೇ ಮನೆ ಮನೆಯ ಮುಂದೆಯೂ ಹೋಗಿ ಮಾರುತ್ತಾರೆಯಂತೆ ಆ ಕ್ಷೇತ್ರದಲ್ಲಿ.

ತುಳ್ಳೈ ಆರ್ ಕರುಮೆನ್ ಕುಟಲ್ ಆಯ್ಚ್ಚಿಯರ್ ತಮ್
ತುಹಿಲ್ ವಾರಿಯುಮ್ ಶಿತ್ತಿಲ್ ಶಿತೈತ್ತುಮ್, ಮುತ್ತಾ
ಇಳ್ಳೈಯೊರ್ ವಿಳ್ಳೈಯೊಟ್ಟೊಡು ಕಾದಲ್ ವೆಳ್ಳಮ್
ವಿಳ್ಳೈವಿತ್ತ ಅಮ್ಮಾನಿಡಂ, ವೇಲ್ ನೆಡುಂಕಣ್
ಮುಳ್ಳೈವಾಳ್ ಎಯಿರು ಮಡವಾರ್ ಪಯಿತ್ತ
ಮೊಟಿ ಕೇಟ್ಟಿರುನ್ದು ಮುದಿರಾದ ಇನ್ ಶೊಲ್
ವಳ್ಳೈವಾಯ ಕಿಳ್ಳೈ ಮರೈ ಪಾಡುಂ ನಾನ್ಗೂರ್
ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ ॥೮॥

(ತುಳೈಆರ್ ಕರುಮೆನ್‌ಕುಚಿಲ್) ಗುಂಗುರು ಕೂದಲುಗಳು ತುಂಬಿರುವ ಕಪ್ಪಾಗಿಯೂ ಮೃದುವಾಗಿಯೂ ಇರುವ ತಲೆಗೂದಲನ್ನುಳ್ಳ (ಆಯ್‌ಚ್ಚಿಯರ್ ತವರ್) ಗೋಪಿಯರ (ತುಹಿಲ್) ವಸನಗಳನ್ನು (ವಾರಿಯುಮ್) ಅಪಹರಿಸಿಯೂ (ಶಿತ್ತಿಲ್ ಶಿದೈತ್ತುಮ್) ಅವರುಗಳು ಕಟ್ಟಿದ ನುಣ್ಣನೆಯ ಮರಳಿನ ಮನೆಗಳನ್ನು ಅಳಿಸಿಯೂ (ಮುತ್ತಾ ಇಳೈಯರಾರ್) ಇನ್ನೂ ಪ್ರಾಯ ಬೆಳೆದಿಲ್ಲವೆಂಬಂತಹ ಎಳೆಯ ಹೆಂಗಳೆಯರಿಗೆ (ವಿಳೈಯಾಟ್ಟೊಡು) ಲೀಲಾರಸ ದೊಡನೆ (ಕಾದಲ್‌ವೆಳ್ಳಮ್) ಪ್ರೇಮದ ಪ್ರವಾಹವನ್ನು (ವಿಳೈವಿತ್ತ ಅಮ್ಮಾನ್ ಇಡಂ) ಉಂಟುಮಾಡಿದ ಪರಮಾತ್ಮನು ಇರುವ ಸ್ಥಳವಾದುದೂ, (ಮುಂದಿರಾದ ಇಶೊಲ್) ಪರಿಪಕ್ವವಾಗದ ಮಧುರವಾದ ಮಾತನ್ನೂ (ವಳೈವಾಯ) ಬೆಳೆದ ಬಾಯಿಯನ್ನೂ ಉಳ್ಳ (ಕಿಳ್ಳೈ) ಗಿಳಿಗಳು (ವೇಲ್ ನೆಡು ಕಣ್ ಮುಳೈ ವಾಳ್ ಎಯಿರು ಮಡವಾರ್ ಪಯಿತ್ತು) ವೇಲಾಯುಧವನ್ನು ಹೋಲುವ ನೀಳವಾದ ಕಣ್ಣುಗಳನ್ನೂ ಹೊಳೆಯುವ ಪ್ರಕಾಶವನ್ನುಳ್ಳ ದಂತಪಂಕ್ತಿಯನ್ನುಳ್ಳ ವೈದಿಕ ಸ್ತ್ರೀಯರುಗಳು ಅಭ್ಯಾಸಮಾಡಿಸುವ (ಮೊಳಿ) ವೇದದ ನುಡಿಗಳನ್ನು (ಕೇಟ್ಟಿರುನ್ದು) ಕೇಳಿಕೊಂಡಿದ್ದು (ಮರೈಪಾಡಂ) ವೇದಪಾರಾಯಣವನ್ನು ಮಾಡುವಂತಹ (ನಾನ್ಗೂರ್) ತಿರುನಾನ್ಗೂರಿನಲ್ಲಿರುವ (ಮಣಿಮಾಡ ಕ್ಕೋಯಿಲ್ ಎನ್ ಮನನೇ ವಣಂಗು), ಮಣಿಮಾಡ ಕ್ಕೋಯಿಲ್ ಕ್ಷೇತ್ರವನ್ನು ಹೋಗಿ ಸೇರಿ, ಎಲೈ ಮನವೇ, ನಮಿಸಿ ಸೇವಿಸು.

'ಗೋಕುಲದಲ್ಲಿ ಹೆಂಗಳೆಯರೊಡನೆ ನಿರವಧಿಕವಾದ ಸಂಶ್ಲೇಷವನ್ನು ಹೊಂದಿದ ಶ್ರೀಕೃಷ್ಣನು ತಿರುಮಣಿಮಾಡ ಕ್ಕೋಯಿಲ್ ಕ್ಷೇತ್ರದಲ್ಲಿದ್ದಾನೆ. ಮನಸ್ಸೇ, ಅವನನ್ನು ಅಲ್ಲಿ ಹೋಗಿ ಸೇವಿಸು' ಎಂದು ಇಲ್ಲಿ ನಿರೂಪಿಸಿದ್ದಾರೆ.

**ವಿಡೈ ಓಡ ವೆನ್ರು ಆಯ್‌ಚ್ಚಿ ಮೆನ್‌ತೋಳ್ ನಯನ್ದ**
**ವಿಕಿರ್‌ತಾ, ವಿಳಂಗು ಶುಡರಾಳಿ ಎನ್ನುಮ್**
**ಪಡೈಯೊಡು ಶಂಗು ಒನ್ರು ಉಡೈಯಾಯ್ ಎನ ನಿನ್ರು**
**ಇಮೈಯೋರ್ ಪರವುಂ ಇಡಂ ಪೈನ್ದಡತ್ತು**
**ಪೆಡೈಯೊಡು ಶೆನ್‌ಕಾಲ ಅನ್ನಮ್ ತುಹೈಪ್ಪ**
**ತೊಕೈ ಪುಂಡರೀಕತ್ತಿಡೈ ಶೆಂಗಟುನೀರ್**

ಮಡ್ಡೈ ಓಡನಿನ್ರು ಮದು ವಿಮ್ಮು ನಾನ್ಗೂರ್
ಮಣಿಮಾಡಕ್ಕೋಯಿಲ್ ವಣಂಗು ಎನ್ ಮನನೇ ॥೯॥

(ವಿಡೈ ಓಡ) ಸಪ್ತ ವೃಷಭಗಳು ಭಂಗವನ್ನು ಹೊಂದುವಂತೆ (ವೆನ್ರು) ಅವುಗಳನ್ನು ಜಯಿಸಿ (ಆಯರ್‌ಚ್ಚಿ ಮೆನ್‌ತೋಳ್‌ನಯುನ್ದ) ನಪ್ಪಿನ್ನೈ ಪಿರಾಟ್ಟಿಯ ಮೃದುವಾದ ಭುಜಗಳನ್ನು ಸಂಶ್ಲೇಷಿಸಿದ (ವಿಕಿರ್‌ತಾ) ವಿಲಕ್ಷಣಪ್ರಭಾವನೇ, (ವಿಳಂಗುಶುಡರ್) ಬೆಳಗುವ ತೇಜಸ್ಸನ್ನುಳ್ಳ (ಆಟಿಎನ್ನುಮ್ ಪಡೈಯೊಡು) ಚಕ್ರಾಯುಧವನ್ನೂ (ಶಂಗು ಒನ್ರು) ಅನುಪಮವಾದ ಶಂಖವನ್ನೂ (ಉಡೈಯಾಯ್) ಧರಿಸಿಕೊಂಡಿರುವನೇ, (ಎನನಿನ್ರು) ಎಂದು ಹೇಳಿಕೊಂಡು (ಇಮೈಯೋರ್ ಪರಿವುಮ್ ಇಡಮ್) ದೇವತೆಗಳು ಸ್ತುತಿ ಮಾಡುವ ಸ್ಥಾನವಾದುದೂ, (ಪೈನ್ದಡತ್ತು) ಸುಂದರವಾದ ತಟಾಕದಲ್ಲಿ (ಶೆಮ್‌ಕಾಲ ಅನ್ನಂ) ಕೆಂಪಾದ ಕಾಲುಗಳನ್ನುಳ್ಳ ಹಂಸಪಕ್ಷಿಯು (ಪೆಡೈಯೊಡು ತುಹೈಪ್ಪ) ತನ್ನ ದಯಿತೆಯೊಡನೆ ಏರಿ ತುಳಿಯುವ ಮತ್ತು ಅದರಿಂದ ಸಂಮರ್ದಿತವಾದ (ತೊಹೈಪುಂಡರೀಕತ್ತಿಡೈ) ತಿರುಳನ್ನುಳ್ಳ ತಾವರೆ ಹೂಗಳಿಂದ ಪ್ರವಹಿಸುವ (ಮದು) ಮಕರಂದವು (ಶೆಂಗಟುನೀರ್ ಮಡ್ಡೈ ಓಡ ನಿನ್ರು ವಿಮ್ಮುಂ) ಶೆಂಗಟುನೀರ್ ಮಡಿಗಳಲ್ಲಿ ಹರಿದು ಹೋಗುವಂತೆ ಪ್ರವಹಿಸುವುದರಿಂದ ಅವು ಸಮೃದ್ಧವಾಗಿರುವ (ನಾನ್ಗೂರ್) ತಿರುನಾನ್ಗೂರ್ ಕ್ಷೇತ್ರದಲ್ಲಿರುವ (ಮಣಿಮಾಡಕ್ಕೋಯಿಲ್ ಎನ್ ಮನನೇ ವಣಂಗು) ಮಣಿಮಾಡಕ್ಕೋಯಿಲ್ ದಿವ್ಯ ಕ್ಷೇತ್ರವನ್ನು, ಎಲೈ ನನ್ನ ಮನಸ್ಸೇ, ಹೋಗಿ ನಮಿಸಿ ಸೇವಿಸು.

ನಪ್ಪಿನ್ನೈ ಪಿರಾಟ್ಟಿಯೊಡನೆ ಸಂಶ್ಲೇಷಕ್ಕೆ ಪ್ರತಿಬಂಧಕವಾಗಿದ್ದ ಏಳು ವೃಷಭಗಳನ್ನು ನಿರಸನ ಮಾಡಿದ ಮಹಾಪರಾಕ್ರಮಿ ಅವನು. ದಿವ್ಯಾಯುಧಗಳನ್ನು ಧರಿಸಿ ದೇದೀಪ್ಯಮಾನನಾಗಿ ಬೆಳಗುವನವನು. ಅಂಥ ಸ್ವಾಮಿ ಇರುತ್ತಿರುವ ದಿವ್ಯಕ್ಷೇತ್ರ ಮಣಿಮಾಡಕ್ಕೋಯಿಲ್. ಸುಂದರವಾದ ಸರೋವರಗಳಲ್ಲಿ ಹಂಸಗಳ ಪಾದನ್ಯಾಸದಿಂದ ಮಕರಂದವು ಸ್ರವಿಸುವ ತಾವರೆ ಹೂಗಳ ನಡುವೆ ಇರುವ ಶೆಂಗಟು ನೀರಿನ ಹೂಗಳ ಮಕರಂದವು ಪ್ರವಹಿಸುತ್ತಿರುವ ಸುಂದರಕ್ಷೇತ್ರ ಅದು.

ವಂಡು ಆರ್ ಪೊಟಿಲ್ ಶೊಟ್ನ್ದ್ ಅಟಿಹಾಯೆ ನಾನ್ಗೂರ್
ಮಣಿಮಾಡಕ್ಕೋಯಿಲ್ ನೆಡುಮಾಲುಕ್ಕು ಎನ್ರುಂ
ತೊಂಡು ಆಯ ತೊಲ್‌ಶೀರ್ ವಯಲ್ ಮಂಗೈಯರ್ ಕೋನ್
ಕಲಿಯನ್ ಒಲಿಶೆಯ್ದ ತಮಿಳ್‌ಮಾಲೈವಲ್ಲಾರ್
ಕಂಡಾರ್ ವಣಂಗ ಕಳಿಯಾನ್ಮೈಮೀದೇ
ಕಡಲ್ ಶೂಟ್‌ಉಲಹುಕ್ಕು ಒರು ಕಾವಲರ್ ಆಯ್
ವಿಣ್‌ತೋಯ್ ನೆಡು ವೆಣ್‌ಕುಡೈ ನಿಟಲಿನ್ ಕೀಟ್
ವಿರಿನೀರ್ ಉಲಹು ಆಂಡು ವಿರುಂಬುವರೇ ॥೧೦॥

(ವಂಡಂ ಆರ್ ಪೊಟಿಲ್ ಶೊಟ್ನ್ದ್ ಅಟಿಹಾಯಂ) ದುಂಬಿಗಳಿಂ ತುಂಬಿರುವ ತೋಟಗಳಿಂದ ಸುತ್ತುವರಿಯಲ್ಪಟ್ಟು ಸುಂದರವಾದ (ನಾನ್ಗೂರ್ ಮಣಿಮಾಡಕ್ಕೋಯಿಲ್ ನೆಡುಮಾಲುಕ್ಕು) ತಿರುನಾನ್ಗೂರಿನಲ್ಲಿರುವ ಮಣಿಮಾಡ ಕ್ಕೋಯಿಲಿನಲ್ಲಿ ಬಿಜಯಂ ಮಾಡಿರುವ ಸರ್ವೇಶ್ವರನಿಗೆ (ಎನ್ರುಂ ತೊಂಡುಂ ಆಯತೊಲ್‌ಶೀರ್) ನಿತ್ಯ ಕೈಂಕರ್ಯ ಮಾಡುವುದನ್ನೇ ಸಹಜವಾದ ಗುಣವನ್ನಾಗಿ ಉಳ್ಳವರೂ (ವಯಲ್ ಮಂಗೈಯರ್ ಕೋನ್) ಗದ್ದೆಗಳಿಂದ ಸುತ್ತುವರಿಯಲ್ಪಟ್ಟಿರುವ ಮಂಗೈ ನಾಡಿನಲ್ಲಿರುವವರಿಗೆ ನಾಯಕರಾದವರೂ ಆದ (ಕಲಿಯನ್ ಒಳಿಶೆಯ್ ತಮಿಳ್‌ಮಾಲೈ) ಕಲಿಯನ್ ಅವರು ಅನುಗ್ರಹಿಸಿದ ತಮಿಳಿನಲ್ಲಿರುವ ಈ ಸೂಕ್ತಿಗಳನ್ನು (ವಲ್ಲಾರ್) ಓದಬಲ್ಲವರು (ಕಂಡಾರ್ ವಣಂಗ) ಕಂಡವರೆಲ್ಲರೂ ಕಾಲಿಗೆ ಬೀಳುವಂತೆ (ಕಳಿಯಾನೈಮೀದೇ) ಮತ್ತ ಗಜದ ಮೇಲೇರಿರುತ್ತಿದ್ದು (ಕಡಲ್‌ಶೂಟ್ ಉಲಹುಕ್ಕು) ಸಮುದ್ರದಿಂದ ಸುತ್ತುವರಿಯಲ್ಪಟ್ಟ ಈ ಸಮಸ್ತ ಭೂಮಂಡಲಕ್ಕೂ (ಒರುಕಾವಲ್ ಆಯ್) ತಾವೇ ಸಮರಿಲ್ಲದ ಅರಸರಾಗಿ (ವಿಣ್‌ತೋಯ್ ನೆಡು ವೆಣ್‌ಕುಡೈ ನಿಟಲಿನ್ ಕೀಟ್) ಆಕಾಶದವರೆಗೆ ಉನ್ನತವಾಗಿರುವ ಶ್ವೇತಚ್ಛತ್ರದ ನೆರಳಿನಲ್ಲಿದ್ದು (ವಿರಿನೀರ್ ಉಲಹಂ ಆಂಡು) ಆವರಣ ಜಲವು ಸುತ್ತುವರಿದಿರುವ ಬ್ರಹ್ಮಾಂಡವನ್ನು ಆಳಿಕೊಂಡಿದ್ದು (ವಿರುಂಬುವರ್) ಆನಂದಭರಿತರಾಗುವರು.

ಈ ದಿವ್ಯ ಪ್ರಬಂಧವನ್ನು ಅಭ್ಯಾಸಮಾಡಿದವರಿಗೆ ಲಭಿಸುವ ಫಲವನ್ನು ಇಲ್ಲಿ ಹೇಳಿದೆ. ತೋಪು ಎಂಬ ಹೆಸರುಳ್ಳುದು ಆ ತೋಟ. ಆದರೆ ಎಲ್ಲೆಲ್ಲಿಯೂ

ದುಂಬಿಗಳಿಂದಲೇ ಆವೃತ್ತವಾಗಿರುವುದಂತೆ ಅದು. ದರ್ಶನೀಯವಾದ ಅಂಥ ಕ್ಷೇತ್ರದಲ್ಲಿ ಸರ್ವೇಶ್ವರನು ನಿತ್ಯ ವಾಸಮಾಡುವನು. ನಿತ್ಯ ಕೈಂಕರ್ಯದಲ್ಲಿ ಅಧಿಕರಿಸಿರುವ ಆಳ್ವಾರ್ ಅವರು ನಿರವಧಿಕವಾದ ಸಂಪತ್ತನ್ನುಳ್ಳವರಾಗಿದ್ದಾರೆ. ಇದನ್ನು ಅಭ್ಯಾಸಮಾಡುವವರು ಗಜಾರೋಹಣದ ಆನಂದ ಹೊಂದುವವರು. ಅನುಕೂಲರು ಪ್ರತಿಕೂಲರು ಎಂಬ ಭೇದವಿಲ್ಲದೆ ಲೋಕದವರೆಲ್ಲರೂ ಅವರ ಪಾದಗಳಲ್ಲಿ ನಮಿಸುವವರು, 'ಐಶ್ವರ್ಯವನ್ನು ಒಂದು ಪುರುಷಾರ್ಥವೆಂದು ಏಕೆ ಹೇಳಿದೆ ? ' —ಎಂದು ಭಟ್ಟರವರನ್ನು ಪ್ರಶ್ನೆ ಮಾಡಿದರಂತೆ. ಅದಕ್ಕೆ ಭಟ್ಟರವರು ಉತ್ತರಿಸಿದರಂತೆ—"ಈಶ್ವರನೇ ಆದರೂ ಒಮ್ಮೆ ಅವತರಿಸಿ ಅಭಿಷೇಕ ಮಾಡಿಕೊಂಡಾನು, ಅದನ್ನು ಭಾಗವತಶೇಷವನ್ನಾಗಿ ಮಾಡುವುದ ಕ್ಕಾದ ಪಕ್ಷದಲ್ಲಿ—ಎಂಬುದು ತಿರುಮಂಗೈ ಆಳ್ವಾರ್ ಅವರ ಭಾವವೆಂದು ತೋರುವುದು"—ಎಂದು. ಅಂಥ ಭಕ್ತರು ಭಾಗವತ ಕೈಂಕರ್ಯೋಪಯೋಗಿ ಯಾದ ಮಂಡಲಾದಿಪತ್ಯವನ್ನು ಬೇಡವೆಂದು ಎಂದಾದರೂ ಹೇಳಿಯಾರೋ ?

---

ಮೂರನೆಯ ಪತ್ತು—ಒಂಭತ್ತನೆಯ ತಿರುಮೊಳಿ

## 'ಶಲಂಕೊಂಡ'

### ಪ್ರವೇಶ

ಅಭಿಮತವಾದ ವಿಷಯವನ್ನು ಅನುಭವಿಸುವಾಗ ಅದರ ಅವಯವ ಗಳಲ್ಲಿಯೂ ಅನುಭವ ಬೆಳೆಯುತ್ತದೆಯಷ್ಟೇ ? ಹಾಗೆ ಆ ಕ್ಷೇತ್ರದಲ್ಲಿರುವು ದೆಲ್ಲಾ ಉದ್ದೇಶ್ಯವಾಗುತ್ತದೆ. ಆಪತ್ಸಖನೂ, ಸರ್ವಜಗದ್ರಕ್ಷಕನೂ ಆದ ಸರ್ವೇಶ್ವರನು 'ಇದು ಇವರನ್ನು ರಕ್ಷಿಸಲು ಯೋಗ್ಯವಾದ ದೇಶ'—ಎಂದು ಬಂದು ಒಲಿದಿರುವ ದೇಶ ಈ ದಿವ್ಯಕ್ಷೇತ್ರ. ಅಲ್ಲಿರುವ ಪಶುಪಕ್ಷಿಗಳೂ ಸಹ, ಮುಕ್ತರು ಭಗವದನುಭಾವದಿಂದ ನಲಿಯುವಂತೆ, ನಲಿದಾಡುವ ದೇಶ ಇದು, 'ನೀನೂ ಈ ದೇಶವನ್ನು ಬಯಸಿ ಹೋಗಿ ಸೇರು'—ಎಂದು ಮನಸ್ಸಿಗೆ ಆಳ್ವಾರ್ ಅವರು ಹೇಳುತ್ತಾರೆ ಈ ದಶಕದಲ್ಲಿ.

ಶಲಂಕೊಂಡ ಇರಣಿಯನದು ಅಹಲ್ ಮಾರ್ವಂ ಕೀಂಡು
ತಡಂಗಡಲ್ಲೈ ಕಡೈಂದು ಅಮುದಮ್ ಕೊಂಡು ಉಹಂದಕಾಳೈ
ನಲಂಗೊಂಡ ಕರುಮುಹಿಲ್ ಪೋಲ್ ತಿರುಮೇನಿ ಅಮ್ಮಾನ್
ನಾಳ್ ತೋರುಂ ಮಹಿೞ್ನ್ದು ಇನಿದು ಮರುವಿ ಉರೈ
ಕೋಯಿಲ್

ಶಲಂಕೊಂಡು ಮಲರ್ ಶೊರಿಯುಂ ಮಲ್ಲಿಕೈ ಒಣ್ ಶೆರುಂದಿ
ಶೆಣ್ಬಕಂಗಳ್ ಮಣನಾರುಮ್ ವಣ್ ಪೊೞಿಲಿನೂಡೆ
ವಲಂಕೊಂಡು ಕಯಲ್ ಓಡಿ ವಿಳೈಯಾಡುಂ
ನಾಂಗೂರ್ ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ ॥೧॥

(ಶಲಂಕೊಂಡ) ಭಗವದ್ವಿರೋಧದ ಛಲವನ್ನು ಸಾಧಿಸಿದ (ಇರಣಿಯನದು ಅಹಲ್ ಮಾರ್ವಮ್) ಹಿರಣ್ಯಕಶಿಪುವಿನ ವಿಶಾಲವಾದ ಎದೆಯನ್ನು (ಕೀಂಡು) ಸೀಳಿ ಹಾಕಿದವನೂ, (ತಡಂಗಡಲ್ಲೈ ಕಡಂದು) ದೊಡ್ಡ ಸಮುದ್ರವನ್ನು ಕಡೆದು (ಅಮುದಂ ಕೊಂಡು ಉಹಂದ) ಅಲ್ಲಿ ಬಂದ ಅಮೃತವನ್ನು ದೇವತೆಗಳಿಗಾಗಿ ಎತ್ತಿಕೊಟ್ಟು ನಲಿದವನೂ, (ಕಾಳೈ) ನಿತ್ಯಯುವಕನೂ, (ನಲಂಕೊಂಡ ಕರುಮುಹಿಲ್ ಪೋಲ್ ತಿರುಮೇನಿ) ಸುಂದರವಾದ ನೀಲಮೇಘವನ್ನು ಹೋಲುವ ದಿವ್ಯ ಮಂಗಳ ವಿಗ್ರಹವುಳ್ಳವನೂ ಆದ (ಅಮ್ಮಾನ್) ನಮ್ಮ ಸ್ವಾಮಿಯು (ನಾಳ್ ತೋರುಂ) ಯಾವಾಗಲೂ (ಮಹಿೞ್ನ್ದು) ಸಂತೋಷಿಸಿ (ಇನಿದು ಮರುವಿ ಉರೈಕೋಯಿಲ್) ಭೋಗ್ಯವಾಗಿ ಹೊಂದಿಕೊಂಡು ಇರುತ್ತಿರುವ ಸ್ಥಳವಾದುದೂ, (ಶಲಂಕೊಂಡು) ತಣ್ಣೀರನ್ನು ಹೀರಿಕೊಂಡು (ಮಲರ್ ಶೊರಿಯುಂ) ಹೂಗಳನ್ನು ಸಮೃದ್ಧಿಯಾಗಿ ಬಿಡುವ (ಒಣ್ ಮಲ್ಲಿಕೈ ಶೆರುಂದಿ ಶಣ್ಬಕಂಗಳ್) ಸುಂದರವಾದ ಮಲ್ಲಿಗೆ ಬಳ್ಳಿಗಳೂ ಸುರಹೊನ್ನೆಮರಗಳೂ ಚಂಪಕ ವೃಕ್ಷಗಳೂ (ಮಣಂನಾರುಂ) ಪರಿಮಳವನ್ನು ಹರಡುತ್ತಿರುವುದೂ, (ವಣ್ ಪೊೞಿಲಿನೂಡೆ) ಸುಂದರವಾದ ಗದ್ದೆಗಳೊಳಗೆ (ಕಯಲ್ ಓಡಿ ವಲಂಕೊಂಡು ವಿಳೈಯಾಡುಂ) ಮೀನಗಳು ಓಡಿ ನಲಿದು ಆಟವಾಡುತ್ತಿರುವುದೂ ಆದ (ನಾಂಗೂರ್) ತಿರುನಾಂಗೂರಲ್ಲಿರುವ (ವೈಹುಂದ ವಿಣ್ಣಹರಂ) ವೈಹುಂದ ವಿಣ್ಣಹರವೆಂಬುವ ದಿವ್ಯಕ್ಷೇತ್ರವನ್ನು (ಮಡನೆಂಜೇ ವಣಂಗು) ಎಲೈ ಒಳ್ಳೆಯ ಮನಸ್ಸೇ, ನಮಿಸು.

ಭಗವನ್ನಾಮಂಪವನ್ನೂ ಭಗವಂತನ ಹಿರಿಮೆಯನ್ನೂ ಹೇಳುವ ಮಾತ್ರಕ್ಕೇ ಅವರನ್ನು ವಧಿಸುವ ಛಲವನ್ನು ಮಾಡಿದ ಹಿರಣ್ಯಕಶಿಪು. ಅಂಥ ಆಸುರ ಸ್ವಭಾವವನ್ನುಳ್ಳ ಹಿರಣ್ಯ ವರಬಲದಿಂದ ಪಡೆದುಕೊಂಡಿದ್ದ ದೃಢವಾದ ಮತ್ತು ಬಲಿಷ್ಠವಾದ ಎದೆಯನ್ನು ಸ್ವಾಮಿ ಶ್ರೀನೃಸಿಂಹನಾಗಿ ಅನಾಯಾಸದಿಂದ ಸೀಳಿ ಹಾಕಿದ. ಒಬ್ಬರಿಂದಲೂ ಪರಿಚ್ಛೇದಿಸುವುದಕ್ಕಾಗದ ಕಡಲನ್ನು ಒಂದು ಕ್ಷುದ್ರಪದಾರ್ಥವನ್ನು ಹೇಗೋ ಹಾಗೆ ಪರಿಚ್ಛೇದಿಸಿ ಅದನ್ನು ಮಥಿಸಿ ಅಲ್ಲಿಬಂದ ಅಮೃತವನ್ನು ತನ್ನನ್ನು ಆಶ್ರಯಿಸಿದ ದೇವತೆಗಳಿಗೆ ಕೊಟ್ಟು ಅವರುಗಳಿಗೆ ಬರುವ ಸಂತೋಷವನ್ನು ತಾನೂ ಹೊಂದಿದನವನು. ಶ್ರಮಹರವಾಗಿರುವ ಮೇಘದಂತೆ ಇರುವ ದಿವ್ಯರೂಪಹೊಂದಿ 'ಇವನೇ ಸರ್ವೇಶ್ವರ' ಎನ್ನುವಂತೆ ತೋರುವನವನು. ಇಂಥ ಸ್ವಾಮಿ ಬಹಳ ಹರ್ಷದಿಂದ ಇರುತ್ತಿರುವ ಈ ಕ್ಷೇತ್ರ ಆಶ್ರಿತರಿಗೆ ಬಹಳ ಪ್ರಿಯವಾಗಿದೆ. ಆ ಕ್ಷೇತ್ರದ ಭೋಗ್ಯತೆಯನ್ನು ಅಲ್ಲಿನ ಪುಷ್ಪವೃಕ್ಷಗಳು ತೋರುತ್ತಿವೆ. ರಾಶಿರಾಶಿಯಾಗಿ ಹೂಗಳನ್ನು ಬಿಡುವುವು ಅವು. ಅವುಗಳ ಸುಗಂಧ ಎಲ್ಲವನ್ನೂ ವ್ಯಾಪಿಸಿರುವುದು. ಅಲ್ಲಿನ ಗದ್ದೆಗಳಲ್ಲಿ ನಲಿನಲಿದು ಚಿಮ್ಮುವ ಪಂಕ್ತಿಗಳು ಭಗವದನುಭವವನ್ನು ಮಾಡಿ 'ಅಹಮನ್ನಂ ಅಹಮನ್ನಂ' ಎಂದು ನಲಿಯುವ ದಿವ್ಯಸೂರಿಗಳ ಹಾಗೆ ಬೆಳಗಿವೆ. ಇಂಥ ನಾನ್ಗೂರು ಕ್ಷೇತ್ರದಲ್ಲಿರುವ ವೈಕುಂದ ವಿಣ್ಣಹರವನ್ನು ಆಶ್ರಯಿಸು ಎಂದು ಮನಸ್ಸಿಗೆ ಹೇಳುತ್ತಿದ್ದಾರೆ.

ತಿಣ್ಣಿಯದು ಓರ್ ಅರಿಉರುವಾಯ್ ತಿಶೈಅನೈತ್ತುಮ್
ನಡುಂಗ
ತೇವರೊಡು ತಾನವರ್‌ಹಳ್ ತಿಶೈಪ್ಪ ಇರಣಿಯನೈ
ನಣ್ಣಿ ಅವನ್ ಮಾರ್‌ವು ಅಹಲತ್ತು ಉಹಿರ್ ಮಡುತ್ತನಾತನ್
ನಾಳ್‌ತೋರುಂ ಮಹಿಬ್‌ನ್ದು ಇನಿದು ಮರುವಿ
ಉರೈಕೋಯಿಲ್
ಎಣ್ಣಿಲ್ ಮಿಹು ಪೆರುಂ ಶೆಲ್ವತ್ತು ಎಬಿಲ್ ವಿಳಂಗುಂ
ಮರೈಯವರ್
ಏಬಿಶೈಯವರ್ ಕೇಳ್ವಿಹಳುಂ ಇಯನ್ರ ಪೆರುಂ ಗುಣತ್ತೋರ್

**ಮಣ್ಣಿಲ್ ಮಿಹು ಮಱೈಯವರ್‌ಹಳ್ ಮಲಿವು ಎಯ್‌ದು**
**ನಾಂಗೂರ್ ವೈಹುಂದ ವಿಣ್ಣ ಹರಂ ವಣಂಗು ಮಡನೆಂಜೇ ॥೨॥**

(ತಿಶೈ ಅನೈತ್ತುಂ ನಡುಂಗ) ಎಲ್ಲ ದಿಕ್ಕುಗಳಲ್ಲಿ ಇರುವವರು ಹೆದರಿ ನಡುಗು ವಂತೆಯೂ, (ತೇವರೊಡು ತಾನವರ್‌ಹಳ್ ತಿಶೈಪ್ಪ) ದೇವತೆಗಳೂ ದಾನ ವರೂ ಭಯಪಡುವಂತೆಯೂ (ತಿಣ್ಣಿಯದು ಓರ್ ಅರಿಉರುವಾಯ್) ಅಪಾರವಾದ ಬಲವನ್ನುಳ್ಳ ನರಸಿಂಹರೂಪಿಯಾಗಿ (ಇರಣಿಯನೈ ನಣ್ಣಿ) ಹಿರಣ್ಯಕಶಿಪುವನ್ನು ಸಮೀಪಿಸಿ (ಅವನ್ ಪಾರ್ವು ಅಹಲತ್ತು ಉಹಿರ್ ಮಡುತ್ತನಾತನ್) ಅವನ ವಿಶಾಲವಾದ ವಕ್ಷಃ ಸ್ಥಲದಲ್ಲಿ ತನ್ನ ನಖಗಳನ್ನು ನೆಟ್ಟು ಅವನನ್ನು ಸೀಳಿ ಬಿಸುಟ ನಮ್ಮ ಸ್ವಾಮಿಯು (ನಾಳ್ ತೋರುಂ ಮಹಿಟ್‌ನ್ದು ಇನಿದು ಉಱೈಕೋಯಿಲ್) ಯಾವಾಗಲೂ ಸಂತೋಷಿಸಿ ಭೋಗ್ಯವಾಗಿ ಹೊಂದಿಕೊಂಡು ಇರುತ್ತಿರುವ ದಿವ್ಯಕ್ಷೇತ್ರವಾದುದೂ, (ಎಣ್ಣಿಲ್ ಮಿಹು) ಎಣಿಸುವುದಕ್ಕಾಗದಷ್ಟು ಅಗಿರುವ (ಪೆರುಶೆಲ್‌ವತ್ತು) ನಿದೋಷತ್ವ ಮೊದಲಾದ ಹಿರಿಯ ಸಿರಿಯೊಡನೆ ಕೂಡಿ (ಎಟ್ಟಿಲ್ ವಿಳಂಗುಂ) ಉಜ್ವಲವಾಗಿ ಪ್ರಕಾಶಿಸುತ್ತಿರುವ (ಮಱೈಯುಂ) ವೇದಗಳೂ (ಏಟು ಇಶೈಯುಂ) ಸಪ್ತಸ್ವರಗಳೂ, (ಕೇಳ್ವಿಹಳುಂ) ವೇದಾರ್ಥ ಶ್ರವಣಗಳೂ (ಇಯನ್ರು) ಹೊಂದಿಕೊಂಡಿರತಕ್ಕ (ಪೆರು ಗುಣತ್ತೋರ್) ಮಹಾಗುಣಶಾಲಿ ಗಳಾದ (ಮಣ್ಣಿಲ್ ಮಿಹು ಮಱೈಯವರ್‌ಹಳ್) ಭೂಮಿಯ ಮೇಲೆ ಪ್ರಖ್ಯಾತರಾದ ವೈದಿಕ ಬ್ರಾಹ್ಮಣರುಗಳು (ಮಲಿವು ಎಯ್‌ದು) ಸಾಂದ್ರವಾಗಿ ವಾಸಿಸುತ್ತಿರುವ (ನಾನ್ಗೂರ್) ತಿರುನಾಂಗೂರಿನಲ್ಲಿರುವ (ವೈಹುಂದ ವಿಣ್ಣ ಹರಂ ಮಡನೆಂಜೇ ವಣಂಗು) ವೈಹುಂದ ವಿಣ್ಣಹರವೆನ್ನುವ ದಿವ್ಯಕ್ಷೇತ್ರವನ್ನು, ಎಲೈ ಮನಸ್ಸೇ, ಸೇವಿಸು.

ಹಿರಣ್ಯನ ಅಸುರ ತೇಜಸ್ಸೆಲ್ಲವನ್ನೂ ಅಭಿಭವಿಸುವ ಸಾಮರ್ಥ್ಯವನ್ನು ಹೊಂದಿದ ಅದ್ವಿತೀಯ ನೃಸಿಂಹನಾಗಿ ಸ್ವಾಮಿ ತೋರಿಕೊಂಡನು. ಎಂಟೂ ದಿಕ್ಕುಗಳಲ್ಲಿರುವವರು ನಡುಗುವಂತೆ ಪರಾಡಿದವನು ಅವನು. ದೇವತೆಗಳಂತೆ ದಾನವರೂ ವಿಸ್ಮಯಪಡುವಂತೆ ಹಿರಣ್ಯಕಶಿಪುವನ್ನು ಹಿಡಿದುಕೊಂಡು ಅವನ ವಿಶಾಲವಾದ ಎದೆಯನ್ನು ತನ್ನ ನಖಾಗ್ರಗಳಿಂದ ಸೀಳಿ ತನ್ನ ಜಗನ್ನಾಥತ್ವವನ್ನು ಪ್ರಕಾಶಗೊಳಿಸುತ್ತಾ ಮೆರೆದನವನು. ಅಂಥ ಸ್ವಾಮಿ ಈ ಕ್ಷೇತ್ರದಲ್ಲಿ ನಿತ್ಯವಾಸ

ಮಾಡುತ್ತಿದ್ದಾನೆ ಭಕ್ತರೆಲ್ಲರೂ ನಲಿದು ಸಂತೋಷಪಡುವಂತೆ. ಈ ಕ್ಷೇತ್ರದಲ್ಲಿ ನೆಲೆಸಿರುವ ಬ್ರಾಹ್ಮಣೋತ್ತಮರು ತೇಜಿಷ್ಠವಾಗಿ ಬೆಳಗುವ ವೇದವನ್ನೂ ಸಪ್ತ ಸ್ವರಗಳನ್ನೂ ವೇದಾಂಗಗಳನ್ನೂ ಅಭ್ಯಸಿಸಿ ಮಹತ್ತರವಾದ ಆತ್ಮಗುಣ ಗಳನ್ನುಳ್ಳವರಾಗಿದ್ದಾರೆ. ವೈಕುಂಠಕ್ಕೆ ಸಮಾನವಾದ ವೈಹುಂದ ವಿಣ್ಣಹರ ಇಂಥ ಹಿರಿಮೆಯ ತಿರುನಾಂಗೂರು ಕ್ಷೇತ್ರದಲ್ಲಿ ಶೋಭಿಸುತ್ತಿದೆ. ಆ ಕ್ಷೇತ್ರ ವನ್ನು ಸೇವಿಸಲು ಮನಸ್ಸಿಗೆ ಉಪದೇಶಿಸಿದ್ದಾರೆ.

ಅಂಡಮುಂ ಇವ್ವಲೈಕಡಲುಂ ಅವನಿಹಳುಂ ಎಲ್ಲಾಂ
ಅಮುದುಶೆಯ್‌ದ ತಿರುವಯಿತ್ತನ್ ಅರನ್‌ಕೊಂಡು
ತಿರಿಯುಮ್
ಮುಂಡಂ ಅದು ನಿರೈತ್ತು ಅವನ್ ಕಣ್ ಶಾಪಮ್
ಅದುನೀಕ್ಕುಂ
ಮುದಲ್‌ವನ್ ಅವನ್ ಮಹಿೞ್‌ನ್ದು ಇನಿದು ಮರುವಿ
ಉರೈಕೋಯಿಲ್
ಎಣ್‌ತಿಶೈಯುಮ್ ಪೆರುಶೆನ್ನೆಲ್ ಇಳನ್‌ತೆಂಗು ಕದಲಿ
ಇಲೈಕ್ಕೊಡಿ ಒಣ್ ಕುಲೈಕಮುಕೋಡು ಇಶಲಿ ವಳಂಶೊರಿಯ
ವಂಡು ಪಲ ಇಶೈಪಾಡ ಮಯಿಲ್ ಆಲುಮ್
ನಾನ್ಗೂರ್ ವೈಹುಂದವಿಣ್ಣಹರಂ ವಣಂಗು ಮಡನೆಂಜೇ ॥೩॥

(ಅಂಡಮುಂ) ಅಂಡಗಳನ್ನೂ (ಇ ಅಲೈಕಡಲುಂ) ಅಲೆಗಳೇಳುತ್ತಿರುವ ಈ ಸಮುದ್ರಗಳನ್ನೂ (ಅವನಿಹಳುಂ ಎಲ್ಲಾಂ) ಭೂಮಿಗಳು ಮೊದಲಾದ ವೆಲ್ಲವನ್ನೂ (ಅಮುದು ಶೆಯ್‌ದ) ಪ್ರಲಯಕಾಲದಲ್ಲಿ ಭುಜಿಸಿದ (ತಿರು ವಯಿತ್ತನ್) ಉದರವನ್ನುಳ್ಳವನೂ, (ಅರನ್‌ಕೊಂಡು ತಿರಿಯುಮ್ ಮುಂಡಂ ಅದು ನಿರೈತ್ತು) ರುದ್ರನು ತನ್ನ ಕೈಯ್ಯಲ್ಲಿ ಹಿಡಿದುಕೊಂಡು ತಿರಿಯುತ್ತಿದ್ದ ಕಪಾಲವು ತುಂಬುವಂತೆ ಮಾಡಿ (ಅವನ್ ಕಣ್ ಶಾಪಂ ಅದು ನೀಕ್ಕುಂ) ಅವನಿಗುಂಟಾಗಿದ್ದ ಬ್ರಹ್ಮಹತ್ಯಾ ಶಾಪವನ್ನು ಹೋಗಲಾಡಿಸಿದವನೂ, (ಮುದಲ್‌ವನ್ ಅವನ್) ಜಗತ್ಕಾರಣ ಭೂತನಾದ ಸರ್ವೇಶ್ವರನೂ–ಆದವನು

(ಮಹಿಟ್‌ನ್ನು ಇನಿದು ಮರುವಿ ಉರೈಕೋಯಿಲ್) ಸಂತೋಷದಿಂದ ಹೊಂದಿ ಕೊಂಡು ನೆಲಸಿರುವ ದಿವ್ಯಕ್ಷೇತ್ರವಾದುದೂ, (ಎಣ್‌ತಿಶೈಯುಮ್) ಎಲ್ಲ ದಿಕ್ಕುಗಳಲ್ಲಿಯೂ (ಪೆರುಶೆನ್ನೆಲ್) ಎತ್ತರವಾದ ಕೆಂಭತ್ತದ ಪೈರುಗಳೂ (ಇಳ ತೆಂಗು) ಎಳೆಯ ತೆಂಗಿನ ಮರಗಳೂ (ಕದಲಿ) ಬಾಳೆಗಿಡಗಳೂ (ಇಲೈ ಕೊಡಿ) ವಿಳ್ಳೇದೆಲೆಯ ಬಳ್ಳಿಗಳೂ(ಒಣ್ ಕುಲೈಕಮುಕೋಡು)ಒಳ್ಳೆಯ ಗೊನೆಗಳನ್ನುಳ್ಳ ಅಡಿಕೆ ಮರಗಳೂ (ಇಶಲಿ) ಒಂದರೊಡನೊಂದು ತಾಗಿಕೊಂಡು (ವಳಂ ಶೊರಿಯ) ಚೆನ್ನಾಗಿ ಸೇರಿ ಬೆಳೆಯುತ್ತಿರುವಂಥದೂ, (ವಂಡು ಪಲ ಇಶೈ ಪಾಡ) ದುಂಬಿಗಳು ಹಲವು ಬಗೆಯ ರಾಗಗಳನ್ನು ಹಾಡುತ್ತಿರುವಂಥದೂ, (ಮಯಿಲ್ ಆಲುವ್) ನವಿಲುಗಳು ನರ್ತಿಸುತ್ತಿರುವಂಥದೂ ಆದ (ನಾನ್ಗೂರ್) ನಾನ್ಗೂರ್ ಕ್ಷೇತ್ರದಲ್ಲಿರುವ (ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ) ವೈಹುಂದ ವಿಣ್ಣಹರಂ ಕ್ಷೇತ್ರವನ್ನು, ಎಲೈ ಮನಸ್ಸೇ, ಸೇವಿಸು.

ಮಹಾಪ್ರಲಯದಲ್ಲಿ ಅಂಡಗಳನ್ನೂ, ಈ ಲೋಕವನ್ನು ಬಳಸಿ ಅಲೆಗಳಿಂದ ಉಕ್ಕುತ್ತಿರುವ ಸಪ್ತಸಮುದ್ರಗಳನ್ನೂ, ಸಪ್ತದ್ವೀಪಗಳನ್ನೂ ಭುಜಿಸಿ ತನ್ನ ಹೊಟ್ಟೆಯೊಳಗಿಟ್ಟು ಕಾಪಾಡಿದವನೂ, ಶಾಪದಿಂದ ಉಪಹತನಾದ ರುದ್ರನ ಕೈಯ್ಯಲ್ಲಿ ಅಂಟಿಕೊಂಡಿದ್ದ ಬ್ರಹ್ಮಕಪಾಲವು ಒಡೆದು ಬೀಳುವಂತೆ ತನ್ನ ಪಾರ್ಶ್ವದಿಂದ ನಿಸ್ಸೃತವಾದ ರಕ್ತಧಾರೆಯಿಂದ ಅದು ತುಂಬುವಂತೆ ಮಾಡಿ ಅವನ ಶಾಪವನ್ನು ಹೋಗಲಾಡಿಸಿದವನೂ ಆದ ಸರ್ವನಿಯಾಮಕನು ನಿತ್ಯ ವಾಸಮಾಡುತ್ತಿರುವ ದಿವ್ಯಕ್ಷೇತ್ರ ಇದು. ಈ ಕ್ಷೇತ್ರದ ಸಮೃದ್ಧಿ ವರ್ಣನಾತೀತ. ಎಲ್ಲಿ ನೋಡಿದರಲ್ಲಿ ಕೆಂಭತ್ತದ ಪಯಿರುಗಳು, ಮುಕ್ತರು ಇಪ್ಪತ್ತೈದು ವರ್ಷದ ಯುವಕರಾಗಿರುವಂತಿರುವ ಎಳೆಯ ತೆಂಗುಗಳು, ವಿಳ್ಳೇದೆಲೆ ಬಳ್ಳಿಗಳು, ಗೊನೆಗಳಿಂದ ತೂಗಿ ತೊನೆಯುವ ಅಡಿಕೆಯ ಮರಗಳು, ಇವುಗಳಲ್ಲಿ ಹೊಕ್ಕು ಮಧುಪಾನಮಾಡಿ ಮತ್ತರಾದ ಭೃಂಗಗಳು ಅನೇಕ ರೀತಿಗಳಲ್ಲಿ ಹಾಡುವ ಗಾನಗಳು, ಆ ಗಾನಗಳನ್ನು ಕೇಳಿ ಆಡುವ ನವಿಲುಗಳು ಇವುಗಳಿಂದ ಸುಂದರವಾಗಿದೆ ಆ ನಾನ್ಗೂರ್ ಕ್ಷೇತ್ರ. ಅಲ್ಲಿರುವ ವೈಹುಂದ ವಿಣ್ಣಹರವನ್ನು ಸೇವಿಸೆಂದು ಮನಸ್ಸಿಗೆ ಹೇಳುತ್ತಿದ್ದಾರೆ.

ಕಲ್ಲೈ ಇಲಂಗುಂ ಅಹಲ್ ಅಲ್ಕುಲ್ ಅರಕ್ಕರ್
ಕುಲಕ್ಕೊಡಿಯೈ
ಕಾದೋಡುಮೂಕ್ಕು ಉಡನ್ ಅರಿಯ ಕದರಿ ಅವಳೋಡಿ
ತಲ್ಲೈಯಿಲ್ ಅಂಗೈವೈತ್ತು ಮಲ್ಲೈ ಇಲಂಗೈ ಪುಹಶೆಯ್ದ
ತಡನ್ತೋಳನ್ ಮಹಿೞ್ನ್ದು ಇನಿದು ಮರುವಿ
ಉರೈಕೋಯಿಲ್
ಶಿಲ್ಲೈ ಇಲಂಗು ಮಣಿಮಾಡತ್ತು ಉಚ್ಚಿಮಿಶೈ ಶೂಲಮ್
ಶೆರುಕೊಂಡಲ್ ಅಹಡು ಇರಿಯ ಶೊರಿಂದ ಶೆೞುಮುತ್ತಮ್
ಮಲ್ಲೈ ಇಲಂಗು ಮಾಳಿಹೈಮೇಲ್ ಮಲಿವು ಎಯ್ದು
ನಾಂಗೂರ್ ವೈಹುಂದವಿಣ್ಣಹರಂ ವಣಂಗು ಮಡನೆಂಜೇ ॥೪॥

(ಕಲ್ಲೈಇಲಂಗುಂ) ಚೆಲುವಾದ ಸೀರೆಯಿಂದ ಬೆಳಗುವ (ಅಹಲ್ ಅಲ್ಕುಲ್) ವಿಶಾಲವಾದ ನಿತಂಬ ಪ್ರದೇಶವನ್ನುಳ್ಳ (ಅರಕ್ಕರ್ ಕುಲಕ್ಕೊಡಿಯೈ) ರಾಕ್ಷಸ ಕುಲದ ಬಳ್ಳಿಯಂತಿದ್ದ ಶೂರ್ಪಣಖಿಯ (ಕಾದೋಡು ಮೂಕ್ಕು) ಕಿವಿಯನ್ನೂ ಮೂಗನ್ನೂ (ಉಡನ್ ಅರಿಯ) ಒಡನೆ ಕತ್ತರಿಸಲು (ಅವಳ್ ಕದರಿ ತಲ್ಲೈಯಿಲ್ ಅಂಗೈವೈತ್ತು) ಆ ರಾಕ್ಷಸಿ ಆಕ್ರಂದಿಸಿ ತನ್ನ ತಲೆಯ ಮೇಲೆ ಅಂಗೈಯನ್ನಿಟ್ಟು ಕೊಂಡು (ಮಲ್ಲೈ ಇಲಂಗೈ ಓಡಿಪುಹ) ಪರ್ವತದ ಮೇಲಿದ್ದ ಲಂಕೆಗೆ ಓಡಿಹೋಗಿ ಅಳುವಂತೆ (ಶೈಯ್ದ ತಡನ್ತೋಳನ್) ಮಾಡಿದ ಮಹಾಬಾಹುವಾದ ಭಗವಂತನು (ಮಹಿೞ್ನ್ದು ಇನಿದು ಮರುವಿ ಉರೈಕೋಯಿಲ್) ಸಂತೋಷದಿಂದ ನಿತ್ಯ ವಾಸಮಾಡುತ್ತಿರುವ ದಿವ್ಯಕ್ಷೇತ್ರವಾದುದೂ (ಶಿಲ್ಲೈ ಇಲಂಗು) ಪ್ರಕಾಶವನ್ನು ಚೆಲ್ಲುತ್ತಿರುವ (ಮಣಿ ಮಾಡತ್ತು ಉಚ್ಚಿ ಮಿಶೈ) ರತ್ನಗಳನ್ನು ಕೆತ್ತಿರುವ ಮಾಳಿಗೆಗಳ ನೆತ್ತಿಯ ಮೇಲಿರುತ್ತಿರುವ (ಶೂಲಂ) ಶೂಲಗಳು (ಶೆೞುಕೊಂಡಲ್ ಅಹಡು ಇರಿಯ) ಸುಂದರವಾದ ಮೇಘಗಳ ಒಳಮೈಯನ್ನು ಇರಿಯಲು (ಶೊರಿಂದ) ಸುರಿದ (ಶೆೞುಮುತ್ತಂ) ಸುಂದರವಾದ ಮುತ್ತುಗಳು (ಮಲ್ಲೈ ಇಲಂಗು ಮಾಳಿಹೈಕಳಿನ್ ಮೇಲ್) ಬೆಟ್ಟದ ಹಾಗೆ ಶೋಭಿಸುತ್ತಿರುವ ಮಾಳಿಗೆಗಳ ಮೇಲೆ (ಮಲಿವು ಎಯ್ದ) ರಾಶಿರಾಶಿಯಾಗಿ ಬಿದ್ದಿರುತ್ತಿರುವ (ನಾಂಗೂರ್) ತಿರುನಾಂಗೂರ್ ಕ್ಷೇತ್ರದಲ್ಲಿರುವ

(ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ) ವೈಹುಂದ ವಿಣ್ಣಹರಂ ಕ್ಷೇತ್ರವನ್ನು, ಎಲ್ಲೈ ಮನಸ್ಸೇ, ಸೇವಿಸು.

ನಿತ್ಯಾನಪಾಯಿನಿಯಾದ ದೇವಿಯೊಡನೆ ಅಗಲಿಕೆ ಉಂಟಾಗುವುದಕ್ಕೆ ಕಾರಣಳಾದ ಶೂರ್ಪಣಖಿಯ ಕಿವಿಮೂಗುಗಳನ್ನು ಕತ್ತರಿಸಿ ಹಾಕಿದ ಪ್ರಸಂಗವನ್ನಿಲ್ಲಿ ಪ್ರಸ್ತಾಪ ಮಾಡಿದ್ದಾರೆ. ತಾನು ಅಲಂಕರಿಸಿಕೊಂಡು ಅಭಿರೂಪ್ಯದೊಡನೆ ಬಂದ ಆ ಕಳ್ಳ ರೂಪವನ್ನು ಬಿಟ್ಟು ತನ್ನ ನಿಜರೂಪವನ್ನು ಆ ಶೂರ್ಪಣಖಿ ಹೊಂದುವಂತೆ ಮಾಡಿದ ಮಹಾಬಲ ಅವನು. ರಾಕ್ಷಸಿಗೆ ವೈರೂಪ್ಯವೇ ಸಹಜವಾದುದಷ್ಟೇ ? ಅವ್‌ಕೈಯ್ಯೆನ್ನುವುದಕ್ಕೆ ಇಲ್ಲಿ ವಿಪರೀತ ಲಕ್ಷಣೆಯಿಂದ ಘೋರವಾದ ಕೈ ಎಂದರ್ಥ. ಮೊರದಂತೆ ಉಗುರುಗಳನ್ನುಳ್ಳ ಭಯಂಕರವಾದ ಕೈಗಳನ್ನು ತಲೆಯ ಮೇಲಿಟ್ಟುಕೊಂಡು ಲಂಕೆಗೆ ಅವಳು ಓಡಿಹೋಗುವಂತೆ ಮಾಡಿದವನು ಅವನು.

ಆ ಕ್ಷೇತ್ರದಲ್ಲಿ ಸಾಂದ್ರವಾದವೂ ಮಣಿಮಯವಾದವೂ ಆದ ಮಾಳಿಗೆ ಮನೆಗಳ ಮೇಲ್ಭಾಗದಲ್ಲಿ ಗೃಹಾಲಂಕಾರಕ್ಕಾಗಿ ಇಟ್ಟಿರುವ ಚಿನ್ನದ ಕಲಶಗಳ ಮೊನೆಗಳು ಮಂದಮಂದವಾಗಿ ಚಲಿಸುವ ಮೋಡಗಳ ಕೆಳಭಾಗವನ್ನು ಸೀಳುವುವಂತೆ. ಮೇಘಗಳು ಕಡಲಿನಲ್ಲಿ ಹೊಕ್ಕು ಮುತ್ತುಗಳನ್ನೂ ಜಲದೊಡನೆ ತುಂಬಿಕೊಂಡು ಅವುಗಳ ಭಾರದಿಂದ ಮಂದಗತಿ ಉಳ್ಳವುಗಳಾಗಿರುವಂತೆ. ಆಗ ಆ ಮೋಡಗಳೊಳಗಿಂದ ಸುರಿದ ಮುತ್ತಿನರಾಶಿ ಮಾಳಿಗೆಗಳ ಮೇಲೆ ಬಿದ್ದಿರುವುದು ಒಂದು ಬೆಟ್ಟದ ಮೇಲೆ ಮತ್ತೊಂದು ಬೆಟ್ಟ ಬಿದ್ದಹಾಗಿರುವುದಂತೆ. ಅಂಥ ಕ್ಷೇತ್ರವನ್ನು ಸೇರಿ ಅಲ್ಲಿರುವ ವೈಹುಂದ ವಿಣ್ಣಹರಂ ಕ್ಷೇತ್ರವನ್ನು ಸೇವಿಸಬೇಕೆಂದು ಮನಸ್ಸಿಗೆ ತಿಳಿಸುತ್ತಾರೆ.

**ಮಿನ್ನೈಯ ನುಣ್ ಮರುಂಗುಲ್ ಮೆಲ್ಲಿಯಲ್‌ಕಾ ಇಲಂಗೈ**
**ವೇಂದನ್ ಮುಡಿ ಒರುಪದುಂ ತೋಳ್ ಇರುಪದುಂ**
**ಪೋಯ್‌ಉದಿರ**
**ತನ್ ನಿಹರಿಲ್ ಶಿಲೈ ವಳೈತ್ತು ಅನ್ರು ಇಲಂಗೈ ಪೊಡಿಶೆಯ್‌ದ**
**ತಡನ್ತೋಳನ್ ಮಹಿಳ್‌ನ್ದು ಇನಿದು ಮರುವಿ**
**ಉರೈಕೋಯಿಲ್**

**ಶೆನ್ನೆಲೊಡು ಶೆಂಗಮಲಂ ಶೇಲ್‌ಕಯಲ್‌ಹಳ್ ವಾಳೈ**
**ಶೆಂಗಟುನೀರೊಡು ಮಿಡೈಂದು ಕಟನಿ ತಿಹಟ್‌ನ್ದೆಂಗುಂ**
**ಮನ್ನು ಪುಹಟ್ ವೇದಿಯರ್‌ಹಳ್ ಮಲಿವು ಎಯ್‌ದು**
**ನಾಂಗೂರ್ ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ**

||೫||

(ಅನ್ರು) ಹಿಂದೊಂದು ಕಾಲದಲ್ಲಿ (ಮಿನ್ ಅನ್ನೈಯ ನುಣ್ ಮರುಂಗುಲ್ ಮೆಲ್ಲಿಯರ್ಕ್ಕಾ) ಮಿಂಚನ್ನು ಹೋಲುವ ಸೂಕ್ಷ್ಮವಾದ ಸೊಂಟವನ್ನುಳ್ಳ ಮೃದುಸ್ವಭಾವದ ಸೀತಾದೇವಿಗಾಗಿ (ಇಲಂಗೈವೇಂದನ್) ಲಂಕಾಧೀಶ್ವರನ (ಮುಡಿ ಒರುಪದುಂ ತೋಳ್ ಇರುಪದುಂ) ಹತ್ತು ತಲೆಗಳೂ ಇಪ್ಪತ್ತು ತೋಳುಗಳೂ (ಪೋಯ್‌ಉದಿರ) ಭಿನ್ನಭಿನ್ನವಾಗಿ ಉದುರಿ ಹೋಗುವಂತೆ (ನಿಹರಿಲ್) ಅಸಮಾನವಾದ (ತನ್ ಶಿಲೈ ವಳೈತ್ತು) ತನ್ನ ಕೋದಂಡವನ್ನು ಸೆಳೆದು ಬಾಣಗಳನ್ನು ವರ್ಷಿಸಿ (ಇಲಂಗೈ ಪೊಡಿಶೆಯ್‌ದ ತಡನ್‌ತೋಳನ್) ಲಂಕಾಪಟ್ಟಣವನ್ನು ಧೂಳೀಪಟ ಮಾಡಿದ ಮಹಾವೀರನು (ಮಹಿಟ್‌ನ್ದು ಇನಿದು ಮರುವಿ ಉರೈಕೋಯಿಲ್) ಆನಂದದಿಂದ ನಿತ್ಯ ವಾಸಮಾಡುತ್ತಿರುವ ದಿವ್ಯಕ್ಷೇತ್ರವಾದುದೂ, (ಶೆನ್ನೆಲೊಡು ಶೆಂಗಮಲಂ ಶೇಲ್‌ಕಯಲ್ ಹಳ್‌ವಾಳೈ) ಕೆಂಭತ್ತಗಳೂ ಕೆಂದಾವರೆ ಹೂಗಳೂ ವಿಶೇಷ ರೀತಿಯ ಮತ್ಸ್ಯಗಳೂ (ಶೆಂಗಟು ನೀರೊಡು) ಶೆಂಗಟುನೀರ್ ಹೂಗಳೂ (ಮಿಡೈಂದು) ಸೇರಿಕೊಂಡು (ಕಟನಿ ಎಂಗುಂ ತಿಹಟ್‌ನ್ದು) ಗದ್ದೆಗಳಿರುವ ಜಾಗಗಳಲ್ಲೆಲ್ಲಾ ಪ್ರಕಾಶಿಸುತ್ತಿರುವುದೂ, (ಮನ್ನು ಪುಹಟ್ ವೇದಿಯರ್‌ಹಳ್) ನಿತ್ಯವಾದ ಕೀರ್ತಿಯನ್ನುಳ್ಳ ವೈದಿಕರುಗಳು (ಮಲಿವುಎಯ್‌ದು) ಕಿಕ್ಕಿರಿದು ನೆರೆದಿರುವಂಥದೂ ಆದ (ನಾಂಗೂರ್ ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ) ತಿರುನಾಙ್ಗೂರಿನಲ್ಲಿರುವ ವೈಹುಂದ ವಿಣ್ಣಹರಂ ಕ್ಷೇತ್ರವನ್ನು, ಎಲೈ ಮನಸ್ಸೇ, ಸೇವಿಸು.

ಈ ಪಾಶುರದಲ್ಲಿ ಹೇಗೆ ಅವನು ದೇವಿಯ ಕಷ್ಟ ಪರಿಹಾರಕ್ಕೆ ಒದಗಿದ ನೆಂಬುದನ್ನು ವರ್ಣಿಸಿದ್ದಾರೆ. ಮಿಂಚಿನಂತೆ ಸೂಕ್ಷ್ಮವಾದ ಸೊಂಟವನ್ನುಳ್ಳವಳೂ ಮೃದುಸ್ವಭಾವದವಳೂ ಆದ ಸೀತಾದೇವಿಗಾಗಿ ಅಂದು ಶ್ರೀರಾಮ ತನ್ನ ಅಸಮಾನವಾದ ಬಿಲ್ಲನ್ನು ಬಗ್ಗಿಸಿ ಬಾಣಗಳನ್ನು ವರ್ಷಿಸಿ ಲಂಕೆಯನ್ನು ಧೂಳೀಪಟ ಮಾಡಿದ. ದೇವಿಗಾಗಿ ಅವನು ಮಾಡಿದ ವ್ಯಾಪಾರ ಆಶ್ರಿತರಿಗೆಲ್ಲ ಮಾಡಿ

ದುದೇ ಆಯಿತು. ಅಂಥ ಸ್ವಾಮಿ ಪ್ರೀತಿಯಿಂದ ಬಂದು ನೆಲಸಿರುವ ದಿವ್ಯ ಕ್ಷೇತ್ರವಿದು. ಈ ಕ್ಷೇತ್ರದ ರಾಮಣೀಯಕತೆ ಅನುಪಮ. ಗದ್ದೆಗಳಲ್ಲಿ ಕೆಂಭತ್ತ, ಕೆಂದಾವರೆ, ಬಗೆ ಬಗೆಯ ಮತ್ಸ್ಯಗಳು ಇವೆಲ್ಲಾ ಶೆಂಗೞುನೀರ್ ಹೂಗಳೊಡನೆ ಸೇರಿ ಸಾಂದ್ರವಾಗಿ ಬೆಳಗಿವೆ. ಇಂಥ ಸ್ಥಲದಲ್ಲಿರುವ ಜನ ನಿತ್ಯ ಕೀರ್ತಿಯುಳ್ಳ ವೈದಿಕರಾಗಿದ್ದಾರೆ. ಭಕ್ತರು ನೆರೆದಿರುವಂಥದೂ ಪರಮ ರಮಣೀಯವಾದುದೂ ಆದ ಈ ಕ್ಷೇತ್ರಕ್ಕೆ ಹೋಗಿ ಅಲ್ಲಿರುವ ವೈಹುಂದ ವಿಣ್ಣ ಹರಂ ಕ್ಷೇತ್ರವನ್ನು ಸೇವಿಸಬೇಕು. ತಿರುನಾಂಗೂರ್ ಕ್ಷೇತ್ರಕ್ಕೆ ಆಭರಣ ಪ್ರಾಯವಾದುದು ವೈಹುಂದವಿಣ್ಣಹರ,

> ಪೆಣ್ಣೈ ಮಿಹುವಡಿವುಕೊಡು ವಂದವಳ್ಳೈ ಪೆರಿಯ ಪೇಯಿನದು
> ಉರುವುಕೊಡು ಮಾಳ ಉಯಿರುಂಡು
> ತಿಣ್ಣೈ ಮಿಹುಮರುದೊಡು ನಲ್‌ಶಕಡಂ ಇರುತ್ತ ಅರುಳುಂ
> ತೇವನವನ್ ಮಹಿೞ್‌ನ್ದು ಇನಿದು ಮರುವಿ ಉರೈಕೋಯಿಲ್
> ಉಣ್ಣೈಮಿಹು ಮರೈಯೊಡು ನಲ್‌ಕಲೈಹಳ್ ನಿರೈಪಾರೈಹಳ್
> ಉದವುಕೊಡೈಎನ್ರ ಇವತ್ತಿನ್ ಒೞಿವಿಲ್ಲಾ ಪೆರಿಯ
> ವಣ್ಣೈಮಿಹು ಮರೈಯವರ್‌ಹಳ್ ಮಲಿವು ಎಯ್‌ದು
> ನಾನ್ಗೂರ್ ವೈಹುಂದವಿಣ್ಣಹರಂ ವಣಂಗು ಮಡನೆಂಜೇ
>
> ॥೬॥

(ಪೆಣ್ಣೈ ಮಿಹುವಡಿವು ಕೊಡು) ಉತ್ತಮ ಸ್ತ್ರೀಯ ರೂಪವನ್ನು ಹಾಕಿಕೊಂಡು (ವಂದವಳ್ಳೈ) ಕೊಲ್ಲುವುದಕ್ಕಾಗಿ ಬಂದ ಪೂತನಿ (ಪೆರಿಯ ಪೇಯಿನದು ಉರುವು ಕೊಡುಮಾಳ) ಅವಳ ನಿಜರೂಪವಾದ ಭಯಂಕರವಾದ ರಾಕ್ಷಸಿಯ ರೂಪ ದೊಡನೆ ಸಾಯುವಂತೆ (ಉಯಿರ್ ಉಂಡು) ಅವಳ ಪ್ರಾಣವನ್ನು ಹೀರಿ ಕೊಂಡವನೂ, (ತಿಣ್‌ಮೈ ಮಿಹುಮರುದೊಡು) ದೃಢವಾಗಿ ಬೇರುಬಿಟ್ಟಿದ್ದ ಅರ್ಜುನವೃಕ್ಷಗಳನ್ನೂ (ನಲ್ ಶಕಟಮ್) ಬಲಿಷ್ಠವಾದ ಶಕಟವನ್ನೂ (ಇರುತ್ತ ಅರುಳುಂ) ಮುರಿದುಹಾಕಿ ಕೃಪೆಮಾಡಿದವನೂ ಆದ (ತೇವನ್ ಅವನ್) ಆ ದೇವದೇವನು (ಮಹಿೞ್‌ನ್ದು ಇನಿದು ಮರುವಿ ಉರೈಕೋಯಿಲ್) ಆನಂದದೊಡನೆ ನಿತ್ಯವಾಸಮಾಡುತ್ತಿರುವ ದಿವ್ಯಕ್ಷೇತ್ರವಾದುದೂ, (ಉಣ್ಣೈ

ಮಿಹು ಮರೈಯೊಡು) ಇರುವುದನ್ನು ಇರುವಂತೆ ಹೇಳುವ ವೇದಗಳೇನು, (ನಲ್‌ಕಲೈಹಳ್) ಶ್ರೇಷ್ಠವಾದ ಇತಿಹಾಸಪುರಾಣಗಳೇನು ಇವುಗಳನ್ನು ಅಧಿಕರಿಸಿದವರೂ, (ನಿರೈ ಪಾರೈಹಳ್) ತುಂಬಿಕೊಂಡಿರುವ ಸಹನೆ ಮೊದಲಾದ ಗುಣಗಳೇನು (ಉದವು ಕೊಡೈ) ಕೇಳಿದವರಿಗೆ ಅವರು ಕೇಳಿದಂತೆಯೇ ಕೊಡುವ ಔದಾರ್ಯವೇನು (ಎನ್ರು ಇವತ್ರಿನ್ ಒಟಿವು ಇಲ್ಲಾ) ಇವುಗಳೇ ಮೊದಲಾದ ಗುಣಗಳನ್ನು ಯಥಾವಾಗಲೂ ಹೊಂದಿದವರಾಗಿ (ಪೆರಿಯ ವಣ್ಮೈ ಮಿಹು) ಆತ್ಮ ಸಮರ್ಪಣವೆಂಬ ಶ್ರೇಷ್ಠತಮವಾದ ಗುಣವನ್ನೂ ಉಳ್ಳ (ಮರೈಯವರ್‌ಹಳ್ ಮಲಿವು ಎಯ್‌ದುಂ ನಾಂಗೂರ್) ವೈದಿಕ ಬ್ರಾಹ್ಮಣರುಗಳು ನೆರೆದಿರುವ ತಿರುನಾಂಗೂರಿನಲ್ಲಿರುವ (ವೈಹುಂದ ವಿಣ್ಣಹರಂವಣಂಗು ಮಡನೆಂಜೇ) ವೈಹುಂದ ವಿಣ್ಣಹರಂ ಕ್ಷೇತ್ರವನ್ನು, ಎಲೈ ಮನಸ್ಸೇ, ಹೋಗಿ ಸೇವಿಸು.

ಶ್ರೀ ನೃಸಿಂಹನನ್ನೂ ಶ್ರೀರಾಮನನ್ನೂ ಅನುಸಂಧಾನ ಮಾಡಿದ ಮೇಲೆ ಇಲ್ಲಿಂದ ಮೂರು ಪಾಶುರಗಳಲ್ಲಿ ಎಲ್ಲ ಆಳ್ವಾರರುಗಳೂ ಮನಸೋತಿರುವ ಕೃಷ್ಣಾವತಾರವನ್ನನುಭವಿಸುತ್ತಾರೆ. ನಾರಿಯರಲ್ಲಿ ಉತ್ತಮಿಯಾದ ಯಶೋದೆಯ ರೂಪವನ್ನು ಧರಿಸಿಬಂದ ಪೂತನಿ ಅವಳ ನಿಜರೂಪದಲ್ಲಿ ಹೆಣವಾಗಿ ಬೀಳುವಂತೆ ಅವಳ ಪ್ರಾಣವನ್ನು ಹೀರಿಕೊಂಡ ಸ್ವಾಮಿ. ಅಸುರಾವೇಶದಿಂದ ಬಹಳ ಬಲಿಷ್ಠವಾದ ಅರ್ಜುನ ವೃಕ್ಷಗಳನ್ನೂ ಮುರಿದುಹಾಕಿದ. ರಕ್ಷಣೆಗೊದಗ ಬಹುದೆಂಬ ಭ್ರಮೆಯನ್ನು ಉಂಟುಮಾಡಬಹುದಾದ ಶಕಟವನ್ನು ಚೂರು ಚೂರಾಗಿ ಒಡೆದುಹಾಕಿದ. ತನ್ನನ್ನೇ ಭಕ್ತರಿಗೆ ಕೊಟ್ಟುಕೊಳ್ಳುವವನು ಆ ಸ್ವಾಮಿ. 'ವಿರೋಧಿಯನ್ನು ನಾಶಪಡಿಸಿದೆವಷ್ಟೇ'—ಎಂದು ನೆನೆದು ಅದರಿಂದ ದೀಪ್ತನಾದ ಸರ್ವೇಶ್ವರ ನಿತ್ಯವಾಸಮಾಡುವ ಶ್ರೀಕ್ಷೇತ್ರ ಇದು. ಯಥಾ ಭೂತವಾದಿಯಾದ ವೇದಗಳನ್ನೂ, ಆತ್ಮೋಪಕಾರಕವಾದ ಅರವತ್ತನಾಲ್ಕು ಕಲೆಗಳನ್ನೂ ಅಧಿಕರಿಸಿ, ಸಾಂಗವೇದ ಪರಿಜ್ಞಾನದಿಂದ ಬರುವ ಆತ್ಮಗುಣ ಪರಿಪೂರ್ತಿಯನ್ನೂ ಅದರಿಂದ ಬೆಳಗುವ ಕ್ಷಮೆ, ದಾತೃತ್ವ ಮೊದಲಾದ ಗುಣಗಳನ್ನುಳ್ಳ ಭಾಗವತರು ನೆರೆದಿರುವ ಕ್ಷೇತ್ರ ಅದು. ಭಗವಂತನಲ್ಲಿ ಸ್ವಾತ್ಮರಕ್ಷಾ ಭರಫಲಸಮರ್ಪಣವನ್ನು ಮಾಡಿದವರಾಗಿ ಪಾರಮೈಕಾಂತ್ಯದಿಂದ ಮೆರೆಯುವ

ವೇದವಿದಗ್ರಗಣ್ಯರು ನೆರೆದ ಆ ಶ್ರೀಕ್ಷೇತ್ರ ವೈಕುಂಠಸಮವಾಗಿದೆ. 'ಆದರಿಂದ, ಎಲೈ ಮನಸ್ಸೇ, ಅಲ್ಲಿ ಹೋಗಿ ಸೇವಿಸು'—ಎಂದು ಮನಸ್ಸಿಗೆ ಹೇಳುತ್ತಾರೆ.

ವಿಳಂಗನಿಯ್ಯೆ ಇಳಂಕನ್ರುಕೊಂಡು ಉದಿರ ಎರಿಂದು
ವೇಲ್ ನೆಡುಂಕಣ್ ಆಯ್‌ಚ್ಚಿಯರ್ ಹಳ್ ವೈತ್ತ
ತಯಿರ್ ವೆಣ್ಣೆಯ್
ಉಳಂಕುಳಿರ ಅಮುದುಶೆಯ್‌ದು ಇವ್ವುಲಹುಂಡ ಕಾಳೈ
ಉಹಂದು ಇನಿದು ನಾಡೋರುಂ ಮರುವಿ ಉರೈಕೋಯಿಲ್
ಇಳಂಬಡಿನಲ್ ಕಮುಕು ಕುಲೈತೆಂಗು ಕೊಡಿಚ್ಚೆನ್ನೆಲ್
ಈನ್ ಕರುಂಬು ಕಣ್‌ವಳರ ಕಾಲ್ ತಡವುಮ್ ಪುನಲಾಲ್
ವಳಂಕೊಂಡ ಪೆರುಂಶೆಲ್ವಮ್ ವಳರುಂ ಅಣಿ
ನಾಂಗೂರ್ ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ ॥
॥೭॥

(ಇಳಂಕನ್ರು ಕೊಂಡು) ವತ್ಸಾಸುರನೆಂಬುವ ಎಳೆಯ ಕರುವನ್ನು ಎತ್ತಿ (ವಿಳಂಗನಿ ಮ್ಮೈ ಉದಿರ ಎರಿಂದು) ಬೇಲದಹಣ್ಣುಗಳು ಉದುರುವಂತೆ ಕಪಿತ್ಥಾಸುರನ ಮೇಲೆ ಬೀಸಿ ಎಸೆದವನೂ, (ವೇಲ್‌ನೆಡುಂಕಣ್ ಆಯ್‌ಚ್ಚಿಯರ್ ಹಳ್) ವೇಲಾಯುಧದಂತೆ ನೀಳವಾದ ಕಣ್ಣುಗಳನ್ನುಳ್ಳ ಗೋಪಿಯರು (ವೈತ್ತ ತಯಿರ್ ವೆಣ್ಣೆಯ್) ನಿಲುವುಗಳಲ್ಲಿ ಮರೆಸಿಟ್ಟ ಮೊಸರನ್ನೂ ಬೆಣ್ಣೆಯನ್ನೂ (ಉಳ್ಳಂ ಕುಳಿರ ಅಮುದುಶೆಯ್‌ದು) ತನ್ನ ಮನದಣಿಯುವಂತೆ ಭುಜಿಸಿದವನೂ, (ಇವ್ವುಲಹು ಉಂಡ) ಆದರಿಂದ ತೃಪ್ತಿ ಆಗದವನಂತೆ ಈ ಲೋಕಗಳೆಲ್ಲವನ್ನೂ ಭುಜಿಸಿದವನೂ ಆದ (ಕಾಳೈ) ನಿತ್ಯಯುವಾ ಆದ ಭಗವಂತನು (ಉಹಂದು ಇನಿದು ನಾಳ್‌ತೋರುಂ ಮರುವಿ ಉರೈಕೋಯಿಲ್) ಆನಂದದೊಡನೆ ನಿತ್ಯವಾಸಮಾಡುತ್ತಿರುವ ದಿವ್ಯಕ್ಷೇತ್ರವಾದುದೂ, (ಇಳಂಪಡಿನಲ್ ಕಮುಕು) ಎಳೆಯ ತನವನ್ನು ಹೊಂದಿರುವ ಒಳ್ಳೆಯ ಅಡಿಕೆಮರಗಳು, (ಕುಲೈ ತೆಂಗು) ಗೊನೆಗಳನ್ನುಳ್ಳ ತೆಂಗಿನ ಮರಗಳು, (ಕೊಡಿ) ವಿಳ್ಳೆಯದೆಲೆಯ ಬಳ್ಳಿಗಳು, (ಶೆನ್ನೆಲ್) ಕೆಂಭತ್ತದ ಪಯಿರುಗಳು (ಈನ್ ಕರುಂಬು) ಸಿಹಿಯರಾದ ಕಬ್ಬುಗಳು (ಕಣ್‌ವಳರ) ಇವುಗಳೆಲ್ಲ ದಿನದಿನವೂ ಹುಲುಸಾಗಿ ಬೆಳೆಯುವಂತೆ

(ಕಾಲ್‌ತಡವುಮ್) ಬುಡದಲ್ಲಿ ಕಾಲುವೆಗಳಲ್ಲಿ ಹರಿಯುವ (ಪುನಲಾಲ್) ತಣ್ಣೀರಿನ ಪ್ರವಾಹದಿಂದ (ವಳಂಕೊಂಡ) ಅತ್ಯಂತ ಸುಂದರವಾಗಿರುವುದೂ, (ಪೆರುಶೆಲ್ವಂ ವಳರುಂ) ಹಿರಿಯ ಸಂಪತ್ತು ಬೆಳೆಯುವಂತಿರುವುದೂ ಆದ (ಅಣಿನಾಂಗೂರ್ ವೈಹುಂದ ವಿಣ್ಣಹರಂ ಮಡನಂಜೇ ವಣಂಗು) ಸುಂದರವಾದ ತಿರುನಾಂಗೂರಿನಲ್ಲಿರುವ ವೈಹುಂದವಿಣ್ಣಹರಂ ಕ್ಷೇತ್ರವನ್ನು, ಎಲೈ ಮನಸ್ಸೇ, ಹೋಗಿ ಸೇವಿಸು.

ಇಲ್ಲಿಯೂ ಶ್ರೀಕೃಷ್ಣಾವತಾರದ ಅನುಸಂಧಾನ ಮಾಡಿದ್ದಾರೆ. ಶ್ರೀಕೃಷ್ಣ ವತ್ಸಾಸುರನನ್ನು ಮೇಲೆಸೆದು ಕಪಿತ್ಥಾಸುರನನ್ನು ವಧಿಸಿದುದನ್ನು ನಿರೂಪಿಸಿದ್ದಾರೆ. ಗೋಪಿಯರು ಮುಚ್ಚಿಟ್ಟ ಬೆಣ್ಣೆ ಮೊಸರುಗಳು ಆಶ್ರಿತರ ಸ್ಪರ್ಶವನ್ನು ಹೊಂದಿದ್ದ ಕಾರಣ ಸ್ವಾಮಿ ಅವುಗಳನ್ನು ತನ್ನ ಮನದಣಿಯ ಭುಜಿಸಿದನಂತೆ. ಈ ಲೋಕವನ್ನು ತನ್ನ ಹೊಟ್ಟೆಯೊಳಗಿಟ್ಟುಕೊಂಡು ಸ್ವಾಮಿ ರಕ್ಷ್ಯವರ್ಗದ ರಕ್ಷಣೆಯನ್ನು ಮಾಡಿದನು. ಅದರಿಂದ ಅವನು ಬಹಳ ಸಂತೋಷಿಸಿದನು. ಅಲ್ಲಿರುವ ಸಸ್ಯಸಮೃದ್ಧಿ ಮತ್ತು ಜಲಸಮೃದ್ಧಿಯನ್ನು ಕೊಂಡಾಡಿದ್ದಾರೆ. ನಿರವಧಿಕವಾದ ಸಂಪತ್ತು ದಿನೇ ದಿನೇ ವೃದ್ಧಿಯಾಗುವ ದೇಶ ಅದು.

ಆರಾದ ಶಿನತ್ತಿನ್ ವಿಂಹು ನೆರಕನ್‌ಉರವತ್ ಅಟಿತ್ತ
ಅಡಲಾಟಿ
ತಡಕ್ಕೈಯೆನ್ ಅಲರ್‌ಮಹಳ್ಕ್ಕುಂ ಅರಕ್ಕರ್ಕ್ಕುಂ
ಕೂರಾಹ ಕೊಡುತ್ತರುಳುಂ ತಿರುಉಡಂಬನ್ ಇವ್ವೈಯೋರ್
ಕುಲಮುದಲ್‌ವನ್ ಮಹಿಟ್‌ನ್ದು ಇನಿದು ಮರುವಿ
ಉರೈಕೋಯಿಲ್
ಮಾರಾದ ಮಲರ್ಕ್ಕಮಲಂ ಶೆಂಗ್‌ಬುನೀರ್ ತದುಂಬಿ
ಮದುವೆಳ್ಳಂ ಒಟುಹ ವಯಲ್ ಉಟವರ್ ಮಡೈ ಅಡೈಪ್ಪ
ಮಾರಾದ ಪೆರುಂ ಶೆಲ್ವಂ ವಳರುಂ ಅಣಿ
ನಾಂಗೂರ್ ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ
॥೮॥

(ಆರಾದ) ಆರದೆ ಬೆಳೆಯುತ್ತಿರುವ (ಶಿನತ್ತಿನ್) ಕೋಪದಿಂದ (ಮಿಹು) ಅಧಿಕವಾದ (ನರಕನ್ ಉರಮ್ ಅಟಿತ್ತ) ನರಕಾಸುರನ ಕೊಬ್ಬನ್ನು ನಾಶಪಡಿಸಿದ (ಅಡಲಾಳಿತಡಕ್ಕೈಯನ್) ತೀಕ್ಷ್ಣವಾದ ಸುದರ್ಶನವನ್ನು ತನ್ನ ವಿಶಾಲವಾದ ಹಸ್ತದಲ್ಲಿ ಉಳ್ಳವನೂ, (ಅಲರ್‌ಮಹಳ್ಕುಂ ಅರಕ್ಕುಂ) ಶ್ರೀದೇವಿಗೂ ರುದ್ರದೇವನಿಗೂ (ಕೂರು ಆಹ ಕೊಡುತ್ತರುಳುಂ ತಿರು ಉಡಂಬನ್) ವಿಭಾಗ ಮಾಡಿಕೊಟ್ಟ ತನ್ನ ದಿವ್ಯ ಮಂಗಳವಿಗ್ರಹವನ್ನುಳ್ಳವನೂ, (ಇಮೈಯೋರ್ ಕುಲಂ ಮುದಲ್‌ವನ್) ನಿತ್ಯಸೂರಿಗಳ ಸಮೂಹಕ್ಕೆ ನಾಥನೂ ಆದ ನಮ್ಮ ಸ್ವಾಮಿಯು (ಮಹಿಟ್ನ್ದು ಇನಿದು ಮರುವಿ ಉರೈಕೋಯಿಲ್) ಆನಂದದಿಂದ ನಿತ್ಯವಾಸ ಮಾಡುತ್ತಿರುವ ಕ್ಷೇತ್ರವಾದುದೂ, (ಮಶಾರಾದ ಮಲರ್ ಕಮಲಂ) ಇನ್ನು ಈ ಹೂವಿಲ್ಲವೆಂದು ಹೇಳುವುದಕ್ಕಾಗದಂತಿರುವ ತಾವರೆಗಳೂ, (ಶೆಂಗಟು ನೀರ್) ಶೆಂಗ ಟುನೀರ್ ಹೂಗಳು ಇವುಗಳಲ್ಲಿ (ಮದುಂ ವೆಳ್ಳಮ್) ಮಕರಂದದ ಪ್ರವಾಹವು (ತದುಂಬಿ ಒಟುಹ) ತುಂಬಿ ಹರಿಯಲು (ಉಟವರ್) ಗದ್ದೆ ಕೆಲಸ ಮಾಡುವವರು (ವಯಲ್ ಮಡ್ಕೈ ಅಡೈಪ್ಪ) ಆ ಮಕರಂದ ಪ್ರವಾಹ ಹೊರಗೆ ಹರಿದುಹೋಗದಂತೆ ತಮ್ಮ ತಮ್ಮ ಗದ್ದೆಗಳಲ್ಲಿ ತೆವರು ಗಳನ್ನು ಕಟ್ಟುವಂಥದೂ (ಮಶಾರಾದ ಪೇರುಂ ಶೆಲ್ವಂ ವಳರುಂ) ಸ್ವಲ್ಪವೂ ಕಡಿಮೆಯಾಗದೆ ಯಶಾವಾಗಲು ಹಿರಿಯ ಸಂಪತ್ತು ವರ್ಧಿಸುತ್ತಿರುವುದೂ ಆದ (ಅಣಿನಾಂಗೂರ್ ವೈಹುಂದ ವಿಣ್ಣಹರಂ, ಮಡನೆಂಜೇ, ವಣಂಗು) ಸುಂದರವಾದ ತಿರುನಾಂಗೂರಿನಲ್ಲಿರುವ ವೈಹುಂದ ವಿಣ್ಣಹರಂ ಕ್ಷೇತ್ರವನ್ನು, ಎಲೈ ಮನಸ್ಸೇ, ಹೋಗಿ ಸೇವಿಸು.

ಸ್ವಲ್ಪವೂ ಕಡಿಮೆಯಾಗದ ಕೋಪದಿಂದ ಬಲಶಾಲಿಯಾಗಿದ್ದ ನರಕಾಸುರನ ದರ್ಪವನ್ನು ನಾಶಪಡಿಸಿದ ಸುದರ್ಶನವನ್ನು ತನ್ನ ಶ್ರೀಹಸ್ತದಲ್ಲಿ ಧರಿಸಿರುವನು ಸ್ವಾಮಿ. ಶ್ರೀದೇವಿಗೆ ತನ್ನ ವಕ್ಷಃಸ್ಥಲದಲ್ಲಿಯೂ ರುದ್ರದೇವನಿಗೆ ತನ್ನ ಬಲಭಾಗದಲ್ಲಿಯೂ ಸ್ಥಾನವನ್ನಿತ್ತ ಈ ಸ್ವಾಮಿ ನಿತ್ಯಸೂರಿಗಳಿಗೆ ಸರ್ವ ನಿರ್ವಾಹಕನಾಗಿದ್ದಾನೆ. ಭೂಮಿಗೆ ಆಭರಣ ಪ್ರಾಯವಾಗಿರುವ ತಿರುನಾಂಗೂರಿನಲ್ಲಿರುವ ವೈಹುಂದ ವಿಣ್ಣಹರಂ ಕ್ಷೇತ್ರವನ್ನು ಹೋಗಿ ಸೇವಿಸು ಎಂದು ಮನಸ್ಸಿಗೆ ಉಪದೇಶಿಸುತ್ತಾರೆ.

ವಂಗಮಲಿ ತಡಂಕಡಲುಳ್ ವಾನವರ್‌ಹಳೋಡು
ಮಾಮುನಿವರ್ ಪಲರ್‌ಕೂಡಿ ಮಾಮಲರ್‌ಹಳ್‌ತೂವಿ
ಎಂಗಳ್ ತನಿನಾಯಕನೇ ಎಮಕ್ಕರುಳಾಯ್ ಎನ್ನುಂ
ಈಶನವನ್ ಮಹಿಟ್‌ನ್ದು ಇನಿದುಮರುವಿ ಉರೈಕೋಯಿಲ್
ಶೆಂಗಯಲುಂ ವಾಳೈಕಳುಂ ಶೆನ್ನೆಲಿಡೈ ಕುದಿಪ್ಪಶೇಲ್
ಉಹಳುಂ
ಶೆಬುಂಪಣೈ ಶೂಟ್‌ವೀದಿ ತೋರುಂ ಮಿಡೈನ್ದು
ಮಂಗುಲ್ ಮದಿ ಅಹಡು ಉರಿಂಜುಂ ಮಣಿಮಾಡಂ
ನಾಂಗೂರ್ ವೈಹುಂದ ವಿಣ್ಣಹರಂ ವಣಂಗು ಮಡನೆಂಜೇ ॥೯॥

(ವಂಗಮಲಿ) ಹಡಗುಗಳು ನೆರೆದಿರುವ (ತಡಂಕಡಲುಳ್) ಒರಿಯು ಕ್ಷೀರಸಾಗರ ದಲ್ಲಿ (ವಾನವರ್‌ಹಳೋಡು ಮಾಮುನಿವರ್ ಪಲರ್ ಕೂಡಿ) ದೇವತೆಗ ಳೊಡನೆ ಮಹರ್ಷಿಗಳು ಕೂಡಿಕೊಂಡು (ಮಾಮಲರ್‌ಹಳ್‌ತೂವಿ) ದಿವ್ಯವಾದ ಕುಸುಮಗಳನ್ನು ವರ್ಷಿಸಿ (ಎಂಗಳ್ ತನಿನಾಯಕನೇ ಎಮಕ್ಕು ಅರುಳಾಯ್ ಎನ್ನುಂ) ನಮಗೆ ಅದ್ವಿತೀಯನಾಥನಾದವನೇ, ನಮ್ಮ ಮೇಲೆ ಕೃಪೆ ಮಾಡಬೇಕು ಎಂದು ಬೇಡಲ್ಪಡುವವನಾದ (ಈಶನ್ ಅವನ್) ನಮ್ಮ ಸ್ವಾಮಿಯು (ಮಹಿಟ್‌ನ್ದು ಇನಿದು ಮರುವಿ ಉರೈಕೋಯಿಲ್) ಆನಂದದಿಂದ ನಿತ್ಯವಾಸ ಮಾಡುತ್ತಿರುವ ಕ್ಷೇತ್ರವಾದುದೂ (ಶೆಮ್‌ಕಯಲುಂ) ಕೆಂಬಣ್ಣದ ಮೀನುಗಳೂ, (ವಾಳೈಹಳುಂ) ಬಾಳೆ ಮೀನುಗಳೂ (ಶೆನ್ನೆಲಿಡೈ ಕುದಿಪ್ಪ) ಕೆಂಭತ್ತದ ಪೈರುಗಳ ನಡುವೆ ಚಿಮ್ಮುತ್ತಿರಲು (ಶೇಲ್ ಉಹಳುಂ) ಶೇಲ್ ಮೀನುಗಳೂ ಅವುಗಳೊಡನೆ ಸೇರಿ ಆಟವಾಡುತ್ತಿರುವ (ಶೆಬುಂಪಣೈ) ಸುಂದರವಾದ ತಟಾಕಗಳು (ಶೂಟ್‌ವೀದಿ ತೋರುಂ ಮಿಡೈನ್ದು) ದೊಡ್ಡ ಬೀದಿಗಳುದ್ದಕ್ಕೂ ನೆರೆದಿರುವಂಥದೂ, (ವಂಗುಲ್ ಮದಿ ಅಹಡು ಉರಿಂಜುಂ ಮಣಿ ಮಾಡಂ) ಆಕಾಶದಲ್ಲಿ ಚಲಿಸುತ್ತಿರುವ ಚಂದ್ರನ ಉದರವನ್ನು ತೇಯುವ ಮಣಿಮಯ ವಾದ ಮಾಳಿಗೆಗಳನ್ನು ಹೊಂದಿರುವಂಥದೂ ಆದ (ನಾಂಗೂರ್ ವೈಹುಂದ ವಿಣ್ಣಹರಂ, ಮಡನೆಂಜೇ, ವಣಂಗು) ನಾಂಗೂರಿನಲ್ಲಿರುವ ವೈಹುಂದ ವಿಣ್ಣಹರಂ ಕ್ಷೇತ್ರವನ್ನು, ಮನಸ್ಸೇ, ಹೋಗಿ ಸೇವಿಸು.

ಹಿಂದಿನ ಪಾಶುರದಲ್ಲಿ ಭಗವಂತನ ಸೌಶೀಲ್ಯವನ್ನು ಅನುಸಂಧಾನ ಮಾಡಿದ ಕೂಡಲೇ ಅವನ ಪರತ್ವವು ಮನಸ್ಸಿಗೆ ತೋರಲು ಆ ಪರತ್ವವನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಕೃಷ್ಣಾವತಾರ ಹಿಂದಿನ ಪಾಶುರದಲ್ಲಿ ಪ್ರಸ್ತುತವಾಯಿತು. ಆ ಅವತಾರಕ್ಕೆ ಮೂಲನಾದ ಕ್ಷೀರಾಬ್ಧಿಶಯನನನ್ನು 'ನಾಗಪರ್ಯಂಕಮುತ್ಸೃಜ್ಯ ಹ್ಯಾಗತೋ ಮಧುರಾಂಪುರೀಂ' ಎಂಬಂತೆ ಇಲ್ಲಿ ಅನುಸಂಧಾನ ಮಾಡಿದ್ದಾರೆ. ಬೆಟ್ಟದ ಹಿರಿಮೆಯನ್ನು 'ಆನೆಗಳ ಹಿಂಡುಗಳಿವೆ' ಎಂದು ಹೇಳಿತೋರುವಂತೆ ಈ ಸಮುದ್ರದ ಹಿರಿಮೆಯನ್ನು ಅಲ್ಲಿರುವ ಹಡಗುಗಳ ಸಮೂಹಗಳಿಂದ ಸೂಚಿಸಿದೆ. ದೇವತೆಗಳು ಹಾಗೂ ಸನಕಾದಿಗಳು ಪುಷ್ಪವರ್ಷಮಾಡಿ ಆ ಸರ್ವೇಶ್ವರನನ್ನು 'ನಮ್ಮ ಮೇಲೆ ಕೃಪೆಮಾಡಬೇಕು' ಎಂದು ಬೇಡುತ್ತಾರೆ. ಆ ಸರ್ವೇಶ್ವರ ಪ್ರೀತಿಪೂರ್ವಕವಾಗಿ ನಿತ್ಯವಾಸ ಮಾಡುವ ದೇಶ ಅದು. ಇಂಥಸ್ವಾಮಿ ಆನಂದದಿಂದ ನೆಲಸಿರುವ ಕ್ಷೇತ್ರ ನಾಂಗೂರ್ ಕ್ಷೇತ್ರ. ಆ ಕ್ಷೇತ್ರದ ಸಮೃದ್ಧಿಯನ್ನು ಬೀದಿಯುದ್ದಕ್ಕೂ ಇರುವ ಉನ್ನತವಾದ ಮಣಿಮಾಳಿಗೆಗಳೂ, ಮತ್ಸ್ಯಗಳು ತುಳುಕುವ ಅನೇಕಾನೇಕ ತಟಾಕಗಳೂ ತೋರುತ್ತಿವೆ.

**ಶಂಗು ಮಲಿತಂಡುಮುದಲ್ ಶಕ್ಕರಮ್ ಮುನ್ ಏಂದುಂ**
**ತಾಮರೈಕ್ಕಣ್ ನೆಡಿಯಪಿರಾನ್ ತಾನ್ ಅಮರುಂ ಕೋಯಿಲ್**
**ವಂಗ ಮಲಿಕಡಲ್ ಉಲಹಿಲ್‌ಮಲಿವೆಯ್‌ದು ನಾಂಗೂರ್**
**ವೈಹುಂದ ವಿಣ್ಣಹರ್ ಮೇಲ್ ಮಂಡರ್ಕೈಯುಂ ಪೊಟ್ರಿಲ್‌ಶೂಟ್**
**ಮಂಗೈಯರ್ ತವ್‌ತಲೈವನ್ ಮರುವಲರ್ ತಮುಡಲ್**
**ತುಣಿಯ ವಾಳ್‌ವೀಶಂ ಪರಕಾಲನ್ ಕಲಿಕನ್ರಿ ಶೊನ್ನ**
**ಶಂಗಮಲಿ ತಮಿಟ್‌ಮಾಲೈ ಪತ್ತಿನೈ ವಲ್ಲಾರ್‌ಹಳ್**
**ತರಣಿಯೊಡು ವಿಶುಂಬಾಳುಂ ತನ್ಮೈ ಪೆರುವಾರೇ ॥೧೦॥**

(ಶಂಗು) ಶ್ರೀಪಾಂಚಜನ್ಯ, (ಮಲಿತಂಡು) ಪೊಂದಿಕೊಂಡಿರುವ ಕೌಮೋದಕಿ (ಶಕ್ಕರಮ್ ಮುದಲ್) ಶ್ರೀಸುದರ್ಶನ ಮೊದಲಾದ (ದಿವ್ಯಾಯುಧಗಳನ್ನು (ಮುನ್‌ಏಂದುಂ) ಕಣ್ಣಿನ ಮುಂದೆಯೇ ಧರಿಸಿಕೊಂಡಿರುವ (ನೆಡಿಯ ತಾಮರೈ

ಕಣ್‌ಪಿರಾನ್ ತಾನ್) ನೀಳವಾದ ತಾವರೆಯನ್ನು ಹೋಲುವ ದಿವ್ಯನಯನ ಗಳನ್ನುಳ್ಳ ಸರ್ವೇಶ್ವರನು (ಅಮರುಂ ಕೋಯಿಲ್) ನಿತ್ಯವಾಸ ಮಾಡುವ ಸನ್ನಿಧಿಯಾದುದೂ, (ವಂಗಂಮಲಿ ಕಡಲ್ ಉಲಹಿಲ್ ಮಲಿವು ಎಯ್‌ದು ನಾಂಗೂರ್) ಹಡಗುಗಳು ತುಂಬಿರುವ ಸಮುದ್ರದಿಂದ ಸುತ್ತುವರಿಯಲ್ಪಟ್ಟ ಭೂಲೋಕದಲ್ಲಿ ಪ್ರಸಿದ್ಧಿ ಹೊಂದಿರುವುದೂ ಆದ ತಿರುನಾಂಗೂರಿನಲ್ಲಿರುವ (ವೈಹುಂದ ವಿಣ್ಣಹರ್ ಮೇಲ್) ವೈಹುಂದ ವಿಣ್ಣಹರ್ ದಿವ್ಯಕ್ಷೇತ್ರದ ವಿಷಯದಲ್ಲಿ (ವಂಡು ಅರೈಯುಂ ಪೊಟಿಲ್‌ಶೂಟ್ ಮಂಗೈಯರ್ ತವರ್ ತಲೈವನ್) ದುಂಬಿಗಳು ಝೇಂಕರಿಸುತ್ತಿರುವ ತೋಪುಗಳಿಂದ ಸುತ್ತುವರಿಯಲ್ಪಟ್ಟ ತಿರುಮಂಗೈನಾಡಿನವರಿಗೆ ನಾಯಕರೂ, (ಮರುವಲರ್ ತವರ್ ಉಡಲ್ ತುಣಿಯ ವಾಳ್‌ವೀಶುಂ) ಶತ್ರುಗಳ ಶರೀರಗಳು ನಾಶವಾಗುವಂತೆ ಕತ್ತಿಯನ್ನು ಬೀಸುವವರೂ, (ಪರಕಾಲನ್) ಪರಕಾಲನ್ ಎಂಬ ಶ್ರೀನಾಮ ವನ್ನುಳ್ಳವರೂ ಆದ (ಕಲಿಕನ್ರಿ) ತಿರುಮಂಗೈ ಆಳ್ವಾರವರು (ಶೊನ್ನ) ಅನುಗ್ರಹಿಸಿದ (ಶಂಗಮಲಿ) ಶಂಗದ ಹಿರಿಯರು ಕೊಂಡಾಡತಕ್ಕ (ತಮಿಟ್ ಮಾಲೈ ಇವೈಪತ್ತು) ತಮಿಳಿನ ಮಾಲೆಯಾದ ಈ ಹತ್ತು ಪಾಶುರಗಳನ್ನು (ವಲ್ಲಾರ್‌ಹಳ್) ಅಭ್ಯಾಸ ಮಾಡಿದವರು (ತರಣಿಯೊಡು ವಿಶುಂಬು ಆಳುಂ ತನ್ಮೈ ಪೆರುವಾರ್) ಭೂಮಿಯನ್ನೂ ಪರಮ ಪದವನ್ನೂ ಆಳುವಂತಹ ಅತಿಶಯವನ್ನು ಹೊಂದುತ್ತಾರೆ.

ಈ ದಿವ್ಯಕ್ಷೇತ್ರ ಎಂಥದು ಎಂದರೆ ಆಶ್ರಿತರಿಗಾಗಿ ಶ್ರೀ ಪಂಚಾಯುಧ ಗಳನ್ನು ಧರಿಸಿಕೊಂಡಿರುವ ಪುಂಡರೀಕಾಕ್ಷನಾದ ಸರ್ವೇಶ್ವರನು ನಿತ್ಯವಾಸ ಮಾಡುವಂಥದು. ಸಾಗರದಿಂದ ಸುತ್ತುವರಿಯಲ್ಪಟ್ಟ ಭೂಮಿಯಲ್ಲಿ ಸಮೃದ್ಧಿ ಬೆಳೆದಿರುವ ತಿರುನಾಂಗೂರಿನಲ್ಲಿರುವ ವೈಹುಂದವಿಣ್ಣಹರಂ ಕ್ಷೇತ್ರವನ್ನು ಕುರಿತು ಕವಿಗಳು ಹಾಡಿದ್ದಾರೆ. ಇವರು ತಿರುಮಂಗೈ ಕ್ಷೇತ್ರದ ನಿರ್ವಾಹಕರು. ಇದನ್ನ ನುಸಂಧಾನಮಾಡುವವರು ಉಭಯವಿಭೂತಿಗಳಿಗೂ ನಿರ್ವಾಹಕರಾಗುತ್ತಾರೆ.

# 'ತಿರುಮಡಂದೈ'

## ಪ್ರವೇಶ

ಆಶ್ರಿತರ ವಿರೋಧಿಗಳನ್ನು ನಿರಸನ ಮಾಡುವ ಶೀಲವನ್ನುಳ್ಳವನೂ ಆಶ್ರಿತರಿಗೆ ಆಪತ್ಕಾಲದಲ್ಲಿ ಒದಗುವವನೂ ಆದ ಸರ್ವೇಶ್ವರನು ಪುರುಷಕಾರ ಭೂತೆಯಾದ ಶ್ರೀದೇವಿಯೊಡನೆ ಸೇರಿ ಬಂದು ನೆಲಸಿರುವುದನ್ನು ಕಂಡು ನಿತ್ಯ ಸೂರಿಗಳು ಸಹ, 'ಇದು ಎಂಥ ಶೀಲಗುಣ ಪ್ರಾಚುರ್ಯ !' ಎಂದು ವಿಸ್ಮಯ ಪಡುವರು. ಹೀಗೆ ಸೂರಿಸೇವ್ಯನೂ, ಸುಶೀಲನೂ, ಅಸುರ ನಿರಸನನೂ, ಪರಮ ಸುಂದರನೂ ಆದ ಸರ್ವಶೇಷಿಯಾದ ಸ್ವಾಮಿ ತನ್ನನ್ನು ಎಲ್ಲರೂ ಆಶ್ರಯಿಸುವುದಕ್ಕೆ ಅನುಕೂಲವಾಗಲೆಂದು ಅರಿಮೇಯವಿಣ್ಣಗರಂ ಕ್ಷೇತ್ರದಲ್ಲಿ ನಿತ್ಯವಾಸವಮಾಡುತ್ತಿರುವುದನ್ನು ಅನುಸಂಧಾನಮಾಡಿ, 'ನೀನೂ ಅಲ್ಲಿ ಹೋಗಿ ಅವನನ್ನು ಆಶ್ರಯಿಸಿ ನಿನ್ನ ಕೊರೆಗಳನ್ನೆಲ್ಲಾ ತೀರಿಸಿಕೊಳ್ಳಲು ನಿಶ್ಚಯಿಸು' ಎಂದು ತಮ್ಮ ಮನಸ್ಸಿಗೆ ತಿಳಿಸುತ್ತಾರೆ.

**ತಿರುಮಡಂದೈ ಮಣ್‌ಮಡಂದೈ ಇರುಪಾಲುಂ ತಿಹಳ**
**ತೀವಿನೈಹಳ್ ಪೋೞಯ್ ಅಹಲ ಅಡಿಯವರ್ಹಳ್ಕ್ಕೆನ್ರುಂ**
**ಅರುಳ್ ನಡಂದು ಇವ್ವೇೞುಲಹತ್ತವರ್ ಪಣಿಯವಾನೋರ್**
**ಅಮರ್‍ನ್ದು ಏತ್ತ ಇರುಂದ ಇಡಂ ಪೆರುಂಪುಹೞ್**
**ವೇದಿಯರ್ವಾೞ್**
**ತರುಂ ಇಡಂಗಳ್ ಮಲರ್ಹಳ್ ಮಿಹಹು ಕೈದೈಹಳ್**
**ಶೆಂಗೞುನೀರ್**
**ಶಾಮರೈಹಳ್ ತಂಡಗಳ್ ತೋರುಂ ಇಡಂಗಳ್ ತೋರುಂ ತಿಹೞ**
**ಅರುವಿಡಂಗಳ್ ಪೊೞಿಲ್ ತೞುವಿ ಎೞಿಲ್ ತಿಹೞುಂ**
**ನಾಂಗೂರ್ ಅರಿಮೇಯವಿಣ್ಣಹರಂ ವಣಂಗು ಮಡನೆಂಜೇ**

॥೧॥

(ಇರುಪಾಲುಂ) ಎರಡು ಪಕ್ಕಗಳಲ್ಲಿಯೂ (ತಿರುಮಡಂದೈಮಣ್ ಮಡಂದೈತಿ ಹಟಿ) ಶ್ರಿದೇವಿ ಮತ್ತು ಭೂದೇವಿಯರು ಪ್ರಕಾಶಿಸುತ್ತಾ ಇರುತ್ತಿರಲು (ಅಡಿ ಯವರ್ ಹಳ್ಕು ತೀವಿನೈ ಹಳ್ ಪೋಯ್ ಅಹಲ) ಆಶ್ರಿತರ ತೀವ್ರವಾದ ಪಾಪಗಳು ನಾಶವಾಗುವ ಹಾಗೆ (ಎನ್ರುಂ ಅರುಳ್‌ನಡಂದು) ಯಾವಾಗಲೂ ಕೃಪೆಮಾಡುವವನೂ (ಇವ್ವೇಳುಲಹತ್ತವರ್ ಪಣಿಯ) ಸಪ್ತಲೋಕಗಳಲ್ಲಿರುವ ವರಿಂದಲೂ ಸೇವಿಸಲ್ಪಡುವವನೂ, (ವಾನೋರ್ ಅಮರ್‌ನ್ದು ಏತ್ತ) ನಿತ್ಯ ಸೂರಿಗಳಿಂದ ಹೊಂದಿಕೊಂಡು ಬಂದು ಸ್ತೋತ್ರವಮಾಡಲ್ಪಡುವವನೂ ಆದ ನಮ್ಮ ಸ್ವಾಮಿಯು (ಇರುಂದ ಇಡಂ) ದಯಮಾಡಿ ಇರುತ್ತಿರುವ ದಿವ್ಯಕ್ಷೇತ್ರ ವಾದುದೂ, (ಪೆರು ಪುಹಟ್ ವೇದಿಯರ್ ವಾಟ್‌ತರುಂ) ಮಹತ್ತರವಾದ ಕೀರ್ತಿಯನ್ನುಳ್ಳ ವೈದಿಕರು ವಾಸಮಾಡುತ್ತಿರುವ ಸ್ಥಳಗಳನ್ನುಳ್ಳುದೂ, (ಮಲರ್‌ಹಳ್‌ಮಿಹು) ಪುಷ್ಪ ಸಮೃದ್ಧಿಯನ್ನುಳ್ಳ (ಕೇದೈಹಳ್)ತಾಳೆಗಿಡಗಳೂ (ಶೆಂಗಟುನೀರ್ ತಾಮರೈಹಳ್) ಶೆಂಗಟುನೀರ್ ಹೂಗಳೂ ತಾವರೆಗಳೂ (ತಡಂಗಳ್ ತೋರುಂ) ತಟಾಕಗಳ ತುಂಬ ಇರುವುದಾಗಿ (ಇಡಂಗಳ್ ತೋರುಂ ತಿಹಟಿ) ಕಣ್ಣಿಗೆ ಗೋಚರವಾದ ಜಾಗದಲ್ಲೆಲ್ಲಾ ಪ್ರಕಾಶಿಸುತ್ತಿರುವಂಥದೂ, (ಪೊಟಿಲ್) ತೋಪುಗಳು (ಅರು ಇಡಂಗಳ್ ತಟುವಿ) ಆಕಾಶ ಸ್ಥಲಗಳನ್ನು ಸ್ಪರ್ಶಿಸುತ್ತಿರುವುದರಿಂದ (ಎಟಿಲ್‌ತಿಹಟುಂ) ಸೌಂದರ್ಯವು ಬೆಳಗುತ್ತಿರು ವುದೂ ಆದ (ನಾಂಗೂರ್) ತಿರುನಾಂಗೂರಿನಲ್ಲಿರುವ (ಅರಿಮೇಯವಿಣ್ಣಹರಂ, ಮಡನೆಂಜೇ, ವಣಂಗು) ಅರಿಮೇಯ ವಿಣ್ಣಹರಂ ಕ್ಷೇತ್ರವನ್ನು, ಎಲೈ ಭವ್ಯ ವಾದ–ಮನಸ್ಸೇ, ಹೋಗಿ ಸೇವಿಸು.

'ನ ಕಶ್ಚಿನ್ನಾಪರಾಧ್ಯತಿ' ಎಂದು ಹೇಳಿ ಆಶ್ರಿತರ ದೋಷಗಳನ್ನು ಕ್ಷಮಿಸು ವಂತೆ ಪುರುಷಕಾರ ಮಾಡುವ ಶ್ರೀದೇವಿಯೂ 'ದೋಷಗಳಿದ್ದಾಗ್ಯೂ ಕೈಬಿಡ ಬಾರದು' ಎಂದು ಹೇಳುವ ಭೂದೇವಿಯೂ ಸ್ವಾಮಿಯ ಎರಡು ಪಾರ್ಶ್ವ ಗಳಲ್ಲಿ ನಿತ್ಯಸನ್ನಿಧಾನ ಮಾಡಿರುವುದರಿಂದ ಆಶ್ರಿತರ ಬಗೆಗೆ ಯಾವಾಗಲೂ ಅವನ ಕೃಪಾವರ್ಷವೇ ಆಗುತ್ತಿರುವುದು. 'ಸಂಸಾರೇಷುನರಾಧಮಾನ್ ಕ್ಷಿಪಾಮಿ'—ಎನ್ನುವುದಕ್ಕೆ ಅವಕಾಶವೇ ಇಲ್ಲದಿರುವುದು. ಆಶ್ರಿತರ ಬಗೆಗೆ ಅವನು ಕರುಣೆ ತೋರುವುದರಿಂದ ತೀವ್ರವಾದ ಪಾಪಗಳು 'ಈ ಜಾಗ ನಮಗೆ ಇರುವುದಕ್ಕೆ ತಕ್ಕದಲ್ಲ' ಎಂದು ಆ ಭಕ್ತರಿಂದ ಓಡಿಹೋಗುತ್ತವೆ. 'ಹೀಗಿರುವ

ಈ ದೇವನಲ್ಲದೆ ನಮಗೆ ಈ ಲೋಕದಲ್ಲಿ ಬೇರೆ ಆಶ್ರಯಣೀಯರಿಲ್ಲ'—ಎಂದು ಏಳು ಲೋಕಗಳಲ್ಲಿರುವವರೂ ಈ ದೇವನನ್ನು ಆಶ್ರಯಿಸುವರು. ಈ ಸಂಸಾರ ವಿಭೂತಿಯಲ್ಲಿ ಅಸ್ಪೃಷ್ಟಸಂಸಾರಗಂಧರಾದ ನಿತ್ಯಸೂರಿಗಳೂ ಬಂದಿದ್ದು ಆಶ್ರಯಿಸುವದಕ್ಕಾಗುವಂತೆ ಇರುವ ದಿವ್ಯಕ್ಷೇತ್ರ, ಇದಂ.

ಈ ಸರ್ವೇಶ್ವರನನ್ನು ಅನುಭವಿಸುವುದೇ ತಮಗೆ ವೃತ್ತಿಯಾಗಿರುವ ಬ್ರಾಹ್ಮಣ ಶ್ರೇಷ್ಠರು ನೆಲಸಿರುವ ಜಾಗ ಇದು. ಇಲ್ಲಿ ಎಲ್ಲಿ ನೋಡಿದರಲ್ಲಿ ಸಮೃದ್ಧಿಯಾಗಿ ಹೂ ಬಿಟ್ಟಿರುವ ಹೂ ಗಿಡಗಳು, ತಾವರೆ ಮೊದಲಾದವು ಕಂಗೊಳಿಸುತ್ತವೆ. ಇಂಥ ಭವ್ಯವಾದ ದಿವ್ಯಕ್ಷೇತ್ರವನ್ನು ಹೋಗಿ ಸೇವಿಸು ಎಂದು ಮನಸ್ಸಿಗೆ ಉಪದೇಶಿಸಿದ್ದಾರೆ.

**ವೆನ್ರಿಮಿಹು ನೆರಕನ್ ಉರಂ ಅದುಅಟಿಯ ವಿಶಿರುಂ ವಿರಲಾಟಿ**
**ತಡಕ್ಕೈಯೆನ್ ವಿಣ್ಣವರ್ ಹಳ್ಕು ಅನ್ರು**
**ಕುನ್ರುಕೊಡು ಕುರೈ ಕಡಲೈ ಕಡಂದು ಅಮುದಮಳಿಕ್ಕುಂ**
**ಕುರುಮಣಿ ಎನ್ ಆರಮುದಂ ಕುಲವಿ ಉರೈಕೋಯಿಲ್**
**ಎನ್ರುಮಿಹು ಪೆರುಂಶೆಲ್ವತ್ತೆಟಿಲ್ ವಿಳಂಗು ಮರೈಯೋರ್**
**ಏಟಿಶೈಯುಂ ಕೇಳ್ವಿಹಳುಂ ಇಯೆನ್ರ, ಪೆರುಂಗುಣತ್ತೋರ್**
**ಅನ್ರುಉಲಹಂ ಪಡೈತ್ತವನೈ ಅನ್ನೆಯವರ್‌ಹಳ್**
**ನಾಂಗೂರ್ ಅರಿಮೇಯ ವಿಣ್ಣಹರಂ ವಣಂಗು ಮಡನೆಂಜೇ**

॥೨॥

(ವೆನ್ರಿಮಿಹುನರಕನ್) ಜಯಶೀಲನಾದ ನರಕಾಸುರನ (ಉರವ್ ಅದು ಅಟಿಯ) ಸೊಕ್ಕುನಾಶವಾಗುವಂತೆ (ವಿಶಿರುಂ ವಿರಲ್ ಆಟಿ ತಡಕ್ಕೈಯೆನ್) ಅವನ ಮೇಲೆ ಬೀಸಲಾದ ಬಲಿಷ್ಠವಾದ ಶ್ರೀಸುದರ್ಶನವನ್ನು ತನ್ನ ವಿಶಾಲವಾದ ಶ್ರೀಹಸ್ತದಲ್ಲಿ ಉಳ್ಳವನೂ, (ಅನ್ರು ವಿಣ್ಣವರ್‌ಹಳ್ಕು) ಹಿಂದೊಂದು ಕಾಲ ದಲ್ಲಿ ಇಂದ್ರನೇ ಮೊದಲಾದ ದೇವತೆಗಳಿಗಾಗಿ (ಕುನ್ರುಕೊಡು ಕುರೈಕಡಲೈ ಕಡೈಂದು) ಮಂದರ ಪರ್ವತವನ್ನು ನೆಟ್ಟು ಘೋಷಿಸುತ್ತಿದ್ದ ಸಮುದ್ರವನ್ನು ಮಥಿಸಿ (ಅಮುದಂ ಅಳಿಕ್ಕುಂ) ಅಮೃತವನ್ನು ತೆಗೆದುಕೊಟ್ಟವನೂ, (ಕುರು ಮಣಿ) ಶ್ರೇಷ್ಠವಾದ ರತ್ನದಂತಿರುವವನೂ, (ಎನ್ ಆರ್ ಅಮುದಂ) ಎನಗೆ

ಪರಿಪೂರ್ಣವಾದ ಅಮೃತದಂತಿರುವನೂ ಆದ ಭಗವಂತನು (ಕುಲವಿ ಉರೈ ಕೋಯಿಲ್) ಕೊಂಡಾಟದೊಡನೆ ನೆಲಸಿರುವ ದಿವ್ಯದೇಶವಾದುದೂ, (ಎನ್ರುಂ ಮಿಹು ಪೆರುಶೆಲ್ವತ್ತು ಎಟಿಲ್ ವಿಳಂಗುಂ) ಎಂದೆಂದೂ ವರ್ಧಿಸುತ್ತಿರುವ ಅಮಿತವಾದ ಸಂಪತ್ತಿನ ಸೊಗಸು ಪ್ರಕಾಶಿಸುವಂತಿರುವರೂ, (ಮರೈಯೋರ್) ವೇದವನ್ನಭ್ಯಾಸ ಮಾಡಿದವರೂ (ಏಟಿಶೈಯುಂ ಕೇಳ್ವಿಹಳುಂ ಇಯನ್ರ ಪೆರು ಕುಣತ್ತೋರ್) ಸಪ್ತಸ್ವರಗಳನ್ನೂ ಮತ್ತೆ ಅಂಗಗಳನ್ನೂ ಅಧಿಕರಿಸಿದ ಮಹಾ ಗುಣಶಾಲಿಗಳಾದವರೂ (ಅನ್ರು ಉಲಹಂ ಪಡೈತ್ತವನೈ ಅನೈಯವರ್ ಹಳ್) ಮೊದಲು ಲೋಕಗಳನ್ನು ಸೃಜಿಸಿದ ಬ್ರಹ್ಮನನ್ನು ಹೋಲುವಂತಹ ವಿಪ್ರರು ಬಾಳುತ್ತಿರುವ (ನಾಂಗೂರ್ ಅರಿಮೇಯವಿಣ್ಣಹರಂ ವಣಂಗು, ಮಡನೆಂಜೇ) ನಾಂಗೂರಿನಲ್ಲಿರುವ ಅರಿಮೇಯವಿಣ್ಣಹರಂ ಕ್ಷೇತ್ರವನ್ನು ಸೇರಿ, ಎಲೈ ಭವ್ಯ ವಾದ ಮನಸ್ಸೇ, ಸೇವಿಸು.

ತಾನು ಕಾಲಿಟ್ಟ ಜಾಗದಲ್ಲೆಲ್ಲಾ ಜಯಭೇರಿ ಹೊಡೆದವನಾಗಿ ನರಕಾಸುರ ಶತ್ರು ಭಯಂಕರನಾಗಿದ್ದ. ಇಂದ್ರಾದಿಗಳು ತಮ್ಮ ವಾಸಸ್ಥಾನವನ್ನು ಬಿಟ್ಟೋಡಿ ತಿರಿಯುವಂತೆ ಮಾಡಿದನಿವನು. ಅವನ ಸೊಕ್ಕನ್ನು ನಿರ್ಮೂಲ ಮಾಡುವ ಶಕ್ತಿಯನ್ನುಳ್ಳ ಜಾಜ್ವಲ್ಯಮಾನವಾದ ಸುದರ್ಶನವನ್ನು ಕೈಯಲ್ಲಿ ಉಳ್ಳ ಪರ ಮಾತ್ಮನು ಆ ನರಕನನ್ನು ನಿರ್ಮೂಲವಮಾಡಿ ದೇವಜಾತಿಯವರು ನೆಮ್ಮದಿ ಯಾಗಿ ತಮ್ಮ ಸ್ಥಾನದಲ್ಲಿ ವಾಸಮಾಡುವಂತೆ ಅನುಗ್ರಹಿಸಿದ. ಅಷ್ಟೇ ಅಲ್ಲದೆ ಆ ದೇವತೆಗಳಿಗಾಗಿ ಸಮುದ್ರಮಥನಮಾಡಿ ಅಮೃತವನ್ನೂ ತೆಗೆದುಕೊಟ್ಟ. ದೇವತೆಗಳು 'ನೀನು ನಮಗೆ ಬೇಡ; ನಮಗೆ ಕ್ಷಾರಸಮುದ್ರದ ಸಾರವೇ ಸಾಕು' ಎನ್ನಲು ಅನರ್ಘವಾದ ಆ ರತ್ನಪ್ರಾಯನು ತನ್ನ ತೋಳುಗಳು ನೋಯುವಂತೆ ಸಮುದ್ರವನ್ನು ಕಡೆದು ಅವರಿಗೆ ಅಮೃತ ಕೊಟ್ಟು ಉಪಕರಿಸಿದನು. ದೇವತೆ ಗಳ ಅಮೃತದಂತೆ ಇಲ್ಲ ಆಳ್ವಾರರುಗಳ ಅಮೃತನಾದ ಪರಮಾತ್ಮಾ. ಅವನು ನಿತ್ಯಸನ್ನಿಧಿ ಮಾಡಿರುವನು ಈ ದಿವ್ಯದೇಶದಲ್ಲಿ. ಆತ್ಮಗುಣ ಪ್ರಚುರರಾದ ವರೂ, ವೇದಗಳನ್ನೆಲ್ಲಾ ಅಧಿಕರಿಸಿದವರೂ ಆದ ವಿಪ್ರಶ್ರೇಷ್ಠರು ಭಗವದನು ಭವದಿಂದ ಧನ್ಯರಾಗಿರುವ ದೇಶ ಇದು. ಇಂಥ ಪರಮ ಪವಿತ್ರವಾದ ಕ್ಷೇತ್ರ ವನ್ನು ಸೇವಿಸಬೇಕೆಂದು ತಮ್ಮ ಮನಸ್ಸಿಗೆ ತಿಳಿಯ ಹೇಳಿದ್ದಾರೆ.

ಉಂಬರುಂ ಇವ್ವೇಯುಲಹುಂ ಏಳ್ ಕಡಲುಮೆಲ್ಲಾಂ
ಉಂಡಪಿರಾನ್
ಅಂಡರ್ ಹಳ್ ಮುನ್ ಕಂಡು ಮಹಿಳ್ವು ಎಯ್‌ದ
ಕುಂಬಮಿಹು ಮದಯಾನೈ ಮರುಪ್ಪೊಶಿತ್ತು ಕಂಜನ್
ಕುಂಜಿಪಿಡಿತ್ತು
ಅಡಿತ್ತ ಪಿರಾನ್ ಕೋಯಿಲ್ ಮರುಂಗೆಂಗುಂ
ಪೈಂಪೊನೊಡು ವೆಣ್ ಮುತ್ತಂ ಪಲಪುನ್ನೈಕಾಟ್ಟ
ಪಲಂಗನಿಹಳ್ ತೇನ್ ಕಾಟ್ಟ ಪಡಮ್ ಅರವು ಏರ್ ಅಲ್ ಹುಲ್
ಅಂಬನ್ನೈಯಕಣ್ ಮಡವಾರ್ ಮಹಿಳ್ವು ಎಯ್‌ದು
ನಾಂಗೂರ್ ಅರಿಮೇಯವಿಣ್ಣಹರಂ ವಣಂಗು ಮಡನೆಂಜೇ
॥೩॥

(ಉಂಬರುಂ) ದೇವಜಾತಿಗಳವರೂ (ಇವ್ವೇಯುಲಹಂ) ಈ ಸಪ್ತಲೋಕಗಳೂ, (ಏಳ್‌ಕಡಲುಂ) ಸಪ್ತಸಮುದ್ರಗಳೂ (ಎಲ್ಲಾಂಉಂಡಪಿರಾನ್) ಎನ್ನುವ ಇವೆಲ್ಲವನ್ನೂ ಪ್ರಲಯಕಾಲದಲ್ಲಿ ಉಂಡು ತನ್ನ ಹೊಟ್ಟೆಯಲ್ಲಿಟ್ಟು ರಕ್ಷಿಸಿದ ಉಪಕಾರಶೀಲನೂ, (ಮುನ್) ಹಿಂದೊಂದು ಕಾಲದಲ್ಲಿ (ಅಂಡರ್ ಹಳ್‌ಕಂಡು ಮಹಿಳ್ವು ಎಯ್‌ದ) ಅಂಡದಲ್ಲಿದ್ದವರೆಲ್ಲ ಎಂದರೆ ಗೋಪಾಲಕರು ಕಣ್ಣಿಂದ ನೋಡಿ ಸಂತೋಷಪಡುವಂತೆ (ಕುಂಬಂಮಿಹುಮಂದಯಾನೈ ಮರುಪ್ಪು ಒಶಿತ್ತು) ಕುಂಭದೋಪಾದಿಯಲ್ಲಿ ದೊಡ್ಡ ಮಸ್ತಕವನ್ನುಳ್ಳದೂ, ಮದಿಸಿದುದೂ ಆದ ಕುವಲಯಾಪೀಡದ ದಂತಗಳನ್ನು ಮುರಿದು (ಕಂಜನ್‌ಕುಂಜಿ ಪಿಡಿತ್ತು) ಕಂಸನ ಜುಟ್ಟನ್ನು ಹಿಡಿದು ಎಳೆದು (ಅಡಿತ್ತ) ಅವನನ್ನು ನಾಶಪಡಿಸಿದ (ಪಿರಾನ್) ಉಪಕಾರಕನೂ ಆದ ಭಗವಂತನು ಇರುವ (ಕೋಯಿಲ್) ದಿವ್ಯದೇಶವಾದುದೂ, (ಮರುಂಗು ಎಂಗುಂ ಪಲಪುನ್ನೈ) ಎಲ್ಲ ಪಕ್ಕಗಳಲ್ಲಿಯೂ ಇರುವ ಬಗೆ ಬಗೆಯ ಪುನ್ನೈವೃಕ್ಷಗಳಲ್ಲಿ (ಪೈಪನ್ ಪೊನೊಡು ವೆಣ್ ಮುತ್ತಂ ಕಾಟ್ಟ) ಮೊಗ್ಗಾಗಿ ಹೂವಾಗಿ ಅರಳಿ ನಿಂತು ಸುಂದರವಾದ ಹೊನ್ನನ್ನೂ ಬೆಳ್ಳಗಿರುವ ಮುತ್ತುಗಳನ್ನೂ ಪ್ರಕಾಶಪಡಿಸುವುದೂ, (ಪಲಂಗನಿಹಳ್‌ತೇನ್‌ಕಾಟ್ಟ)ಹಲಸಿನ ಹಣ್ಣುಗಳೂ ಜೇನನ್ನು ಸ್ರವಿಸುತ್ತಿರುವಂಥದೂ, (ಪಡಮ್ ಅರವು ಏರ್ ಅಲ್‌ಹುಲ್ ಅಂಬು ಅನ್ನೈಯಕಣ್) ಹೆಡೆಯನ್ನೆತ್ತಿದ

ಸರ್ಪವನ್ನು ಹೋಲುವ ನಿತಂಬ ಪ್ರದೇಶವನ್ನೂ ಅಂಬಿನಂತೆ ನಿಶಿತವಾದ ಕಣ್ಣುಗಳನ್ನೂ ಉಳ್ಳ (ಮಡವಾರ್ ಮಹಿಟ್ಟವು ಎಯ್‌ದುಂ) ಸ್ತ್ರೀಗಳು ಆನಂದದಿಂದ ಬಾಳುವ ಜಾಗವಾದುದೂ ಆದ (ನಾಂಗೂರ್ ಅರಿಮೇಯವಿಣ್ಣಹರಂ ವಣಂಗು ಮಡನೆಂಜೇ) ತಿರುನಾಂಗೂರಿನಲ್ಲಿ ಅರಿಮೇಯವಿಣ್ಣಹರಂ ಕ್ಷೇತ್ರವನ್ನು, ಎಲೈ ಭವ್ಯವಾದ ಮನಸ್ಸೇ, ಹೋಗಿ ಸೇವಿಸು.

ಕಂಸನಿರಸನವನ್ನಿಲ್ಲಿ ಅನುಸಂಧಾನ ಮಾಡಿದ್ದಾರೆ. ಪ್ರಳಯದಿಂದ ನೋವುಂಟಾಗದಂತೆ ದೇವಜಾತಿಯೇ ಮೊದಲಾದವೆಲ್ಲವನ್ನೂ ತನ್ನ ಹೊಟ್ಟೆಯಲ್ಲಿಟ್ಟು ರಕ್ಷಿಸಿದ ಉಪಕಾರಕನವನು. ಕೃಷ್ಣನಾಗಿ ಬಂದು ಅವತರಿಸಿ ಗೋಪಾಲಕರೆಲ್ಲ ಕಣ್ಣಿಂದ ನೋಡಿ ಸಂತೋಷಿಸುವಂತೆ ಕುವಲಯಾಪೀಡವನ್ನು ಮರ್ದಿಸಿ ಕಂಸನನ್ನು ವಧಿಸಿ ಎಲ್ಲರನ್ನೂ ಸಲಹಿದ ಪರಮೋಪಕಾರಕನು ವಾಸಮಾಡುವ ಸ್ಥಾನ ಇದು. ಸುರ ಹೊನ್ನೆ ಹೂಗಳು ಎಲ್ಲೆಲ್ಲೂ ಸಮೃದ್ಧವಾಗಿ ಅರಳಿರುವಂತಹ ದೇಶ ಇದು. ಹಲಸಿನ ಹಣ್ಣಿನ ಮಧುರರಸ ಹೊಳೆಯಾಗಿ ಹರಿಯುವುದು. ಭವ್ಯರಾದ ನಾಗರಿಕ ಸ್ತ್ರೀಯರು ಯಶಾವಾಗಲೂ ಆನಂದಪಡುವ ಜಾಗ ಇದಾಗಿದೆ.

ಓಡಾದ ಆಳ್‌ಅರಿಯಿನ್ ಉರುವನರ್ ಅದುಕೊಂಡು
ಅನ್ರು ಉಲಪ್ಪಿಲ್
ಮಿಹು ಪೆರುವರತ್ತ ಇರಣಿಯನ್ನೈ ಪತ್ತಿ
ವಾಡಾದ ವಳ್ ಉಹಿರಾಲ್ ಪಿಳಂದು ಅವನ್ ತನ್
ಮಹನುಕ್ಕು
ಅರುಳ್‌ಶೆಯ್‌ದಾನ್ ವಾಟುಂ ಇಡಂ ಮಲ್ಲಿ ಹೈಶೆಂಗಟುನೀರ್
ಶೀಡೇರುಮಲರ್ ಶೆರುನ್ದಿ ಶೆಟುಂಕಮುಕಮ್‌ಪಾಳೈ
ಶೆಣ್ಬಹಂಗಳ್ ಮಣನಾರುಂ ವಣ್ ಪೊಟಿಲಿನೊಡೇ
ಆಡೇರು ವಯಲ್ ಆಲೈಪ್ಪುಹೈಕಮಟುವರ್
ನಾಂಗೂರ್ ಅರಿಮೇಯವಿಣ್ಣಹರಂ ವಣಂಗು ಮಡನೆಂಜೇ ॥೪॥

(ಅನ್ರು) ಹಿಂದೊಂದು ಕಾಲದಲ್ಲಿ (ಓಡಾದ) ಯುದ್ಧದಲ್ಲಿ ಹಿಮ್ಮೆಟ್ಟದ (ಆಳ್ ಅರಿಯಿನ್ ಉರವಂ ಅದು ಕೊಂಡು) ನರಸಿಂಹರೂಪಿಯಾಗಿ (ಉಲಪ್ಪಿಲ್ ಮಿಹುಪೆರುವರತ್ತ) ಕೊನೆಯೇ ಇಲ್ಲದಂತಹ ದೊಡ್ಡ ದೊಡ್ಡ ವರಗಳನ್ನು

ಪಡೆದವನಾದ (ಇರಣಿಯನ್ನೆ ಪತ್ತಿ) ಹಿರಣ್ಯಕಶಿಪುವನ್ನು ಹಿಡಿದುಕೊಂಡು (ವಾಡಾದವಳ್ ಉಹಿರಾಲ್ ಪಿಳಂದು) ಸ್ವಲ್ಪವೂ ಬಾಗದ ತೀಕ್ಷ್ಣವಾದ ನಖಗಳಿಂದ ಅವನನ್ನು ಸೀಳಿ (ಅವನ್ ತನ್ ಮಹನುಕ್ಕು ಅರುಳ್‌ಶೆಯ್‌ದಾನ್) ಅವನ ಮಗನಾದ ಪ್ರಹ್ಲಾದನಿಗೆ ಕೃಪೆ ತೋರಿದ ಸ್ವಾಮಿಯು (ವಾಟಿಂ ಇಡಂ) ನಿತ್ಯವಾಸ ಮಾಡುವ ದಿವ್ಯ ದೇಶವಾದುದೂ, (ಮಲ್ಲಿಹೈ ಶೆಂಗಟು ನೀರ್ ಶೇಡು ವಿರುಮಲರ್ ಶೆರುಂದೀ) ಮಲ್ಲಿಗೆ, ಶೆಂಗಟುನೀರ್ ಕುಸುಮ, ಗೊಂಚಲು ಗೊಂಚಲಾಗಿ ಅರಳಿರುವ ಹೂಗಳನ್ನುಳ್ಳ ಸುರಹೊನ್ನೆಗಳು (ಶೇಟು ಕಮುಕವರ್ ಪಾಳೈ) ಸುಂದರವಾದ ಅಡಿಕೆಯ ಹೊಂಬಾಳೆಗಳು, (ಶೆಣ್ಬಹಂಗಳ್) ಚಂಪಕ ಪುಷ್ಪಗಳು (ಮಣಂನಾರುಂ) ಪರಿಮಳವನ್ನು ಎಲ್ಲೆಲ್ಲಿಯೂ ಹರಡುತ್ತಿರುವಂಥದೂ, (ವಣ್ ಪೋಟಿಲಿನ್ ಊಡೇ) ಸುಂದರವಾದ ತೋಪುಗಳ ನಡುವೆ (ಆಡು ವಿರುವಯಲ್) ಕಬ್ಬುಗಳನ್ನು ಅರೆಯಲು ಮಾಡಿದ ಪ್ರದೇಶಗಳಲ್ಲಿ (ಆಲೈಪ್ಪುಹೈ ಕಮಂಟುಮ್) ಕಬ್ಬಿನ ಆಲೆಮನೆಯ ಹೊಗೆ ಪರಿಮಳಿಸುವಂಥದೂ ಆದ (ನಾಂಗೂರ್ ಅರಿಮೇಯವಿಣ್ಣಹರಂ ವಣಂಗು ಮಡನೆಂಜೇ) ತಿರುನಾಂಗೂರಿನಲ್ಲಿರುವ ಅರಿಮೇಯವಿಣ್ಣಹರಂ ಕ್ಷೇತ್ರವನ್ನು, ಎಲೈ ಒಳ್ಳೆಯ ಮನಸ್ಸೇ, ಹೋಗಿ ಸೇವಿಸು.

'ಉಗ್ರಂ ವೀರಂ' ಎಂದು ಸ್ತುತಿಸಿರುವಂತೆ ನೃಸಿಂಹವೆಂಬುವ ಅತ್ಯದ್ಭುತ ದಿವ್ಯರೂಪವನ್ನು ಹೊಂದಿ ತೋರಿದ ಆ ಸ್ವಾಮಿ, 'ಈ ಕಂಭದಲ್ಲಿ ನಿನ್ನ ಸ್ವಾಮಿಯನ್ನು ತೋರಿಸು' ಎಂದು ಘರ್ಜಿಸಿ ಪ್ರಹ್ಲಾದಕುಮಾರನನ್ನು ಹಿರಣ್ಯಕಶಿಪು ಆಕ್ರಮಿಸಿದ ಆ ಕ್ಷಣದಲ್ಲಿಯೇ. ಆ ಹಿರಣ್ಯಕಶಿಪು ನಿಸ್ಸಂಖ್ಯವಾದ ವರವನ್ನು ಪಡೆದುಕೊಂಡಿದ್ದ. ಅವನಿಗೆ ವರವನ್ನು ಕೊಟ್ಟ ದೇವತೆಗಳೂ ಕೂಡ ನೆಮ್ಮದಿಯಿಂದ ಇರುವುದಕ್ಕಾಗದಂತೆ ಆಗಿಹೋಯಿತು. ಆ ಹಿರಣ್ಯಕನ ವಕ್ಷೋವಿದಾರಣದಲ್ಲಿಯೂ ಎಳ್ಳಷ್ಟೂ ಬಾಗದಂತಹ ವಜ್ರನಖಗಳಿಂದ ಸ್ವಾಮಿ ಅವನನ್ನು ಸೀಳಿಹಾಕಿದ. 'ನನ್ನ ಕರುಣೆಗೂ ಪಾತ್ರನಾಗದೆ ಹಿರಣ್ಯಕಶಿಪು ಮುಗಿದುಹೋದನಲ್ಲ'–ಎಂಬ ಕೊರೆ ತೀರುವಂತೆ ಅವನ ಮಗನ ಮೇಲೆ ದಯಾವರ್ಷ ಮಾಡಿದ ಸ್ವಾಮಿ. ಆ ಆಯಾಸವೆಲ್ಲ ಹೋಗುವಂತೆಯೂ ಆನಂದಿಸುವಂತೆಯೂ ಅವನು ನೆಲಸಲು ತಕ್ಕ ಸ್ಥಾನವಾಯಿತು ಈ ದಿವ್ಯ ಕ್ಷೇತ್ರ. ಈ ಕ್ಷೇತ್ರದಲ್ಲಿನ ಪುಷ್ಪಸಮೃದ್ಧಿ ಇದರ ಚೆಲುವನ್ನು ಮಿಗಿಲಾಗಿಸಿದೆ.

ಇಂಥ ಕ್ಷೇತ್ರದಲ್ಲಿರುವ ಅರಿಮೇಯ ವಿಣ್ಣಹರಕ್ಕೆ ಹೋಗಿ ಸೇವಿಸು ಎಂದು ಮನಸ್ಸಿಗೆ ತಿಳಿಯ ಹೇಳುತ್ತಾರೆ.

ಕಂಡವರ್‌ತವರ್ ಮನಂ ಮಹಿಟ ಮಾವಲಿತನ್ ವೇಳ್‌ವಿ
ಕಳವಿನ್
ಮಿಂಹು ಶಿರುಕುರಳಾಯ್ ಮೂವಡಿ ಎನ್ರಿರಂನ್ದಿಟ್ಟು
ಅಂಡಮುಂ ಇವ್ವಲೈ ಕಡಲುಂ ಅವನಿಹಳುಮೆಲ್ಲಾಂ
ಅಳಂದಪಿರಾನ್
ಅಮರುಮ್ ಇಡಂ ವಳಂಕೊಳ್ ಪೊಟಿಲ್ ಅಯಲೇ
ಅಂಡಂ ಉರುಮುಟವು ಒಲಿಯುಮ್ ವಂಡಿನಂಗಳ್
ಒಲಿಯುಮ್
ಅರುಮರೈಯಿನೊಲಿಯುಂ ಮಡವಾರ್
ಶಿಲಂಬಿನೊಲಿಯುಮ್
ಅಂಡಂ ಉರುಮ್ ಅಲೈಕಡಲಿನೊಲಿ ತಿಹಟು
ನಾಂಗೂರ್ ಅರಿಮೇಯವಿಣ್ಣಹರಂ ವಣಂಗು ಮಡನೆಂಜೇ
॥೫॥

(ಕಂಡವರ್ ತವರ್ ಮನಂ) ನೋಡಿದವರೆಲ್ಲರ ಮನಸ್ಸೂ (ಮಹಿಟ) ಆನಂದ ಪಡುವಂತೆ (ಮಾವಲಿ ತನ್‌ವೇಳ್ವಿ) ಮಹಾಬಲಿಯ ಯಾಗ ಭೂಮಿಯಲ್ಲಿ (ಕಳವಿನ್‌ಮಿಂಹು) ವಂಚನೆಯಿಂದ (ಶಿರುಕುರಳ್‌ಆಯ್) ಚಿಕ್ಕ ವಾಮನರೂಪಿ ಯಾಗಿ ಬಂದು (ಮೂವಡಿ ಎನ್ರು ಇರಂದಿಟ್ಟು) ಮೂರಡಿ ನೆಲವನ್ನು ಕೊಡು ಎಂದು ಯಾಚಿಸಿ (ಅಂಡಮುಂ) ಮೇಲಿನ ಲೋಕಗಳನ್ನು (ಇವ್ವೈ ಅಲೈಕಡಲ್ ಅವನಿಹಳುಂ) ಅಲೆಗಳೇಳುತ್ತಿರುವ ಸಮುದ್ರಗಳೊಡನೆ ಕೂಡಿದ ಭೂಮಂಡಲ ವನ್ನೂ (ಎಲ್ಲಾಂ) ಮತ್ತೆಲ್ಲವನ್ನೂ (ಅಳಂದ ಪಿರಾನ್) ಅಳೆದುಕೊಂಡ ನಮ್ಮ ಸ್ವಾಮಿಯು (ಅಮರುಂ ಇಡಂ) ನಿತ್ಯ ವಾಸಮಾಡುತ್ತಿರುವ ದಿವ್ಯ ದೇಶ ವಾದುದೂ, (ವಳ್‌ವರ್ ಕೊಳ್ ಪೊಟಿಲ್ ಅಯಲೇ) ಸುಂದರವಾದ ತೋಪು ಗಳ ಪಕ್ಕದಲ್ಲಿ (ಅಂಡಂ ಉರುಮುಟವು ಒಲಿಯುಂ) ಆಕಾಶದವರೆಗೂ ವ್ಯಾಪಿ ಸುವ ವಾದ್ಯಘೋಷಗಳೂ, (ವಂಡು ಇನಂಗಳ್ ಒಲಿಯುಂ) ದುಂಬಿಗಳ ಹಿಂಡಿನ ಝೇಂಕಾರವೂ, (ಅರುಮರೈಯಿನ್ ಒಲಿಯುಂ) ಶ್ರೇಷ್ಠವಾದ ವೇದ

ಗಳ ಘೋಷವೂ (ಮಡವಾರ್ ಶಿಲಂಬಿನ್ ಒಲಿಯುಂ) ಸ್ತ್ರೀಯರುಗಳ ಕಾಲಂದುಗೆಗಳ ಶಬ್ದವೂ (ಅಂಡಂ ಉರುಂ ಅಲೈಕಡಲಿನ್ ಒಲಿ ತಿಪಟುಂ) ಅಂಡಭಿತ್ತಿಯವರೆಗೂ ಏಳುವ ಅಲೆಗಳಿಂದ ಪ್ರಕ್ಷುಬ್ಧವಾದ ಪ್ರಳಯಕಾಲದ ಸಾಗರದ ಘೋಷದೋಪಾದಿಯಲ್ಲಿ ಬೆಳಗುತ್ತಿರುವ (ನಾಂಗೂರ್ ಅರಿಮೇಯ ವಿಣ್ಣ ಹರಂ ವಣಂಗು ಮಡನೆಂಜೇ) ನಾಂಗೂರಿನಲ್ಲಿರುವ ಅರಿಮೇಯವಿಣ್ಣ ಹರಂ ಕ್ಷೇತ್ರವನ್ನು ಎಲೈ ಭವ್ಯವಾದ ಮನಸ್ಸೇ, ಹೋಗಿ ಸೇವಿಸು.

ದೇವತೆಗಳನ್ನು ಅನುಗ್ರಹಿಸುವುದಕ್ಕಾಗಿ ವಾಮನನಾಗಿ ಬಂದ ಸ್ವಾಮಿ ತನ್ನ ಶ್ರೀಪಾದಗಳನ್ನು ಬೆಳೆಸಿ ತನ್ನ ಚರಣ ಪಂಕಜದ ಸ್ಪರ್ಶದಿಂದ ಸಕಲ ಚರಾಚರ ಗಳನ್ನು ಅನುಗ್ರಹಿಸಿದುದನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಅನು ಕೂಲರು, ಪ್ರತಿಕೂಲರು ಎಂಬ ಭೇದವಿಲ್ಲದೆ ಕಣ್ಣಿಂದ ಕಂಡವರ ಮನಸ್ಸು ಉಲ್ಲಸಿತವಾಗುವಂತೆ ದಿವ್ಯರೂಪ ಧರಿಸಿ ಸ್ವಾಮಿ ಮಹಾಬಲಿಯ ಯಜ್ಞ ವಾಟಕ್ಕೆ ಬಂದನು. 'ಇವನು ದೇವಕಾರ್ಯವನ್ನು ಮಾಡುತ್ತಾನೆ' ಎಂದು ಯಾರಿಗೂ ತೋರದಂತೆ ತನ್ನ ಸ್ವರೂಪವನ್ನು ಮರೆಸಿಕೊಂಡು ಬಂದನವನು. ಮೂರಡಿಯ ನೆಲವನ್ನು ಯಾಚಿಸಿದ ಅವನು ಮಹಾಬಲಿಯನ್ನು. ದಾನಧಾರೆ ಕೈಮೇಲೆ ಬಿದ್ದ ಕ್ಷಣವೇ ತ್ರಿವಿಕ್ರಮನಾಗಿ ಬೆಳೆದು ಅನಾಯಾಸದಿಂದ ಆಕಾಶ ವನ್ನೂ ಭೂಮಂಡಲವನ್ನೂ ಸಾಗರಗಳನ್ನೂ ಅಳೆದುಕೊಂಡು ತನ್ನ ಪಾರಮ್ಯ ವನ್ನು ನಮಗೆ ತಿಳಿಸಿಕೊಟ್ಟ ಆ ಪರಮೋಪಕಾರಕ ವಾಸಿಸುವ ದಿವ್ಯಸ್ಥಾನ ಇದು. ಆ ಕ್ಷೇತ್ರದ ಸೊಬಗು ವರ್ಣನಾತೀತ. ಸಮೃದ್ಧಿ ಹೊಂದಿರುವ ತೋಪುಗಳು, ಅಂಡಕಟಾಹವನ್ನು ಮುಟ್ಟುವ ವಾದ್ಯಘೋಷ, ಮಧುಪಾನ ಮಾಡಿ ಮತ್ತ ರಾದ ಭೃಂಗಗಳ ಆನಂದ ಧ್ವನಿ, ವೇದಘೋಷ, ನೃತ್ಯಕ್ಕಾಗಿ ಸನ್ನದ್ಧರಾದ ಸ್ತ್ರೀಯರ ಮಂಜೀರ ಧ್ವನಿ ಮೊದಲಾದವುಗಳಿಂದ ಬೆಳಗುವ ಕ್ಷೇತ್ರ ಅದು.

**ವಾಳ್‌ನೆಡುಂಗಣ್ ಮಲರ್‌ಕ್ಕೊನ್ದಲ್‌ಮೈತ್ತಿಲಿಕ್ಕಾ**
**ಇಲಂಗೈ ಮನ್ನನ್**
**ಮುುಡಿ ಬರುಪದುಂ ಶೋಳಿರುಪದುಂ ಪೋಯ್‌ಉದಿರ**
**ತಾಳ್‌ನೆಡು ತಿಣ್‌ಶಿಲೈವಳೈತ್ತ ತಯರತನ್ ಶೆಯ್‌ ಎನ್‌ತನ್**
**ತನಿಚ್ಚರಣ್ ವಾನವರ್ಕ್ಕರಶು ಕರುದುಮಿಡಂ ತಡವಾರ್**

**ಶೇಣಿಡಂಗೊಳ್ ಮಲರ್ಕ್ಕಮಲಂ ಶೇಲ್ ಕಯಲ್‍ಹಳ್ ವಾಳೈ**
**ಶೆನ್ನೆಲೊಡುಮಡುತ್ತು ಅರಿಯ ಉದಿರ್‍ನ್ದ ಶೆೞುಮುತ್ತಮ್**
**ವಾಳ್ ನೆಡುಂಗಣ್ ಕಡೈಶಿಯರ್‍ಹಳ್ ವಾರುಂ ಅಣಿ**
**ನಾಂಗೂರ್ ಅರಿಮೇಯ ವಿಣ್ಣಹರಂ ವಣಂಗು ಮಡನೆಂಜೇ**
**॥೬॥**

(ವಾಳ್ ನೆಡಂ ಕಣ್) ಕತ್ತಿಯಂತೆ ಹರಿತವಾದುದೂ ನೀಳವಾದುದೂ ಆದ ನೇತ್ರಗಳನ್ನೂ, (ಮಲರ್‌ಕೂಂದಲ್) ಹೂ ಮುಡಿದ ತಲೆಗೂದಲನ್ನೂ ಉಳ್ಳ (ಮೈತಿಲಿಕ್ಕಾ) ಸೀತಾದೇವಿಯನ್ನು ಸೆರೆಯಲ್ಲಿಟ್ಟ ಅಪರಾಧಕ್ಕಾಗಿ (ಇಲಂಗೈಮನ್ನನ್ ಒರುಪದು ಮುಡಿಯುಂ ಇರುಪದು ತೋಳುಂ) ರಾವಣನ ಹತ್ತು ತಲೆಗಳೂ ಇಪ್ಪತ್ತು ತೋಳುಗಳೂ (ಪೋಯ್‌ಉದಿರ) ಭಿನ್ನಭಿನ್ನವಾಗಿ ಉದುರುವಂತೆ (ತಾಳ್‌ನೆಡು ತಿಣ್ ಶಿಲೈವಳೈತ್ತ) ಹೆದೆಯನ್ನೇರಿಸಿದುದೂ ನೀಳವಾದುದೂ ದೃಢವಾದುದೂ ಆದ ಬಿಲ್ಲನ್ನು ಬಗ್ಗಿಸಿದ (ತಯರತನ್ ಶೇಯ್) ದಶರಥ ಪುತ್ರನೂ (ಎನ್‌ತನ್‌ತನಿಶರಣ್) ನನಗೆ ಅಸದೃಶನಾದ ರಕ್ಷಕನೂ (ವಾನವರ್ಕ್ಕುಅರಶು) ನಿತ್ಯಸೂರಿನಾಥನೂ ಆದ ಭಗವಂತನು (ಕರುದುಂ ಇಡಂ) ಮನ ಒಲಿದು ಇರುತ್ತಿರುವ ದಿವ್ಯದೇಶವಾದುದೂ, (ತಡವರ್ ಆರ್ ಶೇಣ್ ಇಡಂ ಕೊಳ್) ಸರೋವರಗಳಲ್ಲಿ ತುಂಬಿರುವುವೂ ಅವಕಾಶವಿರುವ ಜಾಗದಷ್ಟೂ ಉನ್ನತವಾಗಿ ಬೆಳೆದಿರುವುವೂ ಆದ (ಕಮಲಂ ಮಲರ್) ತಾವರೆ ಹೂಗಳನ್ನೂ (ಶೇಲ್‌ಕಯಲ್‌ವಾಳೈ) ಶೇಲ್‌ಕಯಲ್‌ವಾಳೈ ಎಂಬುವ ಮೀನುಗಳನ್ನು (ಶೆನ್ನೆಲೊಡುಮಡುತ್ತು) ಕೆಂಭತ್ತದ ಪಯಿರು ಗಳೊಡನೆ ಸೇರಿಸಿ (ಅರಿಯ) ಕತ್ತರಿಸಲು (ಉದಿರ್‍ನ್ದಶೆೞುಮುತ್ತಂ)ಅವುಗಳಿಂದ ಉದುರಿದ ಚೆಲುವಾದ ಮುತ್ತುಗಳನ್ನು (ವಾಳ್‌ನೆಡಂ ಕಣ್‌ಕಡೈಶಿಯರ್‌ಹಳ್ ವಾರುಂ) ಕೂರಂಬಿನಂತೆ ನೀಳವಾದ ಕಣ್ಣುಗಳುಳ್ಳ ಅಂತ್ಯಜಾತಿಯ ಹೆಂಗಸರು ಬಾಚಿ ಇಡುವಂತಹ ಜಾಗವಾದುದೂ ಆದ (ಅಣಿನಾಂಗೂರ್ ಅರಿಮೇಯ ವಿಣ್ಣಹರಂ ವಣಂಗು ಮಡನೆಂಜೇ) ತಿರುನಾಂಗೂರ್ ಕ್ಷೇತ್ರದಲ್ಲಿರುವ ಅರಿ ಮೇಯ ವಿಣ್ಣಹರಂ ಕ್ಷೇತ್ರವನ್ನು ಹೋಗಿ, ಎಲೈ ಮನಸ್ಸೇ, ಸೇವಿಸು.

ಹೊಳೆಯುವ ಅಲಗಿನಂತೆ ಪ್ರಕಾಶಮಾನವಾದವೂ ದೀರ್ಘ ದೃಷ್ಟಿ ಪ್ರಸರಣವನ್ನುಳ್ಳವೂ ಆದ ಸುಂದರವಾದ ನೇತ್ರಗಳನ್ನೂ ಸೌಗಂಧ್ಯಸೌಕು

ಮರ್ಯಾದೆಗಳನ್ನುಳ್ಳ ಹೂವಿನಂತೆ ಇರುವ ಮುಡಿಯನ್ನೂಉಳ್ಳ ಸೀತಾದೇವಿಯನ್ನು ಸೆರೆಯಿಟ್ಟ ರಾವಣನ ಹತ್ತು ತಲೆಗಳನ್ನೂ ಇಪ್ಪತ್ತು ಕೈಗಳನ್ನೂ ದಿಕ್ಕುದಿಕ್ಕಿಗೆ ಕತ್ತರಿಸಿ ಚೆಲ್ಲಿದ ದಶರಥಾತ್ಮಜನು ನೆಲಸಿರುವ ದಿವ್ಯಕ್ಷೇತ್ರ ಇದು. ಆಕಿಂಚನರಾದ ನಮಗೆ ಉಪಾಯಾಂತರ ಸ್ಥಾನದಲ್ಲಿದ್ದು ಉಪಾಯವಾಗುವವನೂ ನಿತ್ಯ ಸೂರಿಸೇವ್ಯನೂ ಒಲಿದು ಬಂದು ನಿತ್ಯ ವಾಸಮಾಡುವ ಕ್ಷೇತ್ರ ಇದು. ಜಗದಾಭರಣವಾದ ಈ ದಿವ್ಯಕ್ಷೇತ್ರಕ್ಕೆ ಹೋಗಿ ಅಲ್ಲಿರುವ ಅರಿಮೇಯ ವಿಣ್ಣಹರವನ್ನು ಸೇವಿಸಿ ಧನ್ಯನಾಗು ಎಂದು ತಮ್ಮ ಮನಸ್ಸಿಗೆ ತಿಳಿಸುತ್ತಿದ್ದಾರೆ.

**ತೀಮನತ್ತಾನ್ ಕಂಜನದು ವಂಜನ್ನೈಯಿಲ್ ತಿರಿಯುವತ್**
**ತೇನುಕನುಮ್ ಪೂತನೈತನ್ ಆರುಯಿರುಂ ಶೆಹುತ್ತಾನ್**
**ಕಾಮನೈತಾನ್ ಪಯನ್ದ ಕರುಮೇನಿ ಉಡೈ ಅಮ್ಮಾನ್**
**ಕರುದುಮಿಡಂ ಪೊರುದು ಪುನಲ್‌ತುರ್ಕೈ ತುರ್ಕೈಮುತ್ತುನ್ದಿ**
**ನಾ ಮನತ್ತಾಲ್ ಮಂದಿರಂಗಳ್ ನಾಲ್‌ವೇದಂ ಐನ್ದು**
**ವೇಳ್ವಿಯೋಡಾರಂಗಂ ನವಿನ್ರುಕಲ್ಲೈ ಪಯಿನ್ರು ಅಂಗು**
**ಅವರ್‌ಮನತ್ತು ಮರೈಯವರ್‌ಹಳ್ ಪಯಿಲುಂ ಅಣಿ**
**ನಾಂಗೂರ್ ಅರಿಮೇಯ ವಿಣ್ಣಹರಂ ವಣಂಗು ಮಡನೆಂಜೇ**

**॥೭॥**

(ತೀಮನತ್ತಾನ್) ಕೆಟ್ಟ ಮನಸ್ಸನ್ನುಳ್ಳ (ಕಂಜನದು ವಂಜನ್ನೈಯಿನ್ ತಿರಿಯುಂ) ಕಂಸನ ದುಷ್ಟಕೃತ್ಯಗಳಿಗೆ ಸಂದು ಕ್ರೂರವಾದ ಮನಸ್ಸಿನೊಡನೆ ತಿರಿದುಕೊಂಡಿರುತ್ತಿದ್ದ (ತೇನುಕನುಂ ಪೂತನೈತನ್ ಆರುಯಿರುಂ) ಧೇನುಕ, ಪೂತನಿ ಇವರುಗಳೊಡನೆ ಅವರ ಪ್ರಾಣವನ್ನೂ (ಶೆಹುತ್ತಾನ್) ನಾಶಪಡಿಸಿದವನೂ, (ಕಾಮನೈಪಯುಂದ ಕರುಮೇನಿ ಉಡೈ ಅವರ್ಮಾನ್) ಮನ್ಮಥನನ್ನು ಪುತ್ರನನ್ನಾಗಿ ಪಡೆದುಕೊಂಡವನಾಗಿ ನೀಲಮಣಿಯಂತೆ ಸುಂದರವಾದ ದಿವ್ಯಮಂಗಲ ವಿಗ್ರಹವನ್ನುಳ್ಳವನೂ ಆದ ನನ್ನ ಸ್ವಾಮಿಯು (ಕರುದು ಇಡಂ) ವಾಸಿಸಲು ಇಷ್ಟಪಡುವಂತಹ ದಿವ್ಯದೇಶವಾದುದೂ, (ಪುನಲ್ ಪೊರುದು ತುರ್ಕೈ ತುರ್ಕೈಮುತ್ತುಉನ್ದಿ) ಎಲ್ಲ ತೊರೆಗಳಲ್ಲಿಯೂ ಅಲೆಗಳೇಳುತ್ತಿರುವ ಜಲಗಳು ಮುತ್ತುಗಳನ್ನು ತಳ್ಳಿಕೊಂಡು ಬಂದು ಹಾಕುವಂಥದೂ, (ನಾ ಮನತ್ತಾಲ್) ನಾಲಗೆಯಿಂದಲೂ

ಮನಸ್ಸಿನಿಂದಲೂ (ಮಂದಿರಂಗಳ್) ಭಗವನ್ಮಂತ್ರಗಳನ್ನೂ (ನಾಲ್‌ವೇದಂ ಆರು ಅಂಗವ್) ನಾಲ್ಕು ವೇದಗಳನ್ನೂ ಆರು ವೇದಾಂಗಗಳನ್ನೂ (ನವಿನ್ರು) ಅಭ್ಯಾಸ ಮಾಡಿ (ಕಲ್ವೆ) ಮತ್ತಿತರ ಶಾಸ್ತ್ರಗಳನ್ನೂ (ಪಯಿನ್ರು) ಅಧಿಕರಿಸಿ (ಐನ್ದುವೇಳ್ವಿಯೊಡು) ಪಂಚಮಹಾಯಜ್ಞಗಳೊಡನೆ (ಅಂಗು ಆವ್ ಮನತ್ತು) ಆಮುಷ್ಮಿಕದಲ್ಲಿಯೇ ನೆಲಸಿದ ಮನಸ್ಸುಳ್ಳವರಾಗಿರುವ (ಮರ್ರೈಯು ವರ್ ಹಳ್‌ಪಯಿಲುಂ) ವೈದಿಕರುಗಳು ನಿತ್ಯ ವಾಸಮಾಡುತ್ತಿರುವಂಥದೂ ಆದ (ಅಣಿ ನಾಂಗೂರ್ ಅರಿಮೇಯವಿಣ್ಣಹರಂ ವಣ್ಣಂಗು ಮಡನೆಂಜೇ) ನಾಂಗೂರಿನಲ್ಲಿರುವ ಅರಿಮೇಯ ವಿಣ್ಣಹರಂ ಕ್ಷೇತ್ರಕ್ಕೆ ಹೋಗಿ, ಎಲೈ ಭವ್ಯವಾದ ಮನಸ್ಸೇ, ಸೇವಿಸು.

ಶ್ರೀಕೃಷ್ಣಾವತಾರ ಚೇಷ್ಟಿತಗಳನ್ನು ಇಲ್ಲಿ ಅನುಸಂಧಾನ ಮಾಡುತ್ತಾರೆ. ಕ್ರೂರ ಮನಸ್ಸುಳ್ಳ ಕಂಸನೂ ಅವನ ಹಾಗೆಯೇ ವಂಚಿಸಿ ಕೊಲ್ಲಲು ತಿರಿಯುತಿದ್ದ ಧೇನುಕ, ಪೂತನಿ ಮೊದಲಾದವರುಗಳ ಹೆಸರೂ ಪ್ರಾಣವೂ ಇಲ್ಲದಂತೆ ಅಳಿಸಿದ ಮಹಾನುಭಾವ ಅವನು. ಸೌಂದರ್ಯದಲ್ಲಿ ಎಂದರೆ ಅವನು ಕಾಮಜನಕ. ಅವನು ಒಲಿದು ಬಂದು ನೆಲಸಿರುವ ಕ್ಷೇತ್ರ ಇದು. ವೇದವೇದಾಂಗ ಪಾರಂಗತರೂ ಶಾಸ್ತ್ರಜ್ಞರೂ ಅನುಷ್ಠಾನ ತತ್ಪರರೂ ಪರಿಶುದ್ಧಾಂತಃಕರಣರೂ ಆದ ಭಾಗವತರು ನೆರೆದಿರುವ ಭವ್ಯವಾದ ಕ್ಷೇತ್ರ ಅದು.

ಕನ್ರುದನಾಲ್ ವಿಳವು ಎರಿಂದು ಕನಿಉದಿರ್‌ತ್ತ ಕಾಳೈ
ಕಾಮರುಶೀರ್ ಮುಹಿಲ್‌ವಣ್ಣನ್ ಕಾಲಿಹಳ್
ಮುಂನ್‌ಕಾಪ್ಪಾನ್
ಕುನ್ರುದನಾಲ್ ಮುಟ್ಕೈ ತಡತ್ತು ಕುಡಮಾಡುಕೂತ್ತನ್
ಕುಲವುಮ್ ಇಡಂ ಕೊಡಿಮದಿಳ್‌ಹಳ್ ಮಾಳಿಕೈ
ಕೋಪುರಂಗಳ್
ತುನ್ರು ಮಣಿಮಂಡಪಂಗಳ್ ಶಾಲೈಹಳ್ ತೂಮರ್ಯೈಯೋರ್
ತೊಕ್ಕುಈಂಡಿ ತೊಟುದಿಯೊಡು ವಿಹಪಯಿಲುಂ ಶೋಲೈ
ಅನ್ರು ಅಲರ್‌ವಾಯ್ ಮದುಉಂಡು ಅಂಗು ಅಳಿಮುರಲುಂ
ನಾಂಗೂರ್ ಅರಿಮೇಯ ವಿಣ್ಣಹರಂ ವಣಂಗು ಮಡನೆಂಜೇ
॥ ೮ ॥

(ಕನ್ರು ಅದನಾಲ್) ವತ್ಸಾಸುರನನ್ನು ತೆಗೆದುಕೊಂಡು (ವಿಳವು ಎರಿಂದು) ಕಪಿತ್ಥಾಸುರನ ಮೇಲೆ ಬೀಸಿ ಎಸೆದು (ಕನಿಉದಿರ್ತ್ತಕಾಳೈ) ಬೇಲದ ಹಣ್ಣು ಗಳನ್ನು ಉದುರಿಸಿದ ಯುವಕನೂ, (ಕಾಮರುಶೀರ್) ಆಶಿಸುವ ಕಲ್ಯಾಣ ಗುಣ ಗಳನ್ನುಳ್ಳವನೂ, (ಮುಹಿಲ್‌ವಣ್ಣನ್) ಕಾಳಮೇಘವರ್ಣನೂ, (ಮುನ್ರು ಕಾಲಿಹಳ್ ಕಾಪ್ಪಾನ್) ಹಿಂದೊಮ್ಮೆ ಹಸುಗಳನ್ನು ಪ್ರಬಲವಾದ ಮಳೆಯಿಂದ ರಕ್ಷಿಸಲು (ಕುನ್ರು ಅದನಾಲ್ ಮರಿತ್ತೆತಡುತ್ತು) ಗೋವರ್ಧನ ಪರ್ವತದಿಂದ ಮಳೆಯನ್ನು ತಡೆದವನೂ, (ಕುಡವರ್ ಆಡು ಕೂತ್ತನ್) ಘಟನರ್ತನವನ್ನು ಮಾಡಿದವನೂ ಆದ ನಮ್ಮ ಸ್ವಾಮಿಯು (ಕುಲವುಂ ಇಡಂ) ಒಲಿದು ಬಂದಿರು ತ್ತಿರುವ ದಿವ್ಯದೇಶವೂ, (ಕೊಡಿ ಮದಿಳ್‌ಹಳ್) ಧ್ವಜಗಳಿಂದ ಶೋಭಿಸುವ ಕೋಟೆಗಳನ್ನೂ (ಮಾಳಿಕೈ ಗೋಪುರಂಗಳ್) ಮಾಳಿಗೆಗಳನ್ನೂ ಗೋಪುರಗಳನ್ನೂ (ಮನ್ರುಮಣಿ ಮಂಟಪಂಗಳ್) ಸಾಂದ್ರವಾಗಿರುವ ಮಣಿಮಯವಾದ ಮಂಟಪ ಗಳನ್ನೂ (ಶಾಲೈಹಳ್) ಧರ್ಮಶಾಲೆಗಳನ್ನೂ ಹೊಂದಿರುವುದೂ, (ತೂಮರೈ ಯೋರ್) ಪರಿಶುದ್ಧರಾದ ಬ್ರಾಹ್ಮಣರು (ತೊಕ್ಕು ಈಂಡಿ) ಗುಂಪು ಗುಂಪಾಗಿ ಇರತಕ್ಕ ಸ್ಥಳವಾದುದೂ (ತೋಟುದಿಯೊಡು) ಪಕ್ಷಿಗಳ ಧ್ವನಿಯೊಡನೆ (ಮಿಹ ಪಯಿಲುಂ) ತುಂಬಿ ಇರುತ್ತಿರುವ (ಶೋಲೈ) ತೋಪುಗಳಲ್ಲಿ (ಅನ್ರು ಅಲರ್ ವಾಯ್) ಆವಾಗ ತಾನೇ ಅರಳಿದ ಹೂಗಳಲ್ಲಿ (ಮದು ಉಂಡು) ಮಕರಂದ ವನ್ನು ಪಾನಮಾಡಿ (ಅಂಗು ಅಳಿಮುರಲುಂ) ಅಲ್ಲಿ ದುಂಬಿಗಳು ಮೊರೆಯುತ್ತಿರು ವಂಥದೂ ಆದ (ನಾಂಗೂರ್ ಅರಿಮೇಯ ವಿಣ್ಣಹರಂ ವಣಂಗು ಮಡನೆಂಜೇ) ತಿರುನಾಂಗೂರಿನಲ್ಲಿರುವ ಅರಿಮೇಯ ವಿಣ್ಣಹರಂ ಕ್ಷೇತ್ರವನ್ನು, ಎಲೈ ಮನಸ್ಸೇ, ಹೋಗಿ ಸೇವಿಸು.

ಕಪಿತ್ಥಾಸುರನನ್ನು ವಧಿಸಲು ವತ್ಸಾಸುರನನ್ನು ಪ್ರಯೋಗಿಸಿ ಲೀಲಾರಸ ವನ್ನು ಅನುಭವಿಸಿದ ನಿತ್ಯಯುವಾ ಆದ ಸ್ವಾಮಿಯು ಕಲ್ಯಾಣ ಗುಣಗಳೊಡನೆ ಶ್ರಮಹರವಾದ ದಿವ್ಯಮಂಗಳ ವಿಗ್ರಹವನ್ನು ಹೊಂದಿ ಎಲ್ಲರ ಚಿತ್ತವನ್ನೂ ಅಪಹರಿಸುತ್ತಿದ್ದಾನೆ. ಗೋವರ್ಧನವನ್ನೆತ್ತಿ ಪಶುಗಳನ್ನು ರಕ್ಷಿಸಿದನವನು. ಎಲ್ಲರೂ ನೋಡಿ ಆನಂದಿಸಲೆಂದು ಘಟನರ್ತನವನ್ನಾಡಿದವನು ಅವನೇ. ಅವನು ಮೆಚ್ಚಿಕೊಂಡು ಬಂದಿರುತ್ತಿರುವ ದಿವ್ಯದೇಶ ಇದು. ಅತಿಭವ್ಯವೂ ಮನೋಹರವೂ ಆಗಿ ಭಾಗವತರ ಸಮೃದ್ಧಿಯನ್ನುಳ್ಳದು ಆ ದಿವ್ಯದೇಶ.

ವಂಜನ್ನೈಯಾಲ್ ವಂದವಳ್‌ತನ್ ಉಯಿರುಂಡು ವಾಯ್‌ತ್ತ
ತಯಿರುಂಡು ವೆಣ್ಣೆಯಮುದುಂಡು ವಲಿಮಿಕ್ಕ
ಕಂಜನ್ ಉಯಿರದು ಉಂಡು ಇವ್ವುಲಹುಂಡ ಕಾಳೈ
ಕರುದುಮಿಡಂ ಕಾವಿರಿ ಶಂದು ಅಹಿಲ್ ಕನಕಂ ಉಂದು
ಮಂಜುಲವು ಪೊಟಿಲೂಡುಂ ವಯಲೂಡುಂ ವಂದು
ವಳಂಕೊಡುಪ್ಪ ಮಾಮರೈಯೋರ್ ಮಾಮಲರ್‌ಹಳ್‌ತೂವಿ
ಅಂಜಲಿತ್ತು ಅಂಗು ಅರಿಶರಣ್‌ಎನ್ರು ಇರೈಂಜುಂ ಅಣಿ
ನಾಂಗೂರ್ ಅರಿಮೇಯವಿಣ್ಣಹರಂ ವಣಂಗು ಮಡನೆಂಜೇ

॥೯॥

(ವಂಜನ್ನೈಯಾಲ್‌ವಂದವಳ್‌ತನ್) ಕಪಟವೇಷದಿಂದ ಬಂದ ರಕ್ಕಸಿಯ (ಉಯಿರ್ ಉಂಡು) ಪ್ರಾಣವನ್ನು ಹೀರಿಕೊಂಡವನೂ (ವಾಯ್‌ತ್ತತಯಿರ್ ಉಂಡು) ಕೈಗೆ ಸಿಕ್ಕಿದ ಮೊಸರೆಲ್ಲವನ್ನೂ ಉಂಡವನಾಗಿ (ವಲಿಮಿಕ್ಕ) ಅತ್ಯಂತ ಬಲಶಾಲಿಯಾದ (ಕಂಜನ್ ಉಯಿರದು ಉಂಡು) ಕಂಸನ ಪ್ರಾಣವನ್ನು ಅಪಹರಿಸಿ (ಇವ್ವುಲಹು ಉಂಡ) ಈ ಲೋಕಗಳೆಲ್ಲವನ್ನೂ ಪ್ರಲಯ ಕಾಲದಲ್ಲಿ ಉಂಡವನಾದ (ಕಾಳೈ) ಯುವಕನಾದ ನಮ್ಮ ಸ್ವಾಮಿಯು (ಕರುದುಂ ಇಡಂ) ಇಷ್ಟಪಟ್ಟು ಇರುತ್ತಿರುವ ದೇಶವಾದುದೂ, (ಕಾವಿರಿ) ಕಾವೇರಿ ನದಿಯು (ಶಂದು, ಅಹಿಲ್, ಕನಕಂ ಉಂದಿ) ಚಂದನವೃಕ್ಷಗಳು, ಅಹಿಲ್‌ಮರಗಳು, ಸ್ವರ್ಣ ಇವೆಲ್ಲವನ್ನೂ ತಳ್ಳಿಕೊಂಡುಬಂದು (ಮಂಜು ಉಲವು ಪೊಟಿಲೂಡುಂ) ಮೇಘಮಂಡಲದವರೆಗೂ ಬೆಳೆದಿರುವ ತೋಪುಗಳಲ್ಲಿಯೂ (ವಯಲೂಡುಂ) ಗದ್ದೆಗಳಲ್ಲಿಯೂ (ವಂದು ವಳಂಕೊಡುಪ್ಪ) ಪ್ರವೇಶಿಸಿ ಸಂಪತ್ತನ್ನುಂಟು ಮಾಡುತ್ತಿರುವುದೂ, (ಮಾಮರೈಯೋರ್‌ಹಳ್‌ಮಾಮಲರ್‌ತೂವಿ ಅಂಜಲಿತ್ತು) ಶ್ರೇಷ್ಠರಾದ ವೈದಿಕ ಬ್ರಾಹ್ಮಣರು ಒಳ್ಳೆಯ ಹೂಗಳನ್ನು ಸಮರ್ಪಿಸಿ ಕೈ ಮುಗಿದು ನಿಂತು (ಅರಿ ಶರಣ್ ಎನ್ರು ಇರೈಂಜುಂ) 'ಹರಿಯೇ, ನಿನ್ನ ಪಾದಗಳೇ ನಮಗೆ ಶರಣು'—ಎಂದು ಹೇಳಿ ಸ್ತುತಿಸುತ್ತಾ ಇರುವಂಥದೂ ಆದ (ಅಣಿನಾಂಗೂರ್ ಅರಿಮೇಯ ವಿಣ್ಣಹರಂ ವಣಂಗು ಮಡನೆಂಜೇ) ತಿರುನಾಂಗೂರಿನಲ್ಲಿರುವ ಅರಿಮೇಯ ವಿಣ್ಣಹರಂ ಕ್ಷೇತ್ರವನ್ನು, ಎಲೈ ಮನಸ್ಸೇ, ಹೋಗಿ ಸೇವಿಸು.

ನಮ್ಮ ಸ್ವಾಮಿ ಕೃತ್ರಿಮ ವೇಷದಿಂದ ಬಂದ ಪೂತನಿಯ ಪ್ರಾಣವನ್ನುಂಡ. ಕೈಗೆಸಿಕ್ಕಿದ ಮೊಸರು ಬೆಣ್ಣೆಗಳನ್ನುಂಡ. ಕಂಸನ ಪ್ರಾಣವನ್ನೂ ಉಂಡ. ಅನುಕೂಲರು ಸ್ಪರ್ಶಿಸಿದ ದ್ರವ್ಯಕ್ಕೂ ಪ್ರತಿಕೂಲರ ಪ್ರಾಣಕ್ಕೂ ಏನೂ ಭೇದವನ್ನು ಕಾಣಲಿಲ್ಲ! ಭೂಮಿಯನ್ನೆಲ್ಲಾ ನುಂಗಿ ತನ್ನ ಹೊಟ್ಟೆಯೊಳಗಿಟ್ಟು ಕೊಂಡ ಬೆಣ್ಣೆಯನ್ನು ನುಂಗಿದಂತೆ! ಕಾವೇರಿಯು ತನ್ನ ಅಲೆಗಳಿಂದ ಚಂದನ ಮೊದಲಾದವುಗಳನ್ನು ತಳ್ಳಿಕೊಂಡು ಬಂದು ಅಲ್ಲಿನ ಭಕ್ತರಿಗೆ ನಿರವಧಿಕ ಸಂಪತ್ತನ್ನುಂಟುಮಾಡಲು, ಅಲ್ಲಿನ ವಿಪ್ರಶ್ರೇಷ್ಠರು ಭಗವಂತನನ್ನು ಆರಾಧಿಸಿ ಅಂಜಲಿಮಾಡಿ, 'ಕಾವೇರಿಯ ಪ್ರವಾಹದಿಂದ ಸರ್ವೇಶ್ವರ ನಮ್ಮನ್ನು ರಕ್ಷಿಸಿದನು. ನಮಗೆ ಜೀವನಕ್ಕಾಗಿ ಸಂಪತ್ತನ್ನು ಕರುಣಿಸಿದನು' ಎಂದು ಹೇಳಿ 'ನಿನ್ನ ಪಾದಗಳೇ ನಮ್ಮ ರಕ್ಷಣೆಗೆ ಉಪಾಯ' ಎಂದು ಅವನಲ್ಲಿ ಶರಣು ಹೋಗುತ್ತಾರೆ. ಜಗತ್ತಿಗೇ ಆಭರಣ ಪ್ರಾಯವಾಗಿರುವ ಅಂಥ ದಿವ್ಯದೇಶವನ್ನು ಸೇರಿ ಸೇವಿಸೆಂದು ಮನಸ್ಸಿಗೆ ಉಪದೇಶಿಸುತ್ತಾರೆ.

ಶೆನ್ರು ಶಿನವಿಡೈಯೇಟುಮ್ ಪಡಅಡರ್‌ತ್ತು ಪಿನ್ನೈ
ಶೆವ್ವಿತೋಳ್‌ಪುಣರ್‌ನ್ದು ಉಹಂದ ತಿರುಮಾಲ್‌ತನ್
ಕೋಯಿಲ್
ಅನ್ರು ಆಯನುಮನ್ ಅರನ್‌ಶೇಯಂ ಅನೈಯವರ್‌ಹಳ್
ನಾಂಗೂರ್ ಅರಿಮೇಯವಿಣ್ಣಹರಂ ಅಮರ್‌ನ್ದಶೆಟುಂಕುನ್ರೈ
ಕನ್ರಿ ನೆಡುವೇಲ್‌ವಲವನ್ ಮಂಗೈಯರ್ ತಮ್‌ಕೋಮಾನ್
ಕಲಿಕನ್ರಿ ಒಲಿಮಾಲೈ ಐಂದಿನೋಡು ಮೂನ್ರುಂ
ಒನ್ರಿನೋಡುಂ ಒನ್ರುಂ ಇವೈಕತ್ತವಲ್ಲಾರ್ ಉಲಹತ್ತು
ಉತ್ತಮರ್ ಹಳ್ಕು ಉತ್ತಮರಾಯ್ ಉಂಬರುಂ ಆವರ್‌ಹಳೇ
॥೧೦॥

(ಶೆನ್ರು) ತಾನೇ ಹೋಗಿ (ಶಿನಮ್ ಏಟ್ ವಿಡೈಯುಮ್) ಅತ್ಯಧಿಕವಾದ ಕ್ರೌರ್ಯವನ್ನುಳ್ಳ ಏಳು ವೃಷಭಗಳೂ (ಪಡ ಅಡರ್‌ತ್ತು) ಮುಗಿದುಹೋಗು ವಂತೆ ಹೋರಾಡಿ (ಪಿನ್ನೈ ಶೆವ್ವಿತೋಳ್ ಪುಣರ್‌ನ್ದು) ನಪ್ಪಿನ್ನೈಪಿರಾಟ್ಟಿಯ ಸುಂದರವಾದ ಬಾಹುವನ್ನಾಲಂಗಿಸಿ (ಉಹಂದ ತಿರುಮಾಲ್‌ತನ್) ಮನಸ್ಸಿ

ನಲ್ಲಿ ಸಂತೋಷಿಸಿದ ಲಕ್ಷ್ಮೀನಾಥನ (ಕೋಯಿಲ್) ಸನ್ನಿಧಿಯಾದುದೂ, (ಅಯನುಂ ಅರನ್‌ಶೇಯುಂ ಅನ್ನೈಯವರ್‌ಹಳ್) ಬ್ರಹ್ಮದೇವನನ್ನೂ ರುದ್ರ ಪುತ್ರನಾದ ಸುಬ್ರಹ್ಮಣ್ಯಸ್ವಾಮಿಯನ್ನೂ (ಅನ್ನೈಯವರ್‌ಹಳ್) ಹೋಲುವವರು ಬಾಳುತ್ತಿರುವಂಥದೂ ಆದ (ನಾಂಗೂರ್ ಅರಿಮೇಯ ವಿಣ್ಣಹರಂ ಅಮರ್‌ನ್ದ) ತಿರುನಾಂಗೂರಿನಲ್ಲಿ ಅರಿಮೇಯವಿಣ್ಣಹರಂ ಎಂಬ ಕ್ಷೇತ್ರದಲ್ಲಿ ನೆಲಸಿರುವ (ಶೆಟಿಕುನ್ರೈ) ಸುಂದರವಾದ ಬೆಟ್ಟವನ್ನು ಹೋಲುವಂತಹ ಭಗವಂತನನ್ನು ಕುರಿತು (ಕನ್ರಿನೆಡುವೇಲ್‌ವಲವನ್) ಕೋಪದ ಚಿಹ್ನೆಯೊಡನೆ ಕೂಡಿ ನೀಳ ವಾದ ವೇಲಾಯುಧವನ್ನು ಧರಿಸಿರುವವರೂ (ಮಂಗೈಯರ್‌ತಮ್ ಕೋವಹಾನ್) ತಿರುಮಂಗೈನಾಡಿನವರಿಗೆ ನಿರ್ವಾಹಕರಾದವರೂ ಆದ (ಕಲಿಕನ್ರಿ ಒಲಿವಹಾಲೈ) ತಿರುಮಂಗೈಯಾಳ್ವಾರ್ ಅನುಗ್ರಹಿಸಿದ ನುಡಿಮಾಲೆಯಾದ ಈ (ಐನ್ದಿನೊಡು ಮೂನ್ರುಮ್ ಒನ್ರಿನೊಡುಂ ಒನ್ರುಮ್‌ಇವೈ) ಹತ್ತು ಪಾಶುರಗಳನ್ನೂ (ಕತ್ತವಲ್ಲಾರ್) ಓದಿತಿಳಿದು ಸೇವಿಸಬಲ್ಲವರು (ಉಲಹತ್ತು) ಈ ಲೋಕದಲ್ಲಿ (ಉತ್ತಮರ್‌ಹಳ್ಕು ಉತ್ತಮರ್‌ಆಯ್) ಬಹಳ ಉತ್ಕೃಷ್ಟ ರಾಗಿಬಾಳಿ ಅನಂತರ (ಉಂಬರುಮ್ ಆವರ್‌ಹಳ್) ನಿತ್ಯಸೂರಿಗಳೊಡನೆ ಸೇರು ವವರೂ ಆಗುತ್ತಾರೆ.

ಈ ದಶಕವನ್ನು ಅಭ್ಯಾಸಮಾಡುವವರಿಗೆ ಲಭಿಸುವ ಫಲವನ್ನು ಇಲ್ಲಿ ಸೂಚಿಸಿದ್ದಾರೆ. ಸಪ್ತವೃಷಭಗಳನ್ನು ಜಯಿಸಿ ನಪ್ಪಿನ್ನೈ ಪಿರಾಟ್ಟಿಯನ್ನು ವರಿಸಿದ ಶ್ರಿಯಃಪತಿ ವಾಸಿಸುವ ದಿವ್ಯಕ್ಷೇತ್ರ ಇದು. ಶಾಂತಿಗೆ ಬ್ರಹ್ಮದೇವನೂ ಸೌಂದರ್ಯಕ್ಕೆ ಸುಬ್ರಹ್ಮಣ್ಯಸ್ವಾಮಿಯೂ ಹೆಸರಾದವರಷ್ಟೇ ? ಅವರೊಡನೆ ಸಾದೃಶ್ಯ ಹೊಂದಿದ ಭಾಗವತರು ಇರುವ ಜಾಗ ಇದು. ಶತ್ರುಶರೀರಗಳನ್ನು ಭೇದಿಸಿದಾಗ ಉಂಟಾದ ರಕ್ತದ ಕಲೆಯನ್ನು ತೊಳೆಯುವುದಕ್ಕೂ ಸಮಯ ವಿಲ್ಲದೆ ಇರುವ ವೇಲಾಯುಧವನ್ನು ಕೈಯಲ್ಲಿ ಧರಿಸಿರುವ ತಿರುಮಂಗೈ ಆಳ್ವಾರ್ ಇಲ್ಲಿ ನೆಲಸಿರುವ ಸ್ವಾಮಿಯನ್ನು ಈ ದಶಕದಿಂದ ಸ್ತುತಿಸಿದ್ದಾರೆ. ಇದನ್ನು ಅಭ್ಯಾಸ ಮಾಡುವವರು 'ಅಡಿಯಾರ್ಕು ಎನ್ನೈ ಆಳ್ಪಡುತ್ತ ವಿಮಲನ್' ಎಂಬಂತೆ ಇಲ್ಲಿ ಭಾಗವತಶೇಷತ್ವವನ್ನು ಅನುಭವಿಸಿ ಈ ಶರೀರ ವನ್ನು ಬಿಟ್ಟಮೇಲೆ ಅನಂತ ಗರುಡ ವಿಷ್ವಕ್ಸೇನರೇ ಮೊದಲಾದವರೊಡನೆ ಸೇರಿ ಭಗವಂತನ ನಿತ್ಯಕೈಂಕರ್ಯವನ್ನು ಮಾಡುವವರಾಗುತ್ತಾರೆ.

## ನಾಲ್ಕನೆಯಪತ್ತು—ಮೊದಲ ತಿರುಮೊಳಿ

# 'ಪೋದಲರ್ನ್ದ'

### ಪ್ರವೇಶ

ತನಗೆ ಅನನ್ಯಭಕ್ತರಾದವರ ಪ್ರತಿಬಂಧಕಗಳೆಲ್ಲವನ್ನೂ ಹೋಗಲಾಡಿಸಿ ಅವರಿಗೆ ಅನುಗ್ರಹ ಮಾಡುವುದಕ್ಕಾಗಿ ಅರಿಮೇಯವಿಣ್ಣಹರಂ ಕ್ಷೇತ್ರದಲ್ಲಿ ಪರಮಾತ್ಮನು ಸಾನ್ನಿಧ್ಯವಹಿಸಿದ್ದಾನೆಂದು ಹಿಂದಿನ ದಶಕದಲ್ಲಿ ಹೇಳಿದರು. ಅಷ್ಟೇ ಅಲ್ಲದೆ ಪ್ರಯೋಜನಾಂತರಪರರಾದ ಬ್ರಹ್ಮಾದಿಗಳಿಗೂ ಸಹ ಅವರವರುಗಳ ಅಭಿಮತಗಳನ್ನು ಕರುಣಿಸಲು, ಕ್ಷೀರಸಮುದ್ರದಲ್ಲಿ ಹೇಗೋ ಹಾಗೆ, ಸರ್ವೇಶ್ವರನು ಬಂದು ನೆಲಸಿರುವ ದೇಶ 'ತಿರುತ್ತೇವನಾರ್‌ತೋಹೈ' —ಎಂದು ಈ ದಶಕದಲ್ಲಿ ಅನುಭವಿಸಿದ್ದಾರೆ.

**ಪೋದು ಅಲರ್ನ್ದ ಪೊಟಿಲ್ ಶೋಲೈಪುರಮೆಂಗುಂ**
**ಪೊರುತಿರೈಹಳ್**
**ತಾದು ಉದಿರ ವಂದಲೈಕ್ಕುಂ ತಡಮಣ್ಣಿತ್ತೆನ್ಗರೈ ಮೇಲ್**
**ಮಾದವನ್‌ತಾನ್ ಉರೈಯುಮಿಡಂ ವಯಲ್‌ನಾಂಗೈ**
**ನಡುವಂಡು**
**ಶೇತೆನವೆನ್ರು ಇಶೈಪಾಡುಂ ತಿರುತ್ತೇವನಾರ್ ತೊಹೈಯೇ**
**॥೧॥**

(ಪೋದು ಅಲರ್ನ್ದ) ಹೂಗಳು ಅರಳಿರುವ (ಪೊಟಿಲ್ ಶೋಲೈಪುರಂಎಂಗುಂ) ದೊಡ್ಡ ತೋಪುಗಳು ಇರುವ ಜಾಗಗಳ ತುಂಬ (ತಾದು ಉದಿರ) ಹೂಗಳ ದಳಗಳು ಉದುರುವ ಹಾಗೆ (ಪೊರುತಿರೈಹಳ್‌ವಂದು ಅಲೈಕ್ಕುಂ) ಹೆದ್ದೆರೆಗಳು ಎದ್ದುಬಂದು ಬೀಸುವಂತಹ (ತಡಂ ಮಣ್ಣಿ ತೆನ್‌ಕರೈ ಮೇಲ್) ಮಣ್ಣಿ ಎಂಬುವ ದೊಡ್ಡ ಜಲಾಶಯದ ದಕ್ಷಿಣದ ದಡದ ಮೇಲೆ (ಮಾದವನ್ ತಾನ್ ಉರೈಯುಂ ಇಡಂ) ಮಾಧವನು ನಿತ್ಯವಾಸ ಮಾಡುತ್ತಿರುವ ಜಾಗ ಯಾವುದೆಂದರೆ (ವಯಲ್ ನಾಂಗೈ) ಗದ್ದೆಗಳು ಸುತ್ತುವರಿದಿರುವ ತಿರುನಾಂಗೂರಿನಲ್ಲಿ

(ವರಿವಂಡು) ರೇಖೆಗಳನ್ನುಳ್ಳ ದುಂಬಿಗಳು (ತೇತೆನ ಎನ್ರು ಇಶೈಪಾಡುಂ) 'ತೆನ್ನ ತೆನ್ನ' ಎಂದು ಗಾನ ಮಾಡುತ್ತಿರುವ (ತಿರುತ್ತೇವನಾರ್ ತೋಹೈ) ತಿರುತ್ತೇವನಾರ್ ತೋಹೈ ಎಂಬುವ ದಿವ್ಯಕ್ಷೇತ್ರವೇ ಆಗಿದೆ.

ಆ ಕ್ಷೇತ್ರದಲ್ಲಿರುವ ಹೂಗಿಡಗಳು ಆಯಾಕಾಲದಲ್ಲಿ ಅರಳಿದ ಪುಷ್ಪಗಳ ಸಮೃದ್ಧಿಯನ್ನುಳ್ಳವಾಗಿರುವುವು. ಆ ಹೂಗಳ ದಳಗಳು ಆ ಉಪವನ ಪ್ರದೇಶ ದಲ್ಲೆಲ್ಲಾ ಉದುರುವಂತೆ ಅಲೆಗಳೇಳುತ್ತಿರುವ ವಿಶಾಲವಾದ 'ಮಣ್ಣಿ'ಯು ದಕ್ಷಿಣದ ತೀರದಲ್ಲಿ ರಸಿಕನಾದ ಮಾಧವನು ನಿತ್ಯವಾಸ ಮಾಡುವ ದೇಶವಾಗಿದೆ. ಸೀತಾದೇವಿಯೊಡನೆ ಶ್ರೀರಾಮ ಚಿತ್ರಕೂಟದಲ್ಲಿ ವಾಸಿಸಿದ ಹಾಗೆ ಸ್ವಾಮಿ ಇಲ್ಲಿ ನೆಲಸಿರುವುದು. ಮುಕ್ತರು ಸಾಮಗಾನ ಮಾಡುವಂತೆ ಮಧುಪಾನಮತ್ತರಾದ ಭೃಂಗಗಳು 'ತೇತೆನ' ಎಂದು ಗಾನಮಾಡುವ ದೇಶ ತಿರುತ್ತೇವನಾರ್ ತೋಹೈ. ಆ ಸ್ಥಳದ ರಾಮಣೀಯಕತೆಗೂ ಜಲರಮಣೀಯಕತೆಗೂ ಮನಸೋತು ಸರ್ವೇಶ್ವರನು ಅಲ್ಲಿ ನಿತ್ಯಸಾನ್ನಿಧ್ಯ ನೀಡಿದ್ದಾನೆ.

**ಯಾವರುಂ ಆಯ್ ಯಾವೈಯುಂ ಆಯ್ ಎಟಿಲ್**
**ವೇದಪ್ಪೊರುಳ್‌ಹಳುಂ ಆಯ್**
**ಮೂವರುಂ ಆಯ್ ಮುದಲಾಯಮೂರ್ತಿ ಅಮರ್ನ್ದು**
**ಉರೈಯುಂ ಇಡಂ**
**ಮೂವರುಂ ತಿಣ್‌ಪಡೈಮನ್ನೈ ವೆನ್ರಿಕೊಳ್‌ವಾರ್**
**ಮನ್ನುನಾಂಗೈ**
**ಶೇವರುಂಶೆನ್ರು ಇರೈಂಜುಪೊಟಿಲ್ ತಿರುತ್ತೇವನಾರ್**
**ತೊಹೈಯೇ**
**॥೨॥**

(ಯಾವರುಮಾಯ್) ಚೇತನ ಪದಾರ್ಥಗಳನ್ನು ಶರೀರವನ್ನಾಗಿ ಹೊಂದಿ, (ಯಾವೈಯುಂ ಆಯ್) ಅಚೇತನಗಳೆಲ್ಲವನ್ನೂ ಶರೀರವನ್ನಾಗಿ ಹೊಂದಿ, (ಎಟಿಲ್‌ವೇದಂ ಪೊರುಳ್‌ಹಳುಂ ಆಯ್) ಸುಂದರವಾದ ವೇದಗಳ ಅರ್ಥವೂ ತಾನೇ ಆಗಿ (ಮೂವರುಂ ಆಯ್) ತ್ರಿಮೂರ್ತಿಗಳ ರೂಪವನ್ನೂ ತಾನೇ ಹೊಂದಿದವನಾಗಿ (ಮುದಲಾಯಮೂರ್ತಿ) ಆದಿದೇವನಾದ ನಮ್ಮ ಸರ್ವೇಶ್ವರನು (ಅಮರ್ನ್ದು ಉರೈಯುಂ ಇಡಂ) ಒಲಿದು ನೆಲಸಿರುವ ಜಾಗ ಯಾವು

'ದೆಂದರೆ—(ಮಾವರುಂ) ಕಂದುರೆಯುನ್ನೇರಿಬರುವ (ತಿಣ್‌ಪಡೈ) ದೃಢವಾದ ಆಯುಧಗಳನ್ನುಳ್ಳ (ವಂನ್ನೈ) ರಾಜಲೋಕವನ್ನು (ವೆನ್ರಿಕೊಳ್‌ವಾರ್) ಎದುರಿಸಿ ಜಯವನ್ನು ಸಂಪಾದಿಸುವ ಬ್ರಾಹ್ಮಣರು (ಮನ್ನುನಾಂಗೈ) ನಿತ್ಯ ವಾಸವಮಾಡುವ ತಿರುನಾಂಗೂರಿನಲ್ಲಿರುವುದೂ (ತೇವರುಂಶೆನ್ರು ಇರೈಂಜು) ನಿತ್ಯಸೂರಿಗಳೂ ಬಂದು ಸೇವಿಸುವಂಥದೂ ಆಗಿ (ಪೊಟಿಲ್) ಸುಂದರವಾದ ತೋಪುಗಳನ್ನುಳ್ಳ (ತಿರುತ್ತೇವನಾರ್ ತೊಹೈಯೇ) ತಿರುತ್ತೇವನಾರ್ ತೊಹೈ ಎಂಬುವ ದಿವ್ಯಕ್ಷೇತ್ರವೇ ಆಗಿದೆ.

ಸಕಲ ಚೇತನಾಚೇತನ ಪದಾರ್ಥಗಳೂ ಪರಮಾತ್ಮನಿಗೆ ಶರೀರಗಳಾಗಿವೆ. 'ಯಸ್ಯ ಸರ್ವಭೂತಾನಿ ಶರೀರಂ' ಎಂದು ಶ್ರುತಿ ಕೊಂಡಾಡುತ್ತದೆ. ಸರ್ವ ವ್ಯಾಪಕನಾದ ಅವನು ಆಶ್ರಯಣೀಯನಾಗುವುದಕ್ಕಾಗಿ ಬಂದು ನೆಲಸಿದ್ದಾನೆ ಇಲ್ಲಿ. ಪ್ರತ್ಯಕ್ಷಯೋಗ್ಯವಾಗಿರುವ ಚೇತನಾಚೇತನ ಪದಾರ್ಥಗಳಿಗೆಲ್ಲಾ ಅವನು ಪ್ರಕಾರಿ ಆಗಿದ್ದಾನೆ. ದೇಹಾತಿರಿಕ್ತವಾದ ಆತ್ಮವಸ್ತು, ಕಾರಣಾವಸ್ಥೆ ಯಲ್ಲಿರುವ ಚೇತನಾಚೇತನಗಳು, ಮಹದಹಂಕಾರಾದಿಗಳು, ಕಲ್ಯಾಣಗುಣಗಳು, ಭಗವತ್ಸ್ವರೂಪ–ಇವುಗಳನ್ನೆಲ್ಲಾ ಪ್ರತಿಪಾದಿಸುವ ವೇದೈಕ ಸಮಧಿಗಮ್ಯವಾದ ಅರ್ಥಗಳೂ ತಾನೇ ಆಗಿದ್ದಾನೆ. ವೇದದ ಅತೀಂದ್ರಿಯಾರ್ಥ ಪ್ರತಿಪಾದಕತ್ವ ವನ್ನು 'ಎಟಿಲ್' ಎಂದು ಇಲ್ಲಿ ಹೇಳಿದೆ. ಸೃಷ್ಟಿಸಂಹಾರಗಳನ್ನು ಮಾಡುವ ಬ್ರಹ್ಮ ಹಾಗೂ ರುದ್ರ ಇವರಿಗೂ ಇವನು ಅಂತರಾತ್ಮನಾಗಿದ್ದಾನೆ. ತನ್ನ ರೂಪದಲ್ಲಿಯೇ ಇದ್ದುಕೊಂಡು ಪಾಲನಮಾಡುತ್ತಾನೆ ಇವನು. ಅವರಿಗೂ ಕಾರಣನಾಗಿರುವ ಆದಿದೇವನು ಬಂದು ನೆಲಸಿರುವ ದಿವ್ಯಸ್ಥಲ ಇದು. ತೇಜಿಷ್ಠರಾದ ಬ್ರಾಹ್ಮಣರು ಇರುತ್ತಿರುವ ಜಾಗ ಇದು. ಎಲ್ಲ ದೇವತೆಗಳೂ ತಮ್ಮ ತಮ್ಮ ಅಧಿಕಾರಕ್ಕನುಗುಣವಾಗಿ ಇಲ್ಲಿ ಬಂದು ಸರ್ವೇಶ್ವರನನ್ನು ಸೇವಿಸುತ್ತಾರೆ.

**ವಾನ್‌ನಾಡುಂ ಮಣ್‌ನಾಡುಂ ಮತ್ತುಳ್ಳಪಲ್ ಉಯಿರುಂ**
**ತಾನಾಯ ಎಂಬಿರುಮಾನ್ ತಲೈವನ್ ಅಮರ್‌ನ್ದು**
**ಉರೈಯುಂ ಇಡಂ**
**ಆನಾದ ಪೆರುಂಶೆಲ್ವತ್ತು ಅರುಮರೈಯೋರ್ ನಾಂಗೈತನ್ನುಳ್**
**ಶೇನಾರುಂ ಮಲರ್‌ಪ್ಪೊಟಿಲ್‌ಶೂಟ್ ತಿರುತ್ತೇವನಾರ್**
**ತೊಹೈಯೇ ॥೩॥**

(ವಾನ್ನಾಡುಂ) ನಿತ್ಯವಿಭೂತಿಯೂ (ಮಣ್ನಾಡುಂ) ಲೀಲಾವಿಭೂತಿಯೂ (ಮಂತ್ತುಳ್ಳಪಲ್ ಉಯಿರುಂ) ಆಯಾಯಾ ಸ್ಥಾನಗಳಲ್ಲಿರುವ ಹಲವಾರು ಬಗೆಯ ಜೀವರಾಶಿಗಳೂ (ತಾನ್ ಆಯ) ಇವೆಲ್ಲವೂ ತಾನೇ ಆಗಿರುವ (ಎಂಬೆರುಮಾನ್ ತಲೈವನ್ ಅಮರ್ನ್ದು ಉರೈಯುಂ ಇಡಂ) ನಮ್ಮ ಸ್ವಾಮಿಯಾದ ದೇವಾಧಿದೇವನು ನಿತ್ಯವಾಸ ಮಾಡುತ್ತಿರುವ ಸ್ಥಾನ ಯಾವುದೆಂದರೆ— (ಆನಾದ) ಅಳಿವಿಲ್ಲದ (ಪೆರುಂಶೆಲ್ವತ್ತು) ಅಪಾರವಾದ ಐಶ್ವರ್ಯವನ್ನುಳ್ಳ (ಅರುಮರೈಯೋರ್) ಶ್ರೇಷ್ಠವಾದ ವೇದಗಳನ್ನು ಅಧ್ಯಯನಮಾಡಿದ ಬ್ರಾಹ್ಮಣರು ಇರುತ್ತಿರುವ ತಿರುನಾಂಗೂರಿನಲ್ಲಿರುವುದೂ, (ತೇನ್ ಅರುಂ ಮಲರ್ಪೊಟಿಲ್ಶೂಟ್) ಜೇನು ತುಂಬಿರುವ ಹೂಗಳನ್ನುಳ್ಳ ತೋಟಗಳಿಂದ ಸುತ್ತುವರಿಯಲ್ಪಟ್ಟಿದೂ ಆದ (ತಿರುತ್ತೇವನಾರ್ ತೊಹೈಯೇ) ತಿರುತ್ತೇವನಾರ್ತೊಹೈ ಎಂಬುವ ದಿವ್ಯಕ್ಷೇತ್ರವೇ.

ಪರಮಪದವನ್ನೂ, ಸಂಸಾರವನ್ನೂ, ಅವುಗಳಲ್ಲಿರುವ ಆತ್ಮರುಗಳನ್ನೂ 'ಅವನೇ' ಎಂದು ಹೇಳುವಂತೆ ಅವುಗಳೆಲ್ಲವನ್ನೂ ತನಗೆ ಶರೀರವನ್ನಾಗಿ ಹೊಂದಿದವನೂ, ಸ್ವವ್ಯತಿರಿಕ್ತವಾದ ಸಮಸ್ತವಸ್ತುಗಳನ್ನೂ ತನಗೆ ಪ್ರಕಾರವಾಗಿ ಹೊಂದಿರುವವನೂ ಆದ ಸರ್ವೇಶ್ವರ ಸರ್ವನಿರ್ವಾಹಕನಾಗಿದ್ದಾನೆ. ಎಲ್ಲರೂ ತನ್ನ ನೆಳಲಲ್ಲಿ ಅಡುಗುವಂತೆ ಇದ್ದಾನೆ. 'ಉಪಾದತ್ತೇ ಸತ್ತಾಸ್ಥಿತಿ ನಿಯಮನಾದ್ಯೈಃ ಚಿದಚಿತೌ' ಎಂದಂತೆ ಸರ್ವಶೇಷಿಯೂ ಆಸ್ಥಿತಾಸ್ವಾಮಿಯೂ ಆದವನು ನೆಲಸಿರುವ ದಿವ್ಯದೇಶ ಇದು. ಕೊರೆಯಾಗದ ನಿರವಧಿಕ ಸಂಪತ್ತನ್ನುಳ್ಳ ಬ್ರಾಹ್ಮಣೋತ್ತಮರು ಇರುತ್ತಿರುವಂಥದೂ ಜೇನಿನ ಹೊಳೆಯನ್ನು ಹರಿಸುವ ಕುಸುಮಸಂಪತ್ತನ್ನುಳ್ಳದೂ ಆದುದು ಆ 'ತಿರುತ್ತೇವನಾರ್ತೊಹೈ'.

ಇಂದಿರನುಂ ಇಮೈಯವರುಂ ಮುನಿವರ್ಹಳುಂ
ಎೞಿಲ್ ಅಮೈಂದ
ಶಂದಂ ಮಲರ್ ಚತುಮುಖನುಂ ಕದಿರವನುಂ ಶಂದಿರನುಂ
ಎಂದೈ ಎಮಕ್ಕರುಳ್ ಎನನಿನ್ರು ಅರುಳುಮಿಡಂ
ಎೞಿಲ್ನಾಂಗೈ
ಶುಂದರನಲ್ ಪೊೞಿಲ್ ಪುಡೈಶೂೞ್ ತಿರುತ್ತೇವನಾರ್
ತೊಹೈಯೇ ॥೪॥

(ಇಂದಿರನುಂ) ದೇವೇಂದ್ರನೂ, (ಇಮೈಯವರುಂ) ಮತ್ತೆಲ್ಲ ದೇವತೆಗಳೂ, (ಮುನಿವರ್‌ಹಳುಂ) ಸನಕಾದಿ ಮಹರ್ಷಿಗಳೂ, (ಎಟ್ಟಿಲ್ ಅಮೈಂದ) ಬ್ರಹ್ಮತೇಜಸ್ಸನ್ನುಳ್ಳವನೂ (ಶಂದಂ) ವೇದಗಳನ್ನು ನಿರೂಪಕವಾಗಿ ಉಳ್ಳವನೂ, (ಮಲರ್) ತಾವರೆಹೂನಲ್ಲಿ ಜನಿಸಿದವನೂ ಆದ (ಚತುಮುಕನುಂ) ಬ್ರಹ್ಮದೇವನೂ (ಕದಿರವನುಂ ಶಂದಿರನುಂ) ಸೂರ್ಯನೂ ಚಂದ್ರನೂ (ಎಂದೈ ಎಮಕ್ಕು ಅರುಳ್) 'ನಮಗೆ ಸ್ವಾಮಿಯಾದವನೇ, ನಮ್ಮ ವಿಷಯದಲ್ಲಿ ದಯೆ ತೋರಬೇಕು' (ಎನ) ಎಂದು ಬೇಡಲು (ನಿನ್ರು ಅರುಳುಂ ಇಡಂ) ಅದಕ್ಕೆ ಅಂಗೀಕರಿಸಿ ನಿಂತು ಹಾಗೆಯೇ ಕೃಪೆಮಾಡುವ ಜಾಗ ಯಾವುದೆಂದರೆ— (ಎಟ್ಟಿಲ್‌ನಾಂಗೈ) ತಿರುನಾಂಗೂರಿನಲ್ಲಿ (ಶಂದರಂ ನಲ್‌ಪೊಟ್ಟಿಲ್ ಪುಡೈಶೂಳ್) ಬಹಳ ಚೆಂದವಾದ ತೋಪುಗಳಿಂದ ಸುತ್ತುವರಿಯಲ್ಪಟ್ಟ (ತಿರುತ್ತೇವನಾರ್‌ತೊಹೈಯೇ) ತಿರುತ್ತೇವನಾರ್‌ತೊಹೈ ಎಂಬ ಕ್ಷೇತ್ರವೇ ಆಗಿದೆ.

ಉಭಯವಿಭೂತಿ ನಾಯಕನೂ ಸರ್ವಸ್ವಾಮಿಯೂ ಆದ ಪರಮಾತ್ಮನು ಈ ಲೋಕದಲ್ಲಿರುವವರಿಗಾಗಿ ಇಲ್ಲಿ ಬಂದು ನೆಲಸಿದ್ದಾನೆ. ಸಕಲ ದೇವತೆಗಳೂ ಅವನ ಅನುಗ್ರಹವನ್ನು ಬೇಡಿ ಪಡೆಯುತ್ತಾರೆ. ಬ್ರಹ್ಮಾಂಡವನ್ನು ನಿರ್ವಾಹ ಮಾಡುವುದಕ್ಕನುಗುಣವಾದ ಶಕ್ತಿಉಳ್ಳವನೂ, 'ಛಂದಾಂಸ್ಯಧೀಯೀತ' ಎಂಬಂತೆ ಚತುರ್ವೇದ ನಿರ್ವಾಹಕನೂ, ಕಮಲಭವನೂ ಆದ ಚತುರ್ಮುಖನೇ ಮೊದಲಾದ ಎಲ್ಲ ದೇವತೆಗಳೂ, 'ನಮಗೆ ತಂದೆಯಾದವನೇ, ನಮ್ಮ ಮೇಲೆ ದಯೆದೋರು' ಎಂದು ಬೇಡಿ ತಮ್ಮ ತಮ್ಮ ಅಧಿಕಾರಗಳು ಮುಂದುವರಿಯುವಂತೆ ಅವನ ಅನುಗ್ರಹ ಪಡೆಯುತ್ತಾರೆ. ಈ ಕ್ಷೇತ್ರವು ತನ್ನ ಸಂಪತ್ತಿನಿಂದ ಸ್ವರ್ಗವನ್ನೂ ಧಿಕ್ಕರಿಸುತ್ತಿರುವುದಂತೆ, ಸೌಂದರ್ಯ ಮತ್ತು ಭೋಗ್ಯ ದ್ರವ್ಯದ ಸಮೃದ್ಧಿ ಇವುಗಳಿಂದ ಶೋಭಿಸುವುದು ಈ ದಿವ್ಯದೇಶ.

**ಅಂಡಮುಂ ಇವ್ವಲೈಕಡಲುಂ ಅವನಿಹಳುಂ ಕುಲವರೈಯುಂ**
**ಉಂಡಪಿರಾನ್ ಉರೈಯುಮಿಡಂ ಒಳಿಮಣಿ**
**ಶಂದು ಅಹಿಲ್‌ಕನಕಮ್**
**ತೆಂಡಿರೈಹಳ್ ವರತ್ತಿರಟ್ಟುಂ ತಿಹಟ್‌ಮಣ್ಣಿ ತೆನ್‌ಕರೈಮೇಲ್**
**ತಿಣ್ ತಿರಲಾರ್ ಪಯಿಲ್‌ನಾಂಗೈತಿರುತ್ತೇವನಾರ್**
**ತೊಹೈಯೇ ॥೫॥**

(ಅಂಡಮುಂ) ಆಕಾಶವನ್ನೂ (ಅಲೈ ಇಕ್ಕಡಲುಂ) ಅಲೆಗಳೇಳುವ ಈ ಕಡಲು ಗಳನ್ನೂ (ಅವನಿಹಳುಂ) ಜಂಬೂದ್ವೀಪವೇ ಮೊದಲಾದ ಸಪ್ತದ್ವೀಪಗಳನ್ನೂ (ಕುಲಂವರೈಯುಂ) ಹಿಮಶಾಲಯವೇ ಮೊದಲಾದ ಕುಲಪರ್ವತಗಳನ್ನೂ ಇವೆಲ್ಲವನ್ನೂ (ಉಂಡ ಪಿರಾನ್ ಉರೈಯುಂ ಇಡಂ) ಪ್ರಳಯಕಾಲದಲ್ಲಿ ಉಂಡ ಉಪಕಾರಕನಾದ ನಮ್ಮ ಸ್ವಾಮಿ ಬಾಳುವ ಸ್ಥಳ ಯಾವುದೆಂದರೆ (ಒಳಿಮಣಿ) ಪ್ರಕಾಶಯುಕ್ತವಾದ ರತ್ನಗಳನ್ನೂ (ಶಂದುಂ, ಅಹಿಲ್, ಕನಕಂ) ಗಂಧದಮರ, ಅಹಿಲ್‌ಮರದ ರೆಂಬೆಗಳು, ಚಿನ್ನ ಇವೆಲ್ಲವನ್ನೂ (ತೆಣ್‌ತಿರೈಹಳ್‌ವರ) ಏಳುವ ಅಲೆಗಳ ಮೂಲಕ ಬರಮಾಡಿ (ತಿರಟ್ಟುಂ) ರಾಶಿರಾಶಿಯಾಗಿ ಗುಡ್ಡೆ ಹಾಕುವ (ತಿಹಟ್ ತೆನ್‌ಮಣಿಕರೈಮೇಲ್) ಸುಂದರವಾದ ಮಣ್ಣಿನದಿಯ ದಕ್ಷಿಣದ ತೀರದಲ್ಲಿರುವುದೂ, (ತಿಣ್‌ತಿರಲಾರ್ ಪಯಿಲ್‌ನಾಂಗೈ) ತುಂಬ ಬಲಶಾಲಿ ಗಳಾದವರು ನಿತ್ಯವಾಸ ಮಾಡುತ್ತಿರುವ ತಿರುನಾಂಗೂರಿನಲ್ಲಿರುವ (ತಿರುತ್ತೇವ ನಾರ್‌ತೊಹೈ) ತಿರುತ್ತೇವನಾರ್‌ತೊಹೈ ಎಂಬ ಕ್ಷೇತ್ರವೇ ಆಗಿದೆ.

ಮಹಾಪ್ರಲಯದಲ್ಲಿ ಯಾವ ಪದಾರ್ಥವೂ ಹೊರಗೆ ಉಳಿಯದಂತೆ ಎಲ್ಲ ಅಂಡಗಳನ್ನೂ ಕಡಲುಗಳನ್ನೂ ಕುಲಪರ್ವತಗಳನ್ನೂ, ಭೂಮಿಗಳನ್ನೂ ತನ್ನ ಉದರದೊಳಗಿಟ್ಟುಕೊಂಡು ಎಲ್ಲವನ್ನೂ ಪ್ರಲಯದಿಂದ ಕಾಪಾಡಿದ ಆಪತ್ಸಖನು ಇಲ್ಲಿ ನೆಲಸಿದ್ದಾನೆ. ಏಕೆ? ನಮ್ಮನ್ನು ತನ್ನವರನ್ನಾಗಿ ಮಾಡಿ ಕೊಳ್ಳಲು ನಮ್ಮೊಡನೆ ಸಂಶ್ಲೇಷಿಸಿ ಇಲ್ಲಿ ವಾಸಿಸುತ್ತಿದ್ದಾನೆ. ಬೆಟ್ಟದ ಮೇಲಿಂದ ಹರಿದುಬರುವ ಮಣ್ಣಿನದಿ ತನ್ನ ಅಲೆಗಳಿಂದ ಹರಿಚಂದನ, ಅಹಿಲ್, ಚಿನ್ನದ ಆದರುಗಳು ಇವನ್ನು ಕೊಚ್ಚಿಕೊಂಡು ಬಂದು ಇಲ್ಲಿ ರಾಶಿರಾಶಿಯಾಗಿ ಗುಡ್ಡೆ ಹಾಕುತ್ತದೆ. ಅಂಥ ಭವ್ಯವಾದ ಕ್ಷೇತ್ರ ಇದು.

ಞಾಲಮೆಲ್ಲಾಂ ಅಮುದುಶೆಯ್‌ದು ನಾನ್ಮರೈಯುಂ
ತೊಡರಾದ
ಪಾಲಕನಾಯ್ ಆಲಿಲೈಯಿಲ್ ಪಳ್ಳಿಕೊಳ್ಳುಂ ಪರಮನಿಡಂ
ಶಾಲಿವಳಂ ಪೆರುಹಿವರುಂ ತಡಮಣ್ಣಿತೆನ್ ಕರೈಮೇಲ್
ಶೇಲ್ ಉಹಳುಂ ವಯಲ್‌ನಾಂಗೈ ತಿರುತ್ತೇವನಾರ್
ತೊಹೈಯೇ ॥೬॥

(ನಾಲ್‌ಮರೈಯುಂತೊಡರಾದ) ನಾಲ್ಕು ವೇದಗಳಿಂದಲೂ ಪೂರ್ಣವಾಗಿ ಗ್ರಹಿಸಲಶಕ್ಯನಾದ (ಪಾಲಕನ್ ಆಯ್) ಎಳೆಯಶಿಶುವಾಗಿ (ಞಾಲಂ ಎಲ್ಲಾಂ ಅಮುದುಶೆಯ್‌ದು ಆಲ್ ಇಲೈಯಿಲ್ ಪಳ್ಳಿಕೊಳ್ಳುಂ) ಭೂಮಿಯೇ ಮೊದಲಾದವೆಲ್ಲವನ್ನೂ ನುಂಗಿ ಎಳೆಯ ಆಲದೆಲೆಯ ಮೇಲೆ ಶಯಿನಿಸಿ ಅನುಗ್ರಹಿಸುವ (ಪರಮನ್ ಇಡಂ) ನಮ್ಮಸ್ವಾಮಿ ಇರುವ ದಿವ್ಯಕ್ಷೇತ್ರ ಯಾವುದು ಎಂದರೆ—(ತಡಮಣ್ಣಿ ತೆನ್ ಕರೈಮೇಲ್) ಸುಂದರವಾದ ಮಣ್ಣಿ ನದಿಯ ದಕ್ಷಿಣದ ತೀರದ ಮೇಲೆ (ಶಾಲಿ ಪಳಂಪೆರುಹಿವರುಂ) ಕೆಂಭತ್ತದ ಪೈರಿಂಗಳ ಬೆಳೆಯನ್ನು ಹೆಚ್ಚಾಗಿ ವೃದ್ಧಿಪಡಿಸುವಂಥದೂ (ಶೇಲ್ ಉಹಳುಂ ವಯಲ್) ಮೀನುಗಳು ಚಿಮ್ಮಿ ಆಟವಾಡುತ್ತಿರುವಂತಹದೂ ಆದ ಗದ್ದೆಗಳ ನ್ನುಳ್ಳುದೂ ಆದ (ನಾಂಗೈತಿರುತ್ತೇವನಾರ್ ತೊಹೈಯೇ) ತಿರುನಾಂಗೂರಿ ನಲ್ಲಿರುವ ತಿರುತ್ತೇವನಾರ್ ತೊಹೈ ಎಂಬುದೇ ಆಗಿದೆ.

ಹಿಂದಿನ ಪಾಶುರದಲ್ಲಿ ಹೇಳಿದ ಆಪತ್ಸಖಿತ್ವವನ್ನು ವೇದವೂ ಸಮಗ್ರ ವಾಗಿ ಹೇಳಲಾರದೆಂದು ಇಲ್ಲಿ ಅನುಭವಿಸಿದ್ದಾರೆ. ಸರ್ವೇಶ್ವರನಾದ ಇವನು ಭೂಮಿ ಎಷ್ಟುವಿಸ್ತಾರ ಹೊಂದಿದೆಯೋ ಅಷ್ಟನ್ನೂ ಭುಜಿಸಿದನು. 'ಸರ್ವೇಶ್ವರನು ಅಪರಿಚ್ಛೇದ್ಯನು' ಎಂದು ತಿಳಿಯುವ ವೇದಗಳಿಗೂ ಸಹ ಎಟುಕದಂತಹ ಅತಿಮಾನುಷಚೇಷ್ಟಿತಗಳನ್ನು ಇವನು ನಡೆಸಿದ್ದಾನೆ. ಬಹಳ ಎಳೆಯದಾದ ಆಲದೆಲೆಯ ಮೇಲೆ ಶಯಿನಿಸುವ ಸರ್ವಾಧಿಕನು ಇರುತ್ತಿರುವ ದೇಶ ಇದು. ಅಲ್ಲಿನ ಗದ್ದೆಗಳಲ್ಲಿ ಭತ್ತದ ಬೆಳೆ ಮಿಗಿಲಾಗಿರುವುದು. ಮತ್ಸ್ಯಗಳು ಆ ಗದ್ದೆಯಲ್ಲಿ ಚಿಮ್ಮುತ್ತಾ ಹಾರುತ್ತಾ ನಲಿಯುವುವು.

ಓಡಾದ ಆಳ್‌ಅರಿಯಿನ್ ಉರುವಾಹಿಯ ಇರಣಿಯನೈ
ವಾಡಾದ ವಳ್ಳುಹಿರಾಲ್ ಪಿಳಂದವೈಂದ ಮಾಲದು ಇಡಂ
ಏಡೇರು ಪೆರುಂಶೆಲ್ವತ್ತು ಎಟುಲ್ ಮರೈಯೋರ್
ನಾಂಗೈತನ್ನುಳ್
ಶೇಡೇರು ಪೊಟುಲ್ ಶಟುವು ತಿರುತ್ತೇವನಾರ್ ತೊಹೈಯೇ
॥೭॥

(ಓಡಾದ) ನಾಡಿನಲ್ಲೆಲ್ಲಿಯೂ ಓಡಾಡದ ಅಪೂರ್ವವಾದ (ಆಳ್ ಅರಿಯಿನ್ ಉರು ಆಹಿ) ಶ್ರೀನೃಸಿಂಹಮೂರ್ತಿಯಾಗಿ (ವಾಡಾದ) ಬಾಗದ (ವಳ್ ಉಹಿರಾಲ್) ತೀಕ್ಷ್ಣವಾದ ಉಗುರುಗಳಿಂದ (ಇರಣಿಯನ್ನೈಪಿಳಂದು) ಹಿರಣ್ಯಾ ಸುರನನ್ನು ಸೀಳಿ (ಅಳೈಂದ) ರಕ್ತಪ್ರವಾಹದಲ್ಲಿ ಆಡುತ್ತಿದ್ದ (ವಶಾಲ್ ಅದಂ ಇಡಂ) ನಮ್ಮ ಸ್ವಾಮಿಯು ಇರುವ ದಿವ್ಯದೇಶ ಯಾವುದು ಎಂದರೆ—(ಏಡು ಏರು) ಪುಸ್ತಕಗಳಲ್ಲಿ ಬರೆದಿಡತಕ್ಕ (ಪೇರ್‌ಶೆಲ್ವತ್ತು) ಅತ್ಯಧಿಕವಾದ ಸಂಪತ್ತುಳ್ಳ ವರೂ (ಎಟಿಲ್ ಮರ್‌ಯೋರ್) ಭವ್ಯವಾದ ವೈದಿಕರೂ ಆದ ಬ್ರಾಹ್ಮಣರು ವಸಿಸುತ್ತಿರುವ (ನಾಂಗೈತನ್ನುಳ್) ತಿರುನಾಂಗೂರಿನಲ್ಲಿರುವ (ಶೇಡು ಏರು ಪೊಟಿಲ್ ತಟುವು) ತಂಪನ್ನುಳ್ಳ ತೋಪುಗಳಿಂದ ಕೂಡಿರುವ (ತಿರುತ್ತೇವನಾರ್ ತೊಹೈಯೇ) ತಿರುತ್ತೇವನಾರ್‌ತೊಹೈ ಎಂಬ ಕ್ಷೇತ್ರವೇ ಆಗಿದೆ.

ಸಕಲಲೋಕಗಳಿಗೂ ಬಂದ ಆಪತ್ತನ್ನು ಒಮ್ಮೆ ತಿಶಂವಾಗಿ ಅವನು ಕಳೆದು ಉಪಕರಿಸಿದುದನ್ನು ಹಿಂದಿನ ಪಾಶುರದಲ್ಲಿ ಅನುಸಂಧಾನ ಮಾಡಿದೆ. ಅಷ್ಟೇ ಅಲ್ಲದೆ ಒಬ್ಬ ಬಾಲಕನಿಗಾಗಿ ನೃಸಿಂಹರೂಪಿಯಾಗಿ ಉಪಕರಿಸಿದ ಆಪತ್ಸಖತ್ವವನ್ನು ಇಲ್ಲಿ ನಿರೂಪಿಸಿರುತ್ತಾರೆ. ಲೋಕದಲ್ಲೆಲ್ಲಿಯೂ ಓಡಾಡದ ನರಸಿಂಹವೇಷವನ್ನು ಪರಿಗ್ರಹಿಸಿ ಹಿರಣ್ಯನ ಕಠಿಣವಾದ ದೇಹವನ್ನು ತನ್ನ ತೀಕ್ಷ್ಣವಾದವೂ ಸ್ವಲ್ಪವೂ ಬಾಗದೆ ಇರುವುವೂ ಆದ ಉಗುರುಗಳಿಂದ ಸೀಳಿದ ಸ್ವಾಮಿ. ಅಷ್ಟಕ್ಕೆ ಬಿಡದೆ ಅವನ ರಕ್ತಪ್ರವಾಹದಲ್ಲಿ ಜಲಕ್ರೀಡೆಯಲ್ಲಿ ಹೇಗೋ ಹಾಗೆ ಆಡಿದನು. ಪ್ರಹ್ಲಾದನಿಂಪರಾರನ ಮೇಲೆ ಅತಿ ವ್ಯಾಮೋಹ ವಾತ್ಸಲ್ಯಗಳನ್ನೂ ತೋರಿದನು. ಅಂಥ ಸ್ವಾಮಿ ಇರುವ ದೇಶ ಇದು. ಅಲ್ಲಿರುವ ವಿಪ್ರವರ್ಯರ ಐಶ್ವರ್ಯವೆಷ್ಟೆಂದು ತಿಳಿಯಲು ಪುಸ್ತಕದಲ್ಲೇ ಬರೆದು ತಿಳಿಯ ಬೇಕಂತೆ. ಯಾವ ದೋಷವೂ ಇಲ್ಲದ ಐಶ್ವರ್ಯವಂತೆ ಅದು. ಪುಸ್ತಕದಲ್ಲಿ ಬರೆದರೂ ಬರೆದು ಮುಗಿಸಲಾರದ ಐಶ್ವರ್ಯವಂತೆ ಅವರದು. ಅಂಥ ದೇಶ ತಿರುತ್ತೇವನಾರ್ ತೊಹೈ ಎಂಬುದು.

**ವಾರ್‌ಆರುಂ ಇಳಂಕೊಂಗೈ ನೃತಿಲಿಯೈನುಣಂ ಪುಣರ್ವಾನ್**
**ಕಾರಾರ್ ತಿಣ್‌ಶಿಲೈ ಇರುತ್ತ ತನಿಕ್ಕಾಳೈ ಕರುದುಮಿಡಂ**

ಏರಾರುಂ ಪೆರುಂಶೆಲ್ವತ್ತು ಎೞಿಲ್‌ಮಱೈಯೋರ್
ನಾಂಗೈತನ್ನುಳ್
ಶೀರಾರುಂ ಮಲರ್ ಪೊೞಿಲ್‌ಶೂೞ್ ತಿರುತ್ತೇವನಾರ್
ತೊಹೈಯೇ ॥೮॥

(ವಾರ್ ಆರುಂ ಇಳಕೊಂಗೈ) ಕುಪ್ಪುಸವನ್ನಿಟ್ಟು ಧರಿಸಬೇಕಾದಂತೆ ಇದ್ದ ಎಳೆಯಸ್ತನಗಳನ್ನುಳ್ಳ (ವೈತಿಲಿಯೈ) ಸೀತಾದೇವಿಯನ್ನು (ಮಣವರ್ ಪುಣರ್‌ವಾನ್) ವಿವಾಹಮಾಡಿಕೊಳ್ಳುವುದಕ್ಕಾಗಿ (ಕಾರ್ ಆರ್ ತಿಣ್ ಶಿಲೈ ಇರುತ್ತ) ವಜ್ರ ಖಚಿತವಾಗಿ ದೃಢವಾಗಿದ್ದ ಬಿಲ್ಲನ್ನು ಮುರಿದ (ತನಿಕಾಳೈ) ವಿಲಕ್ಷಣನಾದ ನಿತ್ಯಯುವಕನು (ಕರುದುಂ ಇಡಂ) ಇರಲು ಮನಃಪೂರ್ವಕ ಆಶಿಸುವ ದಿವ್ಯ ದೇಶವು ಯಾವುದೆಂದರೆ—(ಏರು ಆರುಂ ಪೆರುಂಶೆಲ್ವತ್ತು) ಸೌಂದರ್ಯ ಹೊಂದಿಕೊಂಡಿರುವ ಅಪಾರವಾದ ಐಶ್ವರ್ಯವನ್ನುಳ್ಳವರೂ (ಎೞಿಲ್‌ಮಱೈಯೋರ್) ವಿಲಕ್ಷಣರಾದ ವೈದಿಕರೂ ಆದ ಬ್ರಾಹ್ಮಣರು ವಸಿಸುವ (ನಾಂಗೈತನ್ನುಳ್) ತಿರುನಾಂಗೂರಿನಲ್ಲಿ (ಶೀರ್ ಆರುಂ ಮಲರ್ ಪೊೞಿಲ್ ಶೂೞ್) ಸೌಂದರ್ಯ ಹೊಮ್ಮುತ್ತಿರುವ ಹೂಗಳನ್ನುಳ್ಳ ತೋಪುಗಳಿಂದ ಸುತ್ತುವರಿಯಲ್ಪಟ್ಟ (ತಿರುತ್ತೇವನಾರ್ ತೊಹೈಯೇ) ತಿರುತ್ತೇವನಾರ್ ತೊಹೈ ಎಂಬುವ ದಿವ್ಯದೇಶವೇ.

ಒಬ್ಬ ಬಾಲಕನಿಗೆ ಅವನು ಒದಗಿದುದಷ್ಟೇ ಅಲ್ಲ. ಧನುರ್ಭಂಗಮಾಡಬೇಕೆಂಬ ಕಠಿಣಪಣವನ್ನು ಇಟ್ಟುದರಿಂದ ಸೀತಾದೇವಿಯ ವಿವಾಹ ದುಶ್ಶಕವಾಗಿ ತೋರಿದಾಗ ಆ ಬಿಲ್ಲನ್ನು ಮುರಿದು ಈ ಹೆಣ್ಣುಮಗಳಿಗೆ ಒದಗಿಬಂದ ಮಹಾನುಭಾವ ಅವನು ಎಂದು ಇಲ್ಲಿ ಅನುಸಂಧಾನಮಾಡಿದ್ದಾರೆ. ಯಾರಿಂದಲೂ ಅಳ್ಳಾಡಿಸಲೂ ಆಗದ ಉನ್ನತವಾದ, ವಜ್ರಖಚಿತವಾಗಿ ದೃಢವಾದ ಧನುಸ್ಸನ್ನು ಭಂಜಿಸಿದ ಉಪಮಾನರಹಿತವಾದ ವಯಸ್ಸನ್ನುಳ್ಳವನು ಆ ಸ್ವಾಮಿ. ಊರಿನ ಸಂಪತ್ತನ್ನು ಲೋಕಕ್ಕೆಲ್ಲಾ (ಚಾಡಿ ಹೇಳುವಂತೆ) ಬಯಲುಮಾಡುವಂತೆ ಇವೆಯಂತೆ ಅಲ್ಲಿರುವ ಅಪಾರವಾದ ಪುಷ್ಪಸಮೃದ್ಧಿಯನ್ನು ಹೊಂದಿರುವ ಹೂದೋಟಗಳು.

ಕುಂಬಮಿಗು ಮದಯಾನೈ ಪಾಹನೊಡುಂ ಕುಲೈಂದು ವೀೞ
ಕೊಂಬದನೈ ಪರಿತ್ತೆರಿಂದ ಕೂತ್ತನ್ ಅಮರ್ನ್ದು
ಉರೈಯುಮಿಡಂ
ವಂಬು ಅವಿೞುಂ ಶೆಣ್ಬಕತ್ತಿನ್ ಮಣಂ ಕಮೞುಂ
ನಾಂಗೈತನ್ನುಳ್
ಶೆಂಬೊನ್ ಮದಿಳ್ ಪೊೞಿಲ್ ಪುಡೈಶೂೞ್ ತಿರುತ್ತೇವನಾರ್
ತೊಹೈಯೇ ॥೯॥

(ಮಿಗುಕುಂಬಮ್) ಉನ್ನತವಾದ ಕುಂಭಸ್ಥಳವನ್ನುಳ್ಳ (ಮದಂ ಯಾನೈ) ಕುವಲಯಾಪೀಡವೆಂಬ ಮದ್ದಾನೆಯು (ಪಾಹನೊಡುಂ ಕುಲೈಂದುವೀೞ) ಅದರ ಪಾಲಕನ ಜೊತೆಗೆ ಭಂಗಪಟ್ಟು ನಾಶವಾಗುವಂತೆ (ಅದನ್ ಕೊಂಬೈ ಪರಿತ್ತು ಎರಿಂದ ಕೂತ್ತನ್) ಆ ಆನೆಯ ದಂತವನ್ನು ಕಿತ್ತೆಸೆದ ದಿವ್ಯಚೇಷ್ಟಿತವನ್ನು ಮಾಡಿದ ಸ್ವಾಮಿಯು (ಅಮರ್ನ್ದು ಉರೈಯುಂ ಇಡಂ) ಸ್ಥಿರವಾಗಿ ನೆಲಸಿರುವ ದಿವ್ಯದೇಶ ಯಾವುದೆಂದರೆ—(ವಂಬು ಅವಿೞುಮ್ ಶೆಣ್ಬಕತ್ತಿನ್) ಆಗ ತಾನೇ ಅರಳಿದ ಚಂಪಕಪುಷ್ಪದ (ಮಣಂ ಕಮೞುಂ) ಸುಗಂಧವು ಹರಡುತ್ತಿರುವ (ನಾಂಗೈತನ್ನುಳ್) ತಿರುನಾಂಗೂರಿನಲ್ಲಿ (ಶೆಮ್‌ಪೊನ್ ಮದಿಳ್) ಒಳ್ಳೆಯ ಚಿನ್ನದಿಂದ ಮಾಡಿದ ಪ್ರಾಕಾರಗಳನ್ನೂ (ಪೊೞಿಲ್ ಪುಡೈಶೂೞ್) ಅವುಗಳನ್ನು ಸುತ್ತುವರಿದಿರುವ ಹೂದೋಟಗಳನ್ನು ಉಳ್ಳ (ತಿರುತ್ತೇವನಾರ್ ತೊಹೈಯೇ) ತಿರುತ್ತೇವನಾರ್ ತೊಹೈ ಎಂಬ ದಿವ್ಯದೇಶವೇ.

ಒಬ್ಬ ಹೆಣ್ಣುಮಗಳಿಗಾಗಿ ಅಚೇತನವಾದ ಬಿಲ್ಲನ್ನು ಮುರಿದುದಕ್ಕಿಂತಲೂ ಮಥುರೆಯಲ್ಲಿನ ಹೆಣ್ಣುಮಕ್ಕಳಿಗೆಲ್ಲಾ ಉಪಕಾರಕನಾಗಿ ಕುವಲಯಾಪೀಡದ ಕೊಂಬನ್ನುಮುರಿದ ಅತಿಮಾನುಷ ಚೇಷ್ಟಿತವನ್ನು ಇಲ್ಲಿ ವರ್ಣಿಸಿದ್ದಾರೆ. ಆ ಕುವಲಯಾಪೀಡವನ್ನೂ ಅದರ ಪಾಲಕನನ್ನೂ ಭಂಜಿಸಿ ಅದರ ದಂತಗಳೆರಡನ್ನೂ ಸಮೂಲವಾಗಿ ಕಿತ್ತು ಕುಣಿದಾಡಿದ ಸ್ವಾಮಿ ಮನ ಒಲಿದು ನೆಲಸಿರುವ ದೇಶ ಇದು.

ಕಾರ್ ಆರ್ನ್ದ ತಿರುಮೇನಿ ಕಣ್ಣನ್ ಅಮರ್ನ್ದು
ಉರೈಯುಮಿಡಂ
ಶೀರ್ ಆರ್ನ್ದ ಪೊಳಿಲ್ ನಾಂಗೈ ತಿರುತ್ತೇವನಾರ್
ತೊಹೈಮೇಲ್
ಕೂರಾರ್ನ್ದವೇಲ್ ಕಲಿಯನ್ ಕೂರುತಮಿೞ್
ವಲ್ಲಾರ್ಪತ್ತುಂ
ಏರಾರ್ನ್ದ ವೈಹುಂದತ್ತು ಇಮೈಯವರೋಡು ಇರುಪ್ಪಾರೇ
॥೧೦॥

(ಕಾರ್ ಆರ್ನ್ದ ತಿರುಮೇನಿ) ನೀಲಮೇಘಕ್ಕೆ ಹೋಲುವ ದಿವ್ಯ ಮಂಗಳ ವಿಗ್ರಹವುಳ್ಳ (ಕಣ್ಣನ್) ಶ್ರೀಕೃಷ್ಣನು (ಅಮರ್ನ್ದುಉರೈಯುಂ ಇಡಂ) ಹೊಂದಿಕೊಂಡು ಬಾಳುತ್ತಿರುವ ಕ್ಷೇತ್ರವಾದುದೂ, (ಶೀರ್ ಆರ್ನ್ದ ಪೊಳಿಲ್ ನಾಂಗೈ) ಸೌಂದರ್ಯವು ತುಂಗಿರುವ ತೋಪುಗಳನ್ನುಳ್ಳ ತಿರುನಾಂಗೂರಿನಲ್ಲಿರು ವುದೂ ಆದ (ತಿರುತ್ತೇವನಾರ್ ತೊಹೈಮೇಲ್) ತಿರುತ್ತೇವನಾರ್ ತೊಹೈ ಎನ್ನುವ ದಿವ್ಯದೇಶವನ್ನು ಕುರಿತು (ಕೂರ್ಆರ್ನ್ದವೇಲ್ ಕಲಿಯನ್) ತೀಕ್ಷ್ಣವಾದ ವೇಲಾಯುಧವನ್ನು ಧರಿಸಿರುವ ಕಲಿಯನ್ ಅವರು (ಕೂರು) ಅನುಗ್ರಹಿಸಿದ (ತಮಿೞ್ಪತ್ತುಂ ವಲ್ಲಾರ್) ಈ ಹತ್ತು ತಮಿಳು ಪಾಶುರ ಗಳನ್ನು ಅಭ್ಯಾಸ ಮಾಡುವವರು (ಏರ್ ಆರ್ನ್ದ ವೈಹುಂದತ್ತು) ನಲ್ಮೆಯು ಸಮೃದ್ಧವಾಗಿರುವ ಶ್ರೀ ವೈಕುಂಠದಲ್ಲಿ (ಇಮೈಯುವರೋಡು ಇರುಪ್ಪಾರ್) ನಿತ್ಯಸೂರಿಗಳೊಡನೆ ಕೂಡಿ ಇರುವವರಾಗುತ್ತಾರೆ.

ಮೇಘದಂತೆ ಶ್ರಮಹರವಾದ ರೂಪವನ್ನುಳ್ಳ ಪರಮಾತ್ಮನು ಮತ್ತೊಂದು ಜಾಗವನ್ನು ಮನಸ್ಸಿನಲ್ಲಿಯೂ ನೆನೆಯದಂತೆ ಸ್ಥಿರವಾಗಿ ಇರುತ್ತಿರುವ ದಿವ್ಯಕ್ಷೇತ್ರ ಇದು. ಈ ಕ್ಷೇತ್ರದ ಮೇಲೆ ಹಾಡಿರುವವರು ತಿರುಮಂಗೈ ಆಳ್ವಾರ್ ಅವರು. ಶತ್ರುಗಳನ್ನು ಅಭಿಭವಿಸುವಾಗ ವೇಲಾಯುಧ ಹಿಡಿದು ಇವರು ಹೇಗೆ ಸರ್ವಾಧಿಕರಾಗಿರುವರೋ ಹಾಗೆಯೇ ಕವಿತ್ವವನ್ನು ಹಾಡು ವಾಗಲೂ ಮೂರ್ಧನ್ಯಪ್ರಾಯರೇ ಆಗಿದ್ದಾರೆ. ಈ ದಶಕವನ್ನಭ್ಯಾಸಮಾಡು ವವರು ಅನವಧಿಕವಾದ ಆನಂದಕ್ಕೆಡೆಯಾದ ಶ್ರೀವೈಕುಂಠ ಕ್ಷೇತ್ರದಲ್ಲಿ ಅನಂತ ಗರುಡವಿಷ್ವಕ್ಸೇನರುಗಳೊಡನೆ ಕೂಡಿರುತ್ತಾ 'ನ ಚ ಪುನರಾವರ್ತತೇ' ಎಂಬಂತೆ ಎಂದೂ ಭಗವಂತನೊಡನೆ ಕೂಡಿರುವವರಾಗುತ್ತಾರೆ.

# 'ಕಂಬಮಾಕಡಲ್'

## ಪ್ರವೇಶ

ಬ್ರಹ್ಮಾದಿಗಳಿಗೆ ಉತ್ಪಾದಕನೂ, ಅವರು ತಾವೇ ತಮಗೆ ಅನರ್ಥವನ್ನು ತಂದುಕೊಂಡಾಗ ಆ ಅನರ್ಥಗಳನ್ನು ಹೋಗಲಾಡಿಸಿ ರಕ್ಷಿಸುವ ಸ್ವಭಾವವುಳ್ಳವನೂ, ಅಸುರರೊಡನೆ ಅವರು ಕೂಡಿಕೊಂಡು ಬಂದಾಗ ಅವರನ್ನು ಜಯಿಸಿ ಲೋಕವನ್ನು ರಕ್ಷಿಸುವವನೂ ಆದ ಸರ್ವೇಶ್ವರನು ಒಲಿದುಬಂದು ಇರುತ್ತಿರುವ ಕ್ಷೇತ್ರ 'ವಣ್‌ಪುರುಡೋತ್ತಮಕ್ಷೇತ್ರ' ಎಂದು ನಿರೂಪಿಸಿ ಆ ಕ್ಷೇತ್ರದ ವೈಲಕ್ಷಣ್ಯವನ್ನು ಅನುಭವಿಸಿ ಅದನ್ನು ಈ ದಶಕದಲ್ಲಿ ವರ್ಣಿಸುತ್ತಾರೆ.

**ಕಂಬಮಾಕಡಲ್ ಅಡೈತ್ತು ಇಲಂಗೈಕ್ಕುಮನ್ ಕದಿರ್ಮುಡಿ**
**ಅವೈಪತ್ತುಂ**
**ಅಂಬಿನಾಲ್ ಅರುತ್ತು ಅರಶವನ್‌ತಂಬಿಕ್ಕು ಅಳಿತ್ತವನ್**
**ಉರೈಕೋಯಿಲ್**
**ಶೆಮ್ಪಲಾನಿರೈ ಶೆಣ್ಬಕಂ ಮಾದವಿ ಚೂತಕಂ**
**ವಾಟಿಕೈಹಳ್‌ಶೂೞ್**
**ವಂಬುಉಲಾಂ ಕಮುಕು ಓಂಗಿಯ ನಾಂಗೂರ್**
**ವಣ್‌ಪುರುಡೋತ್ತಮಮೇ ॥೧॥**

(ಕಂಬ ಮಾಕಡಲ್) ನೋಡಿದಾಗಲೇ ನಡುಕವುಂಟುಮಾಡುವ ದೊಡ್ಡ ಸಮುದ್ರಕ್ಕೆ (ಅಡೈತ್ತು) ಸೇತುವೆಯನ್ನು ಕಟ್ಟಿ (ಇಲಂಗೈಕ್ಕುಮನ್) ಲಂಕಾಧಿಪನಾದ ರಾವಣನ (ಕದಿರ್‌ಮುಡಿ ಅವೈಪತ್ತುಂ ಅಂಬಿನಾಲ್ ಅರುತ್ತು) ತೇಜಸ್ಸನ್ನು ಕೆದರುತ್ತಿದ್ದ ಹತ್ತು ತಲೆಗಳನ್ನೂ ಬಾಣಗಳಿಂದ ಕತ್ತರಿಸಿ (ಅವನ್ ತಂಬಿಕ್ಕು ಅರಶು ಅಳಿತ್ತವನ್) ಅವನ ತಮ್ಮನಾದ ವಿಭೀಷಣನಿಗೆ ರಾಜ್ಯವನ್ನಿತ್ತ ಶ್ರೀರಾಮಚಂದ್ರನು (ಉರೈಕೋಯಿಲ್) ನೆಲಸಿರುವ ಸ್ಥಳ ಯಾವುದು ಎಂದರೆ_

(ಶೆಮ್‍ಪಲಾನಿರೈ) ಹಲಸಿನ ಮರಗಳ ಸುಂದರವಾದ ಸಾಲುಗಳೂ (ಶೆಣ್ಬಕಂ ಮಾದವಿ ಚೂತಕಂ ವಾಟ್ಟಿಹಳ್) ಚಂಪಕವೃಕ್ಷಗಳು, ಕುರುಕ್ಕತ್ತಿ ಮರಗಳು, ಮಾವಿನ ಮರಗಳು, ಬಾಳೆಯ ಗಿಡಗಳು ಎಂಬುವ ಇವುಗಳಿಂದ (ಶೂಟ್) ಸುತ್ತುವರಿಯಲ್ಪಟ್ಟದೂ (ವಂಬು ಉಲಾಂ ಕಮುಕು ಓಂಗಿಯ) ಪರಿಮಳ ಹರಡುತ್ತಿರುವ ಅಡಕೆ ಮರಗಳು ಉನ್ನತವಾಗಿ ಬೆಳೆದು ಇರುವುದೂ ಆದ (ನಾಂಗೂರ್ ವಣ್‍ಪುರುಡೋತ್ತಮಂ) ತಿರುನಾಂಗೂರಿನಲ್ಲಿರುವ 'ವಣ್ ಪುರುಡೋತ್ತಮ' ಎಂಬ ದಿವ್ಯ ದೇಶವೇ ಆಗಿದೆ.

ಇಟ್ಟುದೆಲ್ಲವೂ ಕರಗಿಹೋಗುವ ಹಾಗೆ ಅಲೆಗಳು ಏಳುತ್ತಿದ್ದ ಮಹಾ ಸಾಗರಕ್ಕೆ ಸೇತುವೆಯನ್ನು ಕಟ್ಟಿದ ಸ್ವಾಮಿ. 'ಪ್ರಬಲವಾದ ರಕ್ಷಣೆಯುಳ್ಳ ಲಂಕೆಗೆ ನಾನು ನಿರ್ವಾಹಕನಲ್ಲವೋ' ಎಂದು ದುವರ್ಹಾನಿಯಾದ ರಾವಣನನ್ನು ನಿರಸನಮಾಡಿದ ಪ್ರಭು. ಹತ್ತು ದಿಕ್ಕುಗಳಲ್ಲಿಯೂ ದಿಗ್ವಿಜಯಮಾಡಿ ಧರಿಸಿ ಕೊಂಡಿದ್ದ ಕಿರೀಟಗಳನ್ನುಳ್ಳ ಹತ್ತು ತಲೆಗಳನ್ನು ಉದುರಿಸಿದ. ಬ್ರಹ್ಮಾಸ್ತ್ರಾದಿ ಗಳಿಗೂ ಶಕ್ಯವಾಗದಂತೆ ವರಬಲದಿಂದ ಅಪ್ರಧೃಷ್ಯವಾಗಿದ್ದವಂತೆ ಆ ತಲೆಗಳು. ರಾಕ್ಷಸರಾಜ್ಯ ಅರಾಜಕವಾಗಿ ಹೋಗದಂತೆ ಒಬ್ಬ ಒಳ್ಳೆಯ ರಾಕ್ಷಸನಿಗೆ ಅನುಗ್ರಹಿಸಿದ ಸ್ವಾಮಿ ನಿತ್ಯವಾಸಮಾಡುವ ದೇಶ ಇದು. ಆ ದೇಶದಲ್ಲಿರುವ ಹೂದೋಟಗಳು, ತೋಪುಗಳು ಸುಂದರವಾಗಿ ಪುಷ್ಪಸೌಗಂಧ್ಯವನ್ನು ಎಲ್ಲೆಲ್ಲೂ ಹರಡುತ್ತಿರುವುವಂತೆ.

**ಪಲ್ಲವಂ ತಿಹಟ್ ಪೂಂಕಡಂಬುಏರಿ**
**ಅಕ್ಕಾಳಿಯನ್ ಪಣಂಅರಂಗಿಲ್**
**ಒಲ್ಲೈವಂದು ಉರಪಾಯ್‍ನ್ದು ಅರುಸಡಂ**
**ಶೆಯ್‍ದ ಉಂಬರ್‍ಕೋನ್ ಉರೈಕೊಯಿಲ್**
**ನಲ್ಲವೆಮ್‍ತಟಲ್‍ಮೂನ್ರು ನಾಲ್ ವೇದಂ**
**ಐವೇಳ್ವಿಯೋಡಾರು ಅಂಗಂ**
**ವಲ್ಲ ಅಂದಣರ್ ಮಲ್‍ಹಿಯ ನಾಂಗೂರ್**
**ವಣ್‍ಪುರುಡೋತ್ತಮಮೇ ॥೨॥**

(ಪಲ್ಲವಂ ತಿಹಟ) ಚಿಗುರುಗಳು ಮೊಳೆತು ಶೋಭಿಸುವ (ಪೂಕಡಂಬು ಏರಿ) ಹೂಬಿಟ್ಟ ಕದಂಬವೃಕ್ಷವನ್ನೇರಿ (ಅಕ್ಕಾಳಿಯನ್ ಪಣಂ ಅರಂಗಿಲ್)ಅಂಥ ಕ್ರೂರ

ಕಾಳಿಂಗಸರ್ಪದ ಹೆಡೆಗಳೆಂಬುವ ನಾಟ್ಯಸ್ಥಲದಲ್ಲಿ (ಒಲ್ಲೈಯೆಂದು ಉರ ಪಾಯರ್‌ನ್ದು) ದಿಢೀರ್ ಎಂದು ಬಂದು ಧುಮುಕಿ (ಅರುನಡಂಶೆಯ್‌ದ) ಅದ್ಭುತವಾದ ನರ್ತನವನ್ನು ಮಾಡಿದ (ಉಂಬರ್ ಕೋನ್ ಉಲ್ಕೈಕೋಯಿಲ್) ದೇವಾಧಿದೇವನು ನಿತ್ಯವಾಸಮಾಡುವ ದೇಶ ಯಾವುದೆಂದರೆ—(ವೆಮ್ ತಟಿಲ್‌ಮೂನ್ರು) ತ್ರೇತಾಗ್ನಿಗಳನ್ನೂ (ನಾಲ್‌ವೇದಂ ಐವೇಳ್ವಿಯೊಡು) ಚತುರ್ವೇದಗಳನ್ನೂ ಪಂಚಮಹಾಯಜ್ಞಗಳನ್ನೂ (ಆರು ಅಂಗಂ ವಲ್ಲ) ಆರು ವೇದಾಂಗಗಳನ್ನೂ ಅಧಿಕರಿಸಿ ಸಮರ್ಥರಾದ (ನಲ್ಲ ಅಂದಣರ್ ಮಲ್‌ಹಿಯ) ಒಳ್ಳೆಯ ಬ್ರಾಹ್ಮಣರುಗಳು ತುಂಬಿರುವಂತಹ (ನಾಂಗೂರ್‌ವಣ್ ಪುರುಡೋ ತ್ತಮಂ) ತಿರುನಾಂಗೂರಿನಲ್ಲಿರುವ ವಣ್‌ಪುರುಡೋತ್ತಮಂ ಎಂಬ ಕ್ಷೇತ್ರವೇ ಆಗಿದೆ.

ರಣರಂಗದಲ್ಲಿ ದಶಕಂಠನ ಹತ್ತು ತಲೆಯನ್ನು ಉದುರಿಸಿರುವುದಷ್ಟೇ ಅಲ್ಲ. ವಿಷಕಂಠನಾದ ಕಾಳಿಂಗನ ನೂರು ತಲೆಗಳ ಮೇಲೆ ತನ್ನ ಶ್ರೀಪಾದ ಗಳನ್ನು ಮೆಟ್ಟಿದ ರೀತಿಯನ್ನು ಇಲ್ಲಿ ಅನುಸಂಧಾನ ಮಾಡುತ್ತಾರೆ. ಕಾಳಿಯಾನ ವಿಷಜ್ವಾಲೆಯಿಂದ ದಗ್ಧವಾಗಿದ್ದ ಕದಂಬವೃಕ್ಷ ಸ್ವಾಮಿಯ ಶ್ರೀಪಾದದ ಸ್ಪರ್ಶ ದಿಂದ ಚಿಗರುಗಳನ್ನು ಹೂಗಳನ್ನೂ ಕೂಡಲೇ ಹೊಂದುವಂತಾಯಿತು. ಆ ಕದಂಬವೃಕ್ಷಾಗ್ರದಿಂದ ಕಾಳಿಯನು ತಪ್ಪಿಸಿಕೊಳ್ಳದ ಹಾಗೆ ಅನಿರೀಕ್ಷಿತವಾಗಿ ಅವನ ಮೇಲೆ ಧುಮುಕಿ ಅವನ ಫಣಗಳೆಂಬ ರಂಗಸ್ಥಳದಲ್ಲಿ ಅದ್ಭುತವಾದ ನೃತ್ಯವನ್ನು ಮಾಡಿದ ಸ್ವಾಮಿ. ಅವನು ನಿತ್ಯವಾಸಮಾಡುವ ಈ ದಿವ್ಯ ದೇಶದಲ್ಲಿರುವ ವಿಪ್ರಶ್ರೇಷ್ಠರು ತಾವು ವೇದೋಕ್ತ ಕರ್ಮಗಳನ್ನನುಷ್ಠಿಸುವು ದಷ್ಟೇ ಅಲ್ಲದೆ ಇತರರೂ ಅನುಷ್ಠಿಸುವಂತೆ ಪ್ರಭಾವ ಬೀರುವವರಾಗಿದ್ದಾರೆ.

**ಅಂಡರಾನವರ್ ವಾನವರ್‌ಕೋನುಕ್ಕೆನ್ರು**
**ಅಮೈನ್ದ ಶೋರು ಅದು ಎಲ್ಲಾಂ**
**ಉಂಡು ಕೋನಿರೈಮೆಯ್‌ತ್ತ ಅವೃಕಾತ್ತವನ್**
**ಉಹಂದು ಇನಿದು ಉರೈಕೋಯಿಲ್**
**ಕೊಂಡಲ್ ಆರ್‌ಮುಟಿವಿಲ್ ಕುಳಿರ್‌ವಾರ್**
**ಪೊಟಿಲ್ ಕುಲಮಯಿಲ್ ನಡನಮಾಡ**
**ವಂಡು ತಾನಿಶೈಪಾಡಿಡು ನಾಂಗೂರ್**
**ವಣ್‌ಪುರುಡೋತ್ತಮಮೇ ॥೩॥**

(ಅಂಡರ್ ಆನವರ್) ಗೋಪಾಲಕರುಗಳು (ವಾನವರ್‌ಕೋನುಕ್ಕು ಎನ್ರು) ದೇವೇಂದ್ರನಿಗಾಗಿ ಎಂದು (ಶಮೈತ್ತ ಶೋರು !ಅದು ಎಲ್ಲಾಂ ಉಂಡು) ಅಡಿಗೆಮಾಡಿದ ಅನ್ನವನ್ನೆಲ್ಲಾ ಭುಜಿಸಿದವನೂ, (ಕೋನಿರೈ ಅಮೈಮೆಯ್‌ತ್ತು ಕಾತ್ತವನ್) ಹಸುಗಳ ಹಿಂಡುಗಳನ್ನೆಲ್ಲಾ ಮೇಯಿಸಿ ಕಾಪಾಡಿದವನೂ ಆದ ಪರಮಾತ್ಮನು (ಉಹಂದು ಇನಿದು ಉರೈಕೋಯಿಲ್) ಸಂತೋಷಿಸಿ ಪ್ರೀತಿಯಿಂದ ಇರುತ್ತಿರುವ ದೇಶವು ಯಾವುದೆಂದರೆ—(ಕುಳಿರ್‌ಮಾರ್‌ಪೊಳಿಲ್) ತಂಪಾಗಿ ಹರಡಿರುವ ತೋಪುಗಳಲ್ಲಿ (ಕೊಂಡಲ್ ಆರ್‌ಮುಟಿಮಿಲ್) ಮೇಘಗಳ ದೊಡ್ಡ ಗರ್ಜನೆಯು ಮೊಳಗಿದಾಗ (ಕುಲಂ ಮಯಿಲ್) ಹಿಂಡು ಹಿಂಡಾಗಿರುವ ನವಿಲುಗಳು (ನಡಂ ಆಡ) ನರ್ತನ ಮಾಡುತ್ತಿರುವಂಥದೂ, (ಮಂಡು ಇಶೈ ಪಾಡಿಡು) ಭೃಂಗಗಳು ನವಿಲುಗಳ ನರ್ತನಕ್ಕನುಗುಣವಾಗಿ ಗಾನ ಮಾಡುತ್ತಿರುವಂಥದೂ ಆದ (ನಾಂಗೂರ್ ವಣ್‌ಪುರುಡೋತ್ತಮಂ) ತಿರುನಾಂಗೂರಿನಲ್ಲಿರುವ ವಣ್‌ಪುರುಡೋತ್ತಮವೆಂಬ ಕ್ಷೇತ್ರವೇ.

'ಪಶುಗಳಿಗೂ ನಮಗೂ ತನ್ನ ಮುಖವನ್ನು ತೋರಿ ಇರುತ್ತಿರುವ ಇವನಿಗಿಂತ ಅಧಿಕವಾದ ದೇವತೆ ಒಂದುಂಟೋ?' ಎಂದು ಅವನಲ್ಲಿ ತುಂಬ ಪ್ರೇಮಹೊಂದಿದ್ದರು ಗೋಪಾಲಕರುಗಳು. ದೇವೇಂದ್ರನಿಗಾಗಿ ಅವರು ಸಿದ್ಧಪಡಿಸಿದ ಅನ್ನವನ್ನೆಲ್ಲಾ ಸ್ವಾಮಿ ಭುಜಿಸಿ ಅನಂತರ ಆ ಪಶುಗಳ ರಕ್ಷಣೆ ತನ್ನದೇ ಹೊಣೆಯಾಗಲು, ಅವುಗಳನ್ನು ಮೇಯಿಸಿ, ಅವುಗಳಿಗೆ ಆಪತ್ತು ಬಂದಾಗ ಕಾಪಾಡಿದ. 'ಇನ್ನೂ ಹೀಗೆ ರಕ್ಷಿಸಲು ಇದು ತಕ್ಕದೇಶ' ಎಂದು ಸ್ವಾಮಿ ಒಲಿದುಬಂದು ನಿತ್ಯವಾಸ ಮಾಡುತ್ತಿರುವ ದಿವ್ಯದೇಶ ಇದು. ಮೇಘಗಳ ಘೋಷವೇ ವಾದ್ಯವಾಗಲು, ಶ್ರಮಹರವಾದ ತೋಪುಗಳಲ್ಲಿ ನವಿಲುಗಳ ಗುಂಪುಗಳು ನರ್ತಿಸಲು ಭೃಂಗಗಳು ಅವುಗಳ ನೃತ್ಯಕ್ಕನುಗುಣವಾದ ಗಾನವನ್ನು ಅಲ್ಲಿ ಹಾಡುತ್ತವಂತೆ. ಅಂಥ ಸುಂದರವಾದ ದೇಶ ಅದು.

ಪೆರುಂಗೈಯಾನೈಯಿನ್ ಕೊಂಬಿನೈಪರಿತ್ತು
ಅತನ್ ಪಾಹನೈ ಶಾಡಿ ಪುಕ್ಕು
ಒರುಂಗ ಮಲ್ಲರೈಕೊನ್ರು ಪಿನ್ ಕಂಜನೈ
ಉದೈತ್ತವನ್ ಉರೈಕೋಯಿಲ್

ಕರುಂಬಿನೊಡು ಉಯರ್ ಶಾಲಿಹಳ್
ವಿಳೈತರು ಕಟನಿಯಿಲ್ ಮಲಿವಾವಿ
ಮರುಂಗೆಲಾಂ ಪೊಟಿಲೋಂಗಿಯ ನಾಂಗೂರ್
ವಣ್ ಪುರುಡೋತ್ತಮಮೇ ‖೪‖

(ಪರುಕ್ಕೈಯಾನೈಯಿನ್) ದೊಡ್ಡ ತುಂದಿಕ್ಕೈಯುಳ್ಳ ಕುವಲಯಾಪೀಡದ (ಕೊಂಬಿನೈ ಪರಿತ್ತು) ದಂತಗಳನ್ನು ಕಿತ್ತು ಅದನ್ನು ಕೊಂದು (ಅದನ್ ಪಾಹನೈಶಾಡಿ) ಅದರ ಪಾಲಕನನ್ನೂ ಸಂಹರಿಸಿ (ಪುಕ್ಕು) ಒಳಗೆ ನುಗ್ಗಿ ಮಲ್ಲರ್ಶೈ ಒರುಂಗ ಕೊನ್ರು) ಮಲ್ಲರುಗಳನ್ನೂ ಒಟ್ಟಿಗೆ ಕೊಂದುಹಾಕಿ (ಪಿನ್ ಕಂಜನೈ ಉದೈತ್ತವನ್) ಅದರ ಮೇಲೆ ಕಂಸನನ್ನೂ ಮುಗಿಸಿಬಿಟ್ಟು ಕರುಣಿಸಿದ ಕೃಷ್ಣನು (ಉರೈ ಕೋಯಿಲ್) ನಿತ್ಯವಾಸ ಮಾಡುವ ಸ್ಥಳ ಯಾವುದೆಂದರೆ—(ಕರುಂಬಿನೊಡು) ಕಬ್ಬಿನ ಬೆಳೆಯ ಜೊತೆಗೆ (ಉಯರ್) ಎತ್ತರವಾಗಿ ಬೆಳೆದ (ಶಾಲಿಹಳ್ ವಿಳೈತರು) ಕಂಭತ್ತದ ಪಯಿರುಗಳು ಸೊಗಯಿಸುತ್ತಿರುವ (ಕಟನಿಯಿಲ್) ಗದ್ದೆಗಳಲ್ಲಿ (ಮಲಿವಾವಿ) ಜಲ ತುಂಬಿರುವ ನೆಲಬಾವಿಗಳ (ಮರುಂಗುಎಲಾಂ ಪೊಟಿಲ್ ಓಂಗಿಯ) ಪಕ್ಕಗಳಲ್ಲೆಲ್ಲಾ ತೋಪುಗಳು ಚೆಲುವಾಗಿ ಬೆಳೆದಿರುವಂಥ (ನಾಂಗೂರ್ ವಣ್ ಪುರುಡೋತ್ತಮಮೇ) ತಿರುನಾಂಗೂರಿನಲ್ಲಿರುವ ವಣ್ ಪುರುಡೋತ್ತಮಂ ಎಂಬ ಕ್ಷೇತ್ರವೇ ಆಗಿದೆ.

ವಿರೋಧಿನಿರಸನ ಶೀಲನಾದ ಸ್ವಾಮಿಯು ಒಂದೇ ದಿನ ಬಹಳ ಬಲಿಷ್ಠವಾದ ಕುವಲಯಾಪೀಡವನ್ನೂ, ಅದು ಮುಗಿದುಹೋದರೂ ಅದನ್ನು ನಡೆಸಬಲ್ಲ ಶಕ್ತಿಯುಳ್ಳ ಪಾಲಕನನ್ನೂ, ಚಾಣೂರ ಮುಷ್ಟಿಕಾದಿ ಮಲ್ಲರ ಸಮೂಹವನ್ನೂ, ಜನ್ಮಶತ್ರುವಾದ ಕಂಸನನ್ನೂ ನಾಶಪಡಿಸಿ ವಿಜಯಶ್ರೀಯನ್ನು ಪಡೆದುದನ್ನು ಕೊಂಡಾಡಿ ಅನುಭವಿಸುತ್ತಾರೆ. ಇನ್ನೂ ಇಂಥ ವಿರೋಧ್ಯಂಶಗಳನ್ನು ಹೋಗಲಾಡಿಸುವುದಕ್ಕಾಗಿ ಅವನು ನಿತ್ಯವಾಸ ಮಾಡುತ್ತಿರುವ ದಿವ್ಯದೇಶ ಇದು. ಆಕಾಶದವರೆಗೆ ಉನ್ನತವಾಗಿರುವ ತೋಪುಗಳು ಕಬ್ಬಿನ ಗದ್ದೆಗಳ ಸರೋವರಗಳ ಪರಿಸರದಲ್ಲೆಲ್ಲಾ ಕಂಗೊಳಿಸಿವೆ ಅಲ್ಲಿ.

ಶಾಡು ಪೋಯ್ ವಿಟ ತಾಳ್ ನಿಮಿರ್ ತ್ತು
ಈಶನ್ ತನ್ ಪಡೈಯೊಡುಂ ಕಿಳೈಯೊಡುಂ
ಓಡ ವಾಣನ್ನೈ ಆಯಿರಂ ತೋಳ್ ಹಳುಂ
ತುಣಿತ್ತವನ್ ಉರೈಕೋಯಿಲ್

ಆಡು ವಾನ್‌ಕೊಡಿ ಅಹಲ್‌ವಿಶಂಬು ಅಣವಿಪ್ಪೋಯ್‌
ಪಹಲವನ್ ಒಳಿಮರ್ಱೈಕ್ಕುಂ
ಮಾಡ ಮಾಳಿಕೈ ಶೂಟ್‌ತರು ನಾಂಗೂರ್
ವಣ್ ಪುರುಡೋತ್ತಮಮೇ ॥೫॥

(ಶಾಡು) ಅಸುರಾವಿಷ್ಟವಾದ ಶಕಟ (ಪೋಯ್‌ವಿೞ) ಬಿದ್ದು ಒಡಿಯುವ ಹಾಗೆ (ತಾಳ್‌ನಿಮಿರ್‌ತ್ತು) ಶ್ರೀಪಾದವನ್ನು ಎತ್ತಿ ಒದೆದವನೂ, (ಈಶನ್ ತನ್ ಪಡ್ಡೆಯೊಡುಂ ಕಿಳ್ಳೆಯೊಡುಂ) ರುದ್ರನು ತನ್ನ ಸೇನೆಯೊಡನೆಯೂ ಪರಿವಾರದವರೊಡನೆಯೂ (ಓಡ) ಸೋತು ಓಡಿಹೋಗಲು (ವಾಣನ್ನೈ ಆಯಿರವರ್ ತೋಳ್‌ಹಳುಂತುಣಿತ್ತವನ್) ಬಾಣಾಸುರನ ಸಾವಿರ ತೋಳು ಗಳನ್ನೂ ಕತ್ತರಿಸಿಹಾಕಿದ ಸ್ವಾಮಿಯು (ಉರೈಕೋಯಿಲ್) ನಿತ್ಯವಾಸ ಮಾಡುವ ದಿವ್ಯದೇಶ ಯಾವುದೆಂದರೆ—(ಆಡು) ಹಾರಾಡುತ್ತಿರುವ (ವಾನ್ ಕೊಡಿ) ದೊಡ್ಡ ಧ್ವಜಗಳು (ಅಹಲ್ ವಿಶುಂಬು ಅಣವಿಪೋಯ್) ಹರಡಿದ ಆಕಾಶವನ್ನೂ ದಾಟಿ ಮೇಲೆಹೋಗಿ (ಪಹಲವನ್ ಒಳಿ ಮರ್ಱೈಕ್ಕುಂ) ಸೂರ್ಯನ ಪ್ರಕಾಶವನ್ನು ಮರೆಮಾಡುತ್ತಿರುವುದೂ, (ಮಾಡಂ ಮಾಳಿಕೈ ಶೂಟ್‌ತರು) ಮಹಲುಗಳಿಂದಲೂ ಮಾಳಿಗೆಗಳಿಂದಲೂ ಸುತ್ತುವರಿಯಲ್ಪಟ್ಟುದೂ ಆದ (ನಾಂಗೂರ್ ವಣ್‌ಪುರುಡೋತ್ತಮಮೇ) ತಿರುನಾಂಗೂರಿ ನಲ್ಲಿರುವ ವಣ್‌ಪುರುಡೋತ್ತಮವೆಂಬುವ ದಿವ್ಯಕ್ಷೇತ್ರವೇ ಆಗಿದೆ.

ಭಗವಂತನ ವಿರೋಧಿನಿರಸನ ಶೀಲತ್ವ ಎಂದೆಂದೂ ಸಿದ್ಧವಾದುದೇ ಎಂದು ಇಲ್ಲಿ ಅನುಭವಿಸುತ್ತಾರೆ. ಶಕಟ, ಕಂಸ ಮೊದಲಾದವರನ್ನು ನಿರಸನ ಮಾಡಿದುದಷ್ಟೇ ಅಲ್ಲ. ಈಶ್ವರಾಭಿಮಾನಿಗಳಲ್ಲಿ ಮೊದಲನೆಯವನಾದ ರುದ್ರನ ಅಭಿಮಾನಭಂಗವನ್ನೂ ಮಾಡಿದ ಇವನು, ಅವನನ್ನಾಶ್ರಯಿಸಿದ ಬಾಣಾಸುರನ ಸಹಸ್ರಬಾಹುಗಳನ್ನೇ ಛೇದಿಸಿದ. ಇನ್ನೂ ಯಾರು ಯಾರು ಆಶ್ರಿತ ವಿರೋಧಿಗಳಿರುವರೋ ಅವರನ್ನೆಲ್ಲಾ ಹೋಗಲಾಡಿಸಲು ಈ ದಿವ್ಯಕ್ಷೇತ್ರದಲ್ಲಿ ಬಂದು ನೆಲಸಿದ್ದಾನೆ ಆ ಸರ್ವೇಶ್ವರ.

ಅಮ್‌ಕೈಯಾಲ್ ಅಡಿಮೂನ್ರು ನೀರೇತ್ತು
ಅಯನ್ ಅಲರ್‌ಕೊಡು ತೊಟುದೇತ್ತ
ಕಂಗೈಪೋದರ ಕಾಲ್‌ನಿಮಿರ್‌ತ್ತರುಳಿಯ
ಕಣ್ಣನ್ ವಂದು ಉರೈಕೋಯಿಲ್

ಕೊಂಗ್ಶೈ ಕೋಂಗನ್ವೈಕಾಟ್ಟವಾಯ್ ಕುಮುದಂಗಳ್
ಕಾಟ್ಟಿಮಾ ಪದುಮಂಗಳ್
ಮಂಗೈಮಾರ್ ಮುಹಂ ಕಾಟ್ಟಿಡು ನಾಂಗೂರ್
ವಣ್‌ಪುರುಡೋತ್ತಮನೇ ॥೬॥

(ಮೂನ್ರುಅಡಿ ಆಮ್‌ಕೈಯಾಲ್ ನೀರ್ ಏತ್ತು) ಮೂರು ಹೆಜ್ಜೆಯ ನೆಲಕ್ಕಾಗಿ ಸುಂದರವಾದ ಶ್ರೀಹಸ್ತದಿಂದ ಉದಕದಾನ ತೆಗೆದುಕೊಂಡು ತ್ರಿವಿಕ್ರಮನಾಗಿ ಬೆಳೆದ ಸಮಯದಲ್ಲಿ (ಅಯನ್) ಬ್ರಹ್ಮದೇವನು (ಅಲರ್‌ಕೊಂಡು ತೊಟುದು ಏತ್ತ) ಪುಷ್ಪಗಳನ್ನರ್ಪಿಸಿ ಸೇವಿಸಿ ಸ್ತುತಿಸುವಂತೆಯೂ (ಕಂಗೈ ಪೋದರ) ಗಂಗೆಯು ಉದ್ಭವಿಸಿ ಹರಿದುಬರುವಂತೆಯೂ (ಕಾಲ್ ನಿಮಿರ್‌ತ್ತರುಳಿಯ ಕಣ್ಣನ್) ಶ್ರೀಪಾದವನ್ನು ಉನ್ನತವಾಗಿ ನೀಡಿದ ಸರ್ವೇಶ್ವರನು (ವಂದು ಉರೈ ಕೋಯಿಲ್) ಬಂದು ನಿತ್ಯವಾಸಮಾಡುತ್ತಿರುವ ದಿವ್ಯದೇಶ ಯಾವುದು ಎಂದರೆ—(ಕೋಂಗು ಅವ್ವೆ ಮಂಗೈಮಾರ್ ಕೊಂಗೈಕಾಟ್ಟ) ಕೋಂಗು ವೃಕ್ಷದ ಮೊಗ್ಗುಗಳು ಆ ಊರಿನಲ್ಲಿರುವ ಸ್ತ್ರೀಯರ ಸ್ತನಗಳನ್ನು ಪ್ರಕಾಶಪಡಿಸುವಂತ ಹುದೂ, (ಕುಮುದಂಗಳ್ ವಾಯ್‌ಕಾಟ್ಟ) ಸುಂದರವಾದ ಕುಮುದಗಳು ಆ ಸ್ತ್ರೀಯರ ಅಧರವನ್ನು ಪ್ರಕಾಶಪಡಿಸುವುವೂ ಆಗಿ (ಮಾ ಪದುಮಂಗಳ್ ಮುಹಂ ಕಾಟ್ಟಿಡು) ಶ್ರೇಷ್ಠವಾದ ತಾವರೆ ಹೂಗಳು ಆ ಸ್ತ್ರೀಯರ ಮುಖವನ್ನು ಪ್ರಕಾಶ ಪಡಿಸುವಂತೆ ಇರುತ್ತಿರುವ (ನಾಂಗೂರ್ ವಣ್‌ಪುರುಡೋತ್ತಮನೇ) ತಿರು ನಾಂಗೂರಿನಲ್ಲಿರುವ ವಣ್ ಪುರುಡೋತ್ತಮಂ ಎಂಬುವ ದಿವ್ಯಕ್ಷೇತ್ರವೇ ಆಗಿದೆ.

'ಗೋಸಹಸ್ರಪ್ರದಾತಾರಂ' ಎನ್ನುವಂತೆ ಸಕಲ ಪುರುಷಾರ್ಥಗಳನ್ನೂ ಕೊಟ್ಟು ಬೆಳೆದ ತನ್ನ ಸುಂದರವಾದ ಕೈಯಿಂದ ಮೂರಡಿಯ ನೆಲವನ್ನು ಸ್ವಾಮಿ ಯಾಚಿಸಿದ. ತನ್ನ ಕೈಮೇಲೆ ಮಹಾಬಲಿ ದಾನಧಾರೆಯನ್ನೆರೆದ ಮೇಲೆಯೇ ಅವನು ತ್ರಿವಿಕ್ರಮನಾಗಿ ಬೆಳೆದ. ಅವನ ಪಾದ ಬ್ರಹ್ಮದೇವನ ಸತ್ಯಲೋಕವನ್ನು ಹೋಗಿ ಮುಟ್ಟಿದಾಗ ಬ್ರಹ್ಮದೇವ ಪುಷ್ಪಾದ್ಯುಪಕರಣ ಗಳನ್ನು ತಂದು ಆ ಶ್ರೀಪಾದವನ್ನಾಶ್ರಯಿಸಿದ. ಆಗ ಗಂಗೆ ಸ್ವಾಮಿಯ ಪಾದ ದಿಂದ ಉದ್ಭವಿಸಿ ಪ್ರವಹಿಸಿತು. ಹೀಗೆ ಪಾದವನ್ನು ನೀಡಿ ಅನುಗ್ರಹಿಸಿದ ಸರ್ವೇಶ್ವರ ನಮ್ಮನ್ನೂ ಉಜ್ಜೀವನಗೊಳಿಸುವುದಕ್ಕಾಗಿ ಬಂದು ನೆಲಸಿರುವ ದಿವ್ಯಕ್ಷೇತ್ರ ಇದು. ಅಲ್ಲಿಯ ಸ್ತ್ರೀಯರ ಚೆಲುವನ್ನು ಅಲ್ಲಿನ ಕೋಂಗು ಮೊಗ್ಗು

ಗಳು, ಅರಳಿದ ಕುಮುದ ಹಾಗೂ ಕೆಂದಾವರೆಗಳು ತೋರುತ್ತವಂತೆ. ಅಲ್ಲಿರುವುದೆಲ್ಲ ಭಗವಂತನಿಗೇ ಸೇರಿದವಾದ ಕಾರಣ ಆ ದಿವ್ಯದೇಶದಲ್ಲಿನ ಮುದಗಳಿಗೂ ಲಲನೆಯರಿಗೂ ಭೇದ ತೋರುವುದಿಲ್ಲವಂತೆ. ಅವರಿಬ್ಬರಿಗೂ ಪರಸ್ಪರ ಸಾರೂಪ್ಯವನ್ನು ಕಂಡು ನಿರೂಪಿಸಿದ್ದಾರೆ.

ಉಳ್ಳೆಯು ಒಣ್‌ತಿರಲ್ ಪೊನ್ ಪೆಯರೋನ್ ತನದು
ಉರಮ್‌ಪಿಳಂದು ಉತಿರತ್ತೈ
ಅಳ್ಳೆಯುಂ ವೆಮ್‌ಶಿನತ್ತು ಅರಿ ಪರಿಕೀರಿಯು ಅಪ್ಪನ್
ವಂದುರೈಕೋಯಿಲ್
ಇಳ್ಳೆಯುಮಂಗ್ಯೆಯರ್ ಇಣ್ಣೈಅಡಿ ಶಿಲಂಬಿನೋಡು
ಎಟಿಲ್‌ಕೊಳ್ ಪಂದಡಿಪ್ಪೋರ್‌ಕೈ
ವಳ್ಳೆಯಿಲ್‌ನಿನ್ರು ಒಲಿಮುಲ್‌ಹಿಯು ನಾಂಗೂರ್
ವಣ್‌ಪುರುಡೋತ್ತಮಮೇ ॥೭॥

(ಒಣ್‌ತಿರಲ್ ಪೊನ್‌ಪೆಯರೋನ್ ಉಳ್ಳೆಯು) ಪ್ರಸಿದ್ಧಬಲವನ್ನುಳ್ಳ ಹಿರಣ್ಯ ಕಶಿಪುವು ನಾಶವಾಗುವಂತೆ (ತನದು ಉರಂ ಪಿಳೈಂದು ಉದಿರತ್ತೈ ಅಳ್ಳೆಯುಂ) ಅವನ ಎದೆಯನ್ನು ಸೀಳಿ ರಕ್ತವನ್ನಳೆದ (ವೆಮ್‌ಶಿನತ್ತು ಅರಿ) ಉಗ್ರನರಸಿಂಹ ನಾದವನೂ, (ಪರಿಕೀರಿಯು) ಕುದುರೆಯ ರೂಪದಲ್ಲಿ ಬಂದ ಕೇಶಿಯನ್ನು ಕೊಂದವನೂ ಆದ (ಅಪ್ಪನ್ ವಂದು ಉರೈಕೋಯಿಲ್) ಸ್ವಾಮಿಯು ಒಲಿದು ಬಂದು ನಿತ್ಯವಾಸವಾಡುತ್ತಿರುವ ದೇಶ ಯಾವುದೆಂದರೆ—(ಇಳ್ಳೆಯು ಮಂಗ್ಯೆಯರ್) ಚಿಕ್ಕವಯಸ್ಸಿನ ಹೆಂಗಳೆಯರು ನರ್ತನವಾಡುವಾಗ (ಇಣ್ಣೈ ಅಡಿ ಶಿಲಂಬಿ ನೋಡು) ಚರಣದ್ವಂದ್ವಗಳಲ್ಲಿ ಧರಿಸಿದ ಕಾಲಂದುಗೆಗಳ ಧ್ವನಿಯೊಡನೆ (ಎಟಿಲ್‌ಕೊಳ್‌ಪಂದು ಅಡಿಪ್ಪೋರ್ ಕೈವಳ್ಳೆಯಿಲ್‌ನಿನ್ರು) ಸುಂದರವಾದ ಚೆಂಡನ್ನು ಆಡುವವರ ಕಂಕಣಗಳಿಂದಾದ (ಒಲಿ) ನಿನಾದವು (ಮುಲ್‌ಹಿಯು) ತುಂಬಿರುವ (ನಾಂಗೂರ್‌ವಣ್‌ಪುರುಡೋತ್ತಮಮೇ) ತಿರುನಾಂಗೂರಿನಲ್ಲಿರುವ ವಣ್‌ಪುರುಡೋತ್ತಮವೆಂಬುವ ದಿವ್ಯಕ್ಷೇತ್ರವೇ ಆಗಿದೆ.

ಹಿರಣ್ಯಕನ ಭಯಂಕರಾಕಾರವನ್ನು ನೋಡಿದ ಮಹಾತ್ಮರ್ಕೇ ಬ್ರಹ್ಮಾದಿ ಗಳೂ ಹೆದರಿ ನಡುಗುವರಂತೆ, ಅಂಥ ಕ್ರೌರ್ಯ ಅವನದು. ಅವನ ಬಲಿಷ್ಠವಾದ

ವಕ್ಷಃಸ್ಥಲವನ್ನು ಸೀಳಿ ಅವನ ರಕ್ತದಲ್ಲಿ ಓಕುಳಿಯಾಡಿದ ಭೀಷಣಕೋಪವನ್ನುಳ್ಳ ಶ್ರೀ ನೃಸಿಂಹನೂ, ಕೇಶಿಮಥನನೂ ಆದ ಸ್ವಾಮಿ ಬಂದು ನಿತ್ಯವಾಸ ಮಾಡುತ್ತಿರುವ ದಿವ್ಯದೇಶ ಇದು. ಆ ಊರಿನಲ್ಲಿ ನಗರ ಘೋಷಕ್ಕಿಂತ ಹೆಚ್ಚಾಗಿ ಕೇಳಿಬರುವ ನಿನಾದವಾವುದೆಂದರೆ ಎಳೆಹರೆಯದ ಸ್ತ್ರೀಯರು ಲಾಸ್ಯವಾಡುವಾಗ ಉಂಟಾಗುವ ಕಾಲಂದುಗೆಗಳ ಶಿಂಜಿತವೂ ಮತ್ತು ಅದರೊಡನೆ ಸೇರಿದ ಚೆಂಡಾಟವಾಡುವ ಲಲನೆಯರ ಕಂಕಣನಿನಾದವೂ ಆಗಿದೆಯಂತೆ.

ವಾಳೈಆರ್ ತಡಂಕಣ್ ಉಮೈಪಂಗನ್
ವಲ್‌ಶಾಪಂಅದುನೀಂಗ
ಮೂಳೈಆರ್ ಶಿರತ್ತು ಐಯಮ್ ಅಳಿತ್ತ ಎಮ್
ಮುಹಿಲ್‌ವಣ್ಣನ್ ಉಱೈಕೋಯಿಲ್
ಪಾಳೈವಾನ್ ಕಮುಕುಊಡು ಉಯರ್ ತೆಂಗಿನ್
ವನ್‌ಪಟಿಮ್‌ವಿಟಿ ಪೆರುವಿಪ್ಪೋಯ್
ವಾಳೈಪಾಯ್ ತಡಂಶೂಟ್‌ತರು ನಾಂಗೂರ್
ವಣ್‌ಪುರುಡೋತ್ತಮಮೇ ॥೮॥

(ವಾಳೈಆರ್‌ತಡಂಕಣ್‌ಉಮೈ) ಮತ್ಸ್ಯವನ್ನು ಹೋಲುವ ವಿಶಾಲವಾದ ಕಣ್ಣುಗಳನ್ನುಳ್ಳ ಪಾರ್ವತಿಯನ್ನು (ಪಂಗನ್) ತನ್ನ ಶರೀರದ ಒಂದು ಭಾಗದಲ್ಲಿ ಉಳ್ಳ ರುದ್ರ ದೇವನ (ವಲ್‌ಶಾಪಂ ಅದುನೀಂಗ) ಬಲವಾದ ಶಾಪವು ತೊಲಗಿ ಹೋಗುವಂತೆ (ಮುನ್‌ಮೂಳೈ ಆರ್ ಶಿರತ್ತು ಐಯಮ್ ಅಳಿತ್ತ) ಹಿಂದೊಂದು ಕಾಲದಲ್ಲಿ ಕೇವಲ ಮೂಳೆಯಾದ ತಲೆಯೋಡಿನಲ್ಲಿ ಭಿಕ್ಷೆಯನ್ನಿತ್ತ (ಎಮ್ ಮುಹಿಲ್‌ವಣ್ಣನ್ ಉಱೈಕೋಯಿಲ್) ನೀಲಮೇಘ ವರ್ಣನಾದ ನಮ್ಮ ಸ್ವಾಮಿಯು ನೆಲಸಿರುವ ಸ್ಥಲ ಯಾವುದೆಂದರೆ—(ಪಾಳೈವಾನ್‌ಕಮುಕು ಊಡು) ಹೊಂಬಾಳೆಗಳನ್ನು ಹೊಂದಿ ಎತ್ತರವಾಗಿ ಬೆಳೆದಿರುವ ಅಡಿಕೆಮರಗಳ ನಡುವೆ (ಉಯರ್ ತೆಂಗಿನ್ ವನ್‌ಪಟಿಮ್‌ವಿಟಿ) ಉನ್ನತವಾಗಿ ಬೆಳೆದಿರುವ ತೆಂಗಿನ ಮರಗಳ ದೊಡ್ಡಗಾತ್ರದ ಕಾಯಿಗಳು ಕೊಳಗಳಲ್ಲಿ ಬೀಳಲು (ವಾಳೈ ಪೆರುವಿಪ್ಪೋಯ್ ಪಾಯ್‌ತಡಂ ಶೂಟ್‌ತರು) ಅಲ್ಲಿದ್ದ ಮೀನುಗಳು ಹೆದರಿ ಆ ಜಾಗಬಿಟ್ಟು ಹೋಗಿ ಬೇರೆಡೆಯಲ್ಲಿ ಚಿಮ್ಮಿ ಹೋಗಿ ಸೇರುವಂತಹ ತಟಾಕ

ಗಳಿಂದ ಸುತ್ತುವರಿಯಲ್ಪಟ್ಟ (ನಾಂಗೂರ್ ವಣ್‍ಪುರುಡೋತ್ತಮವೇ) ತಿರುನಾಂಗೂರಿನಲ್ಲಿರುವ ವಣ್‍ಪುರುಡೋತ್ತಮ ಎಂಬ ದಿವ್ಯಕ್ಷೇತ್ರವೇ ಆಗಿದೆ.

'ಮೀನಾಕ್ಷಿ' ಎಂದು ಹೇಳುವಂತಹ ವಿಶಾಲವಾದುವೂ ತಂಪಾದವೂ ಆದ ಕಣ್ಣುಗಳನ್ನುಳ್ಳ ಪಾರ್ವತೀ ದೇವಿಗೆ ತನ್ನ ದೇಹದಲ್ಲಿಯೇ ಭಾಗವನ್ನಿತ್ತ ರುದ್ರದೇವನಿಗೆ ಉಂಟಾದ ಬ್ರಹ್ಮಶಾಪದಿಂದ ವಿಮೋಚನೆಯಾಗುವಂತೆ ಅನುಗ್ರಹಮಾಡಿದ ಪರಮೋದಾರನಿವನು. ಆ ಕ್ಷೇತ್ರದಲ್ಲಿ ಆಕಾಶದುದ್ದಕ್ಕೂ ಬೆಳೆದಿರುವ ಅಡಿಕೆ, ತೆಂಗುಗಳ ಸೌಂದರ್ಯ ವರ್ಣನಾತೀತ. ಮರದಿಂದ ಬಲಿತ ದೊಡ್ಡ ಕಾಯಿಗಳು ತಟಾಕಗಳಲ್ಲಿ ಬಿದ್ದಾಗ ಅಲ್ಲಿದ್ದ ಮತ್ಸ್ಯಗಳು ಹೆದರಿ ಬೇರೆಡೆಗೆ ಚಿಮ್ಮಿಹೋಗುವುವಂತೆ. ಅಂಥ ತಟಾಕಗಳು ಸುತ್ತುವರಿದಿರುವ ನಾಂಗೂರಿನ ವಣ್‍ಪುರುಡೋತ್ತಮ ಕ್ಷೇತ್ರ ಸರ್ವರಕ್ಷಕನಾದ ಸ್ವಾಮಿಯು ನಿತ್ಯವಾಸ ಮಾಡುವ ದಿವ್ಯಕ್ಷೇತ್ರವಾಗಿದೆ.

**ಇಂದುವಾರ್‍ಶಡೈ ಈಶನೈ ಪಯಂದ ನಾನ್ಮುಹನೈ**
**ತನ್ ಎಟಿಲ್ ಅರುಂ**
**ಉಂದಿ ಮಾಮಲರ್‍ಮೀಮಿಶೈ ಪಡೈತ್ತವನ್ ಉಹಂದು**
**ಇನಿದು ಉರೈಕೋಯಿಲ್**
**ಕುಂದಿ ವಾಟ್ಟಿಯಿನ್ ಕೊಟುಂಗನಿ ನುಹರ್‍ನ್ದು**
**ತನ್ ಕುರುಳೈಯೈ ತಟುವಿಪ್ಪೋಯ್**
**ಮಂದಿ ಮಾಂಬಣೈಮೇಲ್ ವೈಹು ನಾಂಗೂರ್**
**ವಣ್‍ಪುರುಡೋತ್ತಮವೇ ॥೯॥**

(ಇಂದು) ಚಂದ್ರನೊಡನೆ ಕೂಡಿ (ವಾರ್‍ಶಡೈ) ನೀಳವಾದ ಜಟಾಕಲಾಪವ ನ್ನುಳ್ಳ (ಈಶನೈಪಯಂದ ನಾನ್ಮುಹನೈ) ರುದ್ರನನ್ನು ಸೃಜಿಸಿದ ಚತುರ್ಮುಖ ನನ್ನು (ತನ್ ಎಟಿಲ್ ಅರುಂ) ತನ್ನ ಸೌಂದರ್ಯಯುಕ್ತವಾದ (ಉಂದಿಮಾ ಮಲರ್‍ಮಿಶೈ) ನಾಭಿಕಮಲದಲ್ಲಿ (ಪಡೈತ್ತವನ್ ಉಹಂದು ಇನಿದು ಉರೈ ಕೋಯಿಲ್) ಸೃಷ್ಟಿಮಾಡಿದ ಭಗವಂತನು ಪ್ರೀತಿಯಿಂದ ಒಲಿದುಬಂದು ನಿತ್ಯವಾಸ ಮಾಡುತ್ತಿರುವ ಸ್ಥಳ ಯಾವುದೆಂದರೆ—(ಮಂದಿ) ಹೆಣ್ಣುಕೋತಿಯು (ಕುಂದಿ) ತುದಿಗಾಲ ಮೇಲೆ ನಿಂತು (ವಾಟ್ಟಿಯಿನ್ ಕೊಟುಂಗನಿ ನುಹರ್‍ನ್ದು) ಒಳ್ಳೆಯ ಬಾಳೆಹಣ್ಣುಗಳನ್ನು ಎಟುಕಿಸಿಕೊಂಡು ಭುಜಿಸಿ (ತನ್ ಕುರುಳೈಯೈ

ತಟುವಿ) ತನ್ನ ಮರಿಯುನ್ನು ಕಟ್ಟಿಕೊಂಡು (ಪೋಯ್‌ವಶಾವ್ಪುಣ್ಯೆಮೇಲ್ ನ್ಯೆಹಂ) ಅಲ್ಲಿಂದ ಹೋಗಿ ಮಾಮರದ ಕೊಂಬೆಯಮೇಲೆ ತಂಗಿರುವಂತಹ (ನಾಂಗೂರ್‌ವಣ್‌ಪುರುಡೋತ್ತಮಮೇ) ತಿರುನಾಂಗೂರಿನಲ್ಲಿರುವ ವಣ್‌ಪುರುಡೋತ್ತಮವೆಂಬ ದಿವ್ಯಕ್ಷೇತ್ರವೇ ಆಗಿದೆ.

ಚಂದ್ರನ ಅಮೃತ ಕಿರಣಗಳೊಡನೆ ಸೇರಿಕೊಂಡು ತೂಗಾಡುವ ಜಟೆಗಳನ್ನುಳ್ಳ ರುದ್ರನನ್ನು ಸೃಜಿಸಿದ ಚತುರ್ಮುಖನನ್ನು ತೇಜಿಷ್ಠವಾದುದೂ ಅತಿ ಚೆಲುವಾದುದೂ ಆದ ತನ್ನ ನಾಭಿಕಮಲದ ಮೇಲೆ ಸೃಜಿಸಿದ ಸರ್ವೇಶ್ವರ ತಾನು ಸೃಜಿಸಿದ ಚತುರ್ಮುಖನಿಂದ ಸೃಷ್ಟವಾದ ಜಗತ್ತಿದು ಎಂದು ಅದರ ರಕ್ಷಣೆಯಲ್ಲಿ ಆಸಕ್ತಿಹೊಂದಿ ನೆಲಸಿರುವ ದಿವ್ಯದೇಶವಿದು.

ಆ ಕ್ಷೇತ್ರದಲ್ಲಿ ಫಲವೃಕ್ಷಗಳು ಸಮೃದ್ಧವಾಗಿರುವುದನ್ನೂ ಅಲ್ಲಿರುವ ಕಪಿಗಳು ಆ ಹಣ್ಣುಗಳನ್ನು ಆಸ್ವಾದಿಸಿ ರಮಿಸುವುದನ್ನೂ ಇಲ್ಲಿ ವರ್ಣಿಸಿದೆ.

**ಮಣ್ಣುಳ್ ಆರ್‌ಪುಹಟ್ ವೇದಿಯರ್ ನಾಂಗೂರ್**
**ವಣ್‌ಪುರುಡೋತ್ತಮತ್ತುಳ್**
**ಅಣ್ಣಲ್ ಶೇವಡಿಕ್ಕೀಟ್ ಅಡ್ಯೆಂದು ಉಯಂದವನ್ ಆಲಿಮನ್**
**ಅರುಳ್‌ಮಾರಿ**
**ಪಣ್ಣುಳ್ ಆರ್‌ತರಪಾಡಿಯ ಪಾಡಲ್ ಇಪ್ಪತ್ತುಂವಲ್ಲಾರ್**
**ಉಲಹಿಲ್**
**ಎಣ್ಣಿಲಾದ ಪೇರಿನ್‌ಬಂ ಉತ್ತು ಇಮೈಯವರೋಡುಂ**
**ಕೂಡುವರೇ ॥೧೦॥**

(ಮಣ್ಣುಳ್) ಭೂಮಂಡಲದಲ್ಲಿ (ಆರ್‌ಪುಹಟ್ ವೇದಿಯರ್) ಎಲ್ಲೆಲ್ಲೂ ಹರಡಿದ ಕೀರ್ತಿಯನ್ನುಳ್ಳ ವೈದಿಕರು ಬಾಳುತ್ತಿರುವ (ನಾಂಗೂರ್ ವಣ್‌ಪುರುಡೋತ್ತಮತ್ತುಳ್) ತಿರುನಾಂಗೂರಿನಲ್ಲಿರುವ ವಣ್ ಪುರುಡೋತ್ತಮವೆಂಬುವ ಕ್ಷೇತ್ರದಲ್ಲಿ ಬಿಜಯಮಾಡಿಸಿರುವ (ಅಣ್ಣಲ್ ಶೇ ಅಡಿಕ್ಕೀಟ್) ಸ್ವಾಮಿಯ ಶ್ರೀಪಾದಗಳ ಅಡಿಯಲ್ಲಿ (ಅಡ್ಯೆಂದು ಉಯರ್‌ನ್ದವನ್) ಸೇರಿ ಉಜ್ಜೀವಿಸಿದವರೂ (ಆಲಿಮನ್) ತಿರುವಾಲಿನಾಡಿಗೆ ನಾಯಕರಾದವರೂ, (ಅರುಳ್‌ಮಾರಿ) ಕೃಪೆಯನ್ನು ವರ್ಷಿಸುವ ಮೇಘವಾಗಿರುವವರೂ ಆದ

ತಿರುಮಂಗೈ ಆಳ್ವಾರ್ರವರು (ಪಣ್ಣಾರ್ ಆರ್‌ತರ) ಗಾನಕ್ಕೆ ಹೊಂದುವಂತೆ (ಪಾಡಿಯ ಪಾಡಲ್ ಇಪ್ಪತ್ತುಂ) ಹಾಡಿದ ಪಾಶುರಗಳಾದ ಇವು ಹತ್ತನ್ನೂ (ವಲ್ಲಾರ್) ಬಲ್ಲವರು (ಉಲಹಿಲ್ ಎಣ್ ಇಲಾದ ಪೇರ್ ಇನ್ಬಂ ಉತ್ತು) ಈ ಲೋಕದಲ್ಲಿ ಎಲ್ಲೆ ಇಲ್ಲದ ಮಹಾನಂದಗಳನ್ನು ಅನುಭವಿಸಿ (ಇಮೈಯವ ರೋಡುಂ ಕೂಡುವರ್) ನಿತ್ಯಸೂರಿಗಳ ಜೊತೆಗೂ ಕೂಡಿ ಬಾಳುವವರಾಗು ತ್ತಾರೆ.

ಸರ್ವೇಶ್ವರನ ಪಾದಗಳನ್ನಾಶ್ರಯಿಸಿ, 'ಅಸನ್ನೇವ ಸ ಭವತಿ' ಎನ್ನುವ ನಿಲುವನ್ನು ತಳ್ಳಿಹಾಕಿ ಉಜ್ಜೀವನವನ್ನು ಹೊಂದಿದವರು ಆಳ್ವಾರ್ರವರು. ತಿರುವಾಲಿಯಲ್ಲಿರುವವರಿಗೆ ಪ್ರಧಾನರಾಗಿ ನಿರ್ವಾಹಕರಾದವರು ಇವರು. ಆಶ್ರಿತರಿಗೆ ಅನುಗ್ರಹ ಮಾಡುವುದರಲ್ಲಿ ಮೇಘದಂತೆ ಪರಮೋದಾರರಾದವರು. ಗಾನಕ್ಕೆ ಹೊಂದಿಕೊಂಡು ಇರುವಂತಹ ಈ ಪಾಶುರಗಳನ್ನು ಬಲ್ಲವರು ಲೋಕ ದಲ್ಲಿ ನಿರವಧಿಕವಾದ ಆನಂದವನ್ನು ಹೊಂದುವರಲ್ಲದೆ ಅನಂತರ ನಿರವಧಿಕ ಪ್ರೀತಿಯುಕ್ತರಾದ ನಿತ್ಯಸೂರಿಗಳೊಡನೆ ಸೇರುವಂಥವರಾಗುತ್ತಾರೆ.

---

### ನಾಲ್ಕನೆಯ ಪತ್ತು—ನೂರನೆಯ ತಿರುಮೊಳಿ

## 'ಪೇರಣಿನ್ದು'

### ಪ್ರವೇಶ

ಜ್ಞಾನಾನಂದ ಸ್ವರೂಪನೂ, ನಿರತಿಶಯಭೋಗ್ಯನೂ, ಸರ್ವದಾ ಸೂರಿ ಸೇವ್ಯನೂ ಆದ ಆ ಸರ್ವೇಶ್ವರ ತನ್ನನ್ನು ಆಶ್ರಯಿಸುವವರಿಗೆ ಪುರುಷಕಾರ ಭೂತಳಾದ ಶ್ರೀದೇವಿಯೊಡನೆ ಬಂದು ನಿತ್ಯವಾಸಮಾಡುತ್ತಿರುವ 'ಶೆಮ್ ಪೊನ್ ಶೆಯ್ ಕೋಯಿಲ್' ಕ್ಷೇತ್ರಕ್ಕೆ ಬಂದು ಆಳ್ವಾರ್ ಅವರು ಅವನನ್ನು ಕಂಡು ಅನುಭವಿಸಿದ ಆನಂದವನ್ನು ಎಲ್ಲರೂ ಅನುಭವಿಸಲೆಂದು ಅವನ ಮಹಿಮೆಯನ್ನು ಕೊಂಡಾಡುತ್ತಿದ್ದಾರೆ.

ಪೇರಣಿನ್ದು ಉಲಹತ್ತವರ್ ತೊಟುದೇತ್ತುವತ್
ಪೇರರುಳಾಳನ್ ಎಂಬಿರಾನ್ಕೈ
ವಾರಣಿಮುಲೈಯೊಳ್ ಮಲರ್‌ಮಹಳೊಡು ಮಣ್‌ಮಹಳುಂ
ಉಡನ್‌ನಿರ್ಪ
ಶೀರಣಿಮಾಡಂ ನಾಂಗೈ ನನ್ನಡುವುಳ್ ಶೆಮ್ಪೊನ್ ಶೆಯ್
ಕೋಯಿಲಿನುಳ್ಳೇ
ಕಾರಣಿಮೇಹಂ ನಿನ್ರತೊಪ್ಪಾನ್ಕೈ ಕಂಡುಕೊಂಡು
ಉಯ್‌ನ್ದೊಟಿನ್ದೇನೇ ॥೧॥

(ಉಲಹತ್ತವರ್) ಈ ಲೋಕದಲ್ಲಿರುವವರೆಲ್ಲರೂ (ಪೇರ್ ಅಣಿನ್ದು ತೊಟುದು) ಶ್ರೀನಾಮ ಸಂಕೀರ್ತನ ಮಾಡಿಕೊಂಡು ಪಾದಗಳಿಗೆ ನಮಿಸಿ (ಏತ್ತುಂ ಪೇರ ರುಳಾಳನ್) ಸ್ತೋತ್ರಮಾಡುವ ಕೃಪಾಸಾಗರನಾದ ಪೇರರುಳಪ್ಪೆರುಮಾಳ್ ಆಗಿ (ಎಮ್‌ಪಿರಾನ್ಕೈ) ನಮಗೆ ಸ್ವಾಮಿಯಾಗಿ (ಕಾರ್ ಅಣಿ ಮೇಹಂನಿನ್ರದು ಒಪ್ಪಾನ್ಕೈ) ವರ್ಷಾಕಾಲದ ಸುಂದರವಾದ ಕಾಳಮೇಘ ನಿಂತ ಹಾಗೆ ನಿಂತಿರು ವವನೂ ಆದ ಸ್ವಾಮಿಯನ್ನು (ಶೀರ್ ಅಣಿ ಮಾಡಂ ನಾಂಗೈನಲ್‌ನಡುವುಳ್) ಸುಂದರವಾದ ಮಾಳಿಗೆಗಳನ್ನುಳ್ಳ ತಿರುನಾಂಗೂರಿನಲ್ಲಿ ನಟ್ಟನಡುವೆ (ಶೆಮ್ಪೊನ್ ಶೆಯ್ ಕೋಯಿಲಿನ್ ಉಳ್ಳೇ) ಶೆಮ್ಪೊನ್‌ಶೆಯ್ ಕೋಯಿಲ್ ಎಂಬುವ ದಿವ್ಯ ಕ್ಷೇತ್ರದಲ್ಲಿ (ವಾರ್ ಅಣಿಮುಲೈಯಾಳ್ ಮಲರ್ ಮಹಳೊಡು) ಕಂಚುಕ ಧಾರಿಣಿಯಾದ ಲಕ್ಷ್ಮೀದೇವಿಯೂ (ಮಣಮಹಳುಂ) ಭೂದೇವಿಯೂ (ಉಡನ್‌ನಿರ್ಪ) ಕೂಡಿ ಇರುತ್ತಿರಲು (ಕಂಡುಕೊಂಡು ಉಯ್‌ನ್ದೊಟಿನ್ದೇನ್) ನಾನು ಸೇವಿಸಿ ಉಜ್ಜೀವನ ಹೊಂದಿದೆನು.

ಪರಮ ರಹಸ್ಯವನ್ನು ತಾವು ಕಂಡುಕೊಂಡು ಉಜ್ಜೀವಿಸುವಂತೆ ಆದುದನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ ಆಳ್ವಾರ್ ಅವರು. ತಮ್ಮ ಕೃತಕೃತ್ಯತೆಯನ್ನೂ ಹೇಳಿಕೊಂಡಿದ್ದಾರೆ. ಲೋಕದಲ್ಲಿರುವವರೆಲ್ಲರೂ ಬಂದು ಅವನ ಪಾದಗಳ ಮೇಲೆಬಿದ್ದು ಅವನ ಶ್ರೀನಾಮಗಳನ್ನು ಹೇಳಿ, ಸ್ತೋತ್ರ ಮಾಡಿ ಆಶ್ರಯಿಸುವಂತಾಗಲೆಂದು ಸ್ವಾಮಿ ಇಲ್ಲಿ ನಿತ್ಯಸಾನ್ನಿಧ್ಯವನ್ನು ನೀಡಿ ದ್ದಾನೆ. ಅಂಥವರಿಗೆ ಅಪಾರವಾದ ಅನುಗ್ರಹಮಾಡಿ ಉಪಕಾರಕನಾಗುವ ನವನು. ಸರ್ವೇಶ್ವರನ ಮನಸ್ಸನ್ನು ಯಾವಾಗಲೂ ತನ್ನೆಡೆಗೆ ಆಕರ್ಷಿಸು

ಮಂಕಹ ನಿತ್ಯ ಯೌವ್ವನವನ್ನುಳ್ಳವಳೂ 'ನಕಶ್ಚಿನ್ನಾಪರಾಧ್ಯತಿ' ಎಂದು ಆಶ್ರಿತರ ದೋಷಗಳನ್ನು ಕ್ಷಮಿಸಲು ಮಾಡಿಸುವವಳೂ ಆದ ಶ್ರೀದೇವಿಯು ನ್ನೊಂದು ಪಕ್ಕದಲ್ಲಿಯೂ, ಅದನ್ನೇ ಅನುಮೋದಿಸಿ ಆಶ್ರಿತರ ದೋಷ ಗಳನ್ನು ಅವನು ಎಣಿಸದಂತೆ ಮಾಡುವ ಭೂದೇವಿಯನ್ನು ಮತ್ತೊಂದು ಪಕ್ಕ ದಲ್ಲಿಯೂ ಹೊಂದಿರುವ ಸರ್ವೇಶ್ವರ ಬಂದು ನೆಲಸಿರುವ ದಿವ್ಯಕ್ಷೇತ್ರ ಇದು. ಮಳೆಗಾಲದಲ್ಲಿ ಮರ್ಹೋನ್ಮುಖವಾಗಿ ಶ್ರಮಹರವಾದ ನೀಲಮೇಘದಂತೆ ಇರುವ ಸ್ವಾಮಿಯನ್ನು ಕಣ್ಣಿಂದ ಕಂಡು ಆನಂದಿಸುವ ಭಾಗ್ಯವನ್ನು ಪಡೆದ ನಾನು ಧನ್ಯನಾದೆ. 'ಸಂತಮೇನಂ ತತೋವಿದುರಿತಿ' ಎಂಬಂತೆ ಅವನ ನಿರಂತರವಾದ ಸ್ಮರಣ ಹಾಗೂ ದರ್ಶನದಿಂದ ಕೃತಾರ್ಥನಾದೆ ಎನ್ನುತ್ತಾರೆ ಆಳ್ವಾರ್ ಅವರು.

**ಪಿರಪ್ಪೊಡು ಮೂಪ್ಪೊನ್ರಿಲ್ಲವನ್ ತನ್ನೈ ಪೇದಿಯಾ**
**ಇನ್ಬವೆಳ್ಳತ್ತೈ**
**ಇರಪ್ಪು ಎದಿರ್‌ಕಾಲಮ್ ಕಟಿುವುಮ್ ಆನಾನ್ನೈ**
**ಏಟುಶೈಯಿನ್‌ಶುವೈತನ್ನೈ**
**ಶಿರಪ್ಪುಡೈಮರೈಯೋರ್ ನಾಂಗೈ ನನ್ನಡುವುಳ್**
**ಶೆಮ್‌ಪೊನ್ ಶೆಯ್ ಕೋಯಿಲಿನುಳ್ಳೇ**
**ಮರೈ ಪೆರುಂಪೊರುಳೈ ವಾನವರ್‌ಕೋನ್ನೈ**
**ಕಂಡನಾನ್ ವಾಟ್‌ನ್ದೊಟಿುನ್ದೇನೇ ॥೨॥**

(ಪಿರಪ್ಪೊಡು ಮೂಪ್ಪು ಒನ್ರು ಇಲ್ಲವನ್ ತನ್ನೈ) ಹುಟ್ಟು, ಮುದಿತನ ಮೊದಲಾದ ವಿಕಾರಗಳೊಂದೂ ಇಲ್ಲದವನಾಗಿ (ಪೇದಿಯಾ ಇಂಬಮ್ ವೆಳ್ಳತ್ತೈ) ಯಾವತ್ತೂ ವಿಕಾರಹೊಂದದ ಆನಂದದ ಸಾಗರವಾಗಿರುವವನೂ, (ಇರಪ್ಪು ಎದಿರ್‌ಕಾಲಮ್ ಕಟಿುವುಮ್ ಆನಾನ್ನೈ) ವರ್ತಮಾನ, ಭವಿಷ್ಯತ್ ಮತ್ತು ಭೂತ ಕಾಲವೆಂಬ ಮೂರು ಕಾಲಗಳಲ್ಲಿಯೂ ಇರುವವನೂ, (ಏಟ್‌ಇಶೈಯಿನ್ ಶುವೈ ತನ್ನೈ) ಸಪ್ತಸ್ವರಗಳ ರಸದಂತೆ ಭೋಗ್ಯನಾದವನೂ, (ಮರೈ ಪೆರುಂ ಪೊರುಳೈ) ವೇದಗಳ ಪರಮ ತಾತ್ಪರ್ಯನಾದವನೂ, (ವಾನವರ್ ಕೋನ್ನೈ) ನಿತ್ಯಸೂರಿನಾಥನೂ ಆದ ನಮ್ಮ ಸ್ವಾಮಿಯನ್ನು (ಶಿರಪ್ಪು ಉಡೈಮರೈ ಯೋರ್) ಶ್ರೇಷ್ಠತೆ ಹೊಂದಿದ ವೈದಿಕರುಗಳು ಬಾಳುತ್ತಿರುವ (ನಾಂಗೈ ನಲ್ ನಡುವುಳ್) ತಿರುನಾಂಗೂರಿನಲ್ಲಿ ನಟ್ಟನಡುವೆ (ಶೆಮ್ಪೊನ್ ಶೆಯ್ ಕೋಯಿಲಿನ್

ಉಳ್ಳೀ ಕಂಡು ನಾನ್ ವಾಟ್ನ್ದೊಟ್ನ್ದೇನ್) ಶೆಂಪೊನ್ ಶೆಯ್ ಕೋಯಿಲ್ ಎಂಬುವ ದಿವ್ಯಕ್ಷೇತ್ರದಲ್ಲಿ ಕಣ್ಣಾರ ಕಂಡು ಬದುಕಿಹೋದೆನು.

ಹಿಂದಿನ ಪಾಶುರದಲ್ಲಿ ದಿವ್ಯಮಂಗಳ ವಿಗ್ರಹದ ಅನುಭವವನ್ನು ವರ್ಣಿಸಿದೆ. ಈ ಪಾಶುರದಲ್ಲಿ ದಿವ್ಯಾತ್ಮಸ್ವರೂಪದ ವೈಲಕ್ಷಣ್ಯವನ್ನು ಅನುಭವಿಸಿ ಹೃಷ್ಟರಾಗಿದ್ದಾರೆ. ಜನ್ಮ, ಜರೆ ಮೊದಲಾದವುಗಳಿಗೆ ಕಾರಣವೇ ಇಲ್ಲದವನಾದ ಕಾರಣ ಅವುಗಳೊಂದೂ ಇಲ್ಲದವನು ಇವನು. ಜನ್ಮಾದಿಗಳೊಂದೂ ಇಲ್ಲವೆಂದು ಹೇಳಿದುದರಿಂದ ಒಂದು ಬ್ರಹ್ಮಕಲ್ಪದವರೆಗೆ ಇವುಗಳಿಲ್ಲದೆ ಇದ್ದು ಕೊನೆಗೆ ಮುಡಿದುಹೋಗುವ ಬ್ರಹ್ಮಾದಿ ದೇವತೆಗಳನ್ನು ವ್ಯಾವರ್ತಿಸಿದೆ. ಯಾವ ಭೇದವೂ ಇಲ್ಲದೆ ಏಕರೂಪವಾಗಿರುವ ಆನಂದ ಸ್ವರೂಪವನ್ನುಳ್ಳವನು ಇವನು. ಜೀವಾತ್ಮನ ಸ್ವರೂಪವೂ ಸಹ ನಿತ್ಯವಾಗಿದ್ದರೂ, ಅವನ ಧರ್ಮಭೂತಜ್ಞಾನವೂ ನಿತ್ಯವಾಗಿರುತ್ತಿದ್ದರೂ ಸಹ ಆ ಧರ್ಮಭೂತಜ್ಞಾನಕ್ಕೆ ಸಂಸಾರದಶೆಯಲ್ಲಿ ಸಂಕೋಚ ವಿಕಾಸಗಳುಂಟಾಗುವುವಷ್ಟೇ ? ಅವನ ಜ್ಞಾನಕ್ಕೆ ಉದಯಾಸ್ತಮಯಗಳುಂಟು. ಅವನ ಸ್ವರೂಪ ನಿತ್ಯವಾದರೂ ಕರ್ಮನಿಬಂಧನವಾಗಿ ಉಂಟಾಗುವ ಅಚಿತ್ಸಂಸರ್ಗ ವಿಯೋಗದ ಕಾರಣ 'ಹುಟ್ಟಿದನು, ಸತ್ತನು' ಎಂಬ ವ್ಯವಹಾರಕ್ಕೆ ಅವಕಾಶವಿದೆ. ಹಾಗೆ ಯಾವ ಕರ್ಮಾದಿಗಳೂ ಇಲ್ಲದ ಕಾರಣ ಯಾವತ್ತೂ ವಿಕಾರಕ್ಕೊಳಗಾಗದೆ ಏಕರೂಪವಾದ ಸ್ವರೂಪವನ್ನು ಇವನು ಹೊಂದಿರುವವನಾಗಿದ್ದಾನೆ. 'ಆನಂದ ಮಯಃ' ಎಂದು ಶ್ರುತಿ ಇವನ ಆನಂದದ ಪ್ರಾಚುರ್ಯವನ್ನು ಎತ್ತಿ ಹೇಳುತ್ತದೆ. ನಿರತಿಶಯ ಭೋಗ್ಯಭೂತನಿವನು. ಸಪ್ತಸ್ವರಗಳಲ್ಲುಂಟಾದ ರಸವಸ್ತುವೇ ಒಂದು ರೂಪ ಹೊಂದಿದಂತೆ ಇರುವವನಿವನು. 'ಸರ್ವೇವೇದಾ ಯತ್ಪದಮಾಮನಂತಿ', 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಎಂದು ಹೇಳಿದಂತೆ ಸ್ವೇತರ ಸಮಸ್ತ ವಸ್ತುಗಳನ್ನೂ ತನಗೆ ಪ್ರಕಾರವನ್ನಾಗಿ ಉಳ್ಳವನಾದ ಈ ಪರಮಾತ್ಮನು ವೇದಕ್ಕೆ ಪ್ರಧಾನತಯಾ ವಾಚ್ಯಭೂತನಾಗಿದ್ದಾನೆ. ಯಾವನು ವೇದೈಕಸಮಧಿಗಮ್ಯನೆಂದು ಕೇಳಿದ್ದೆವೋ ಅವನನ್ನು ಈ ಕ್ಷೇತ್ರದಲ್ಲಿ ಕಣ್ಣಿಂದ ನೋಡಲೂ ಶಕ್ಯವಾಯಿತು. ಇನ್ನು ಬದುಕುವುದಕ್ಕೆ ಮತ್ತೊಂದು ದೇಶವನ್ನು ಹುಡುಕಿಕೊಂಡು ಹೋಗಬೇಕಾಗಿಲ್ಲ. ಇಲ್ಲೇ ಕೃತಾರ್ಥರಾದೆವು ಎಂದು ಅನುಭವಿಸಿ ಆನಂದಿಸಿದ್ದಾರೆ.

ತಿಡವಿಶುಂಬು ಎರಿನೀರ್ ತಿಂಗಳುಂ ಶುಡರುಂ
ಶೆಱುನಿಲತ್ತು ಉಯಿರ್‌ಹಳುಂ ಮತ್ತುಂ
ಪಡರ್ ಪೊರುಳ್‌ಹಳುಂ ಆಯ್ ನಿನ್ರವನ್‌ತನ್ನೈ
ಪಂಗಯತ್ತು ಅಯನ್ ಅವನ್ ಅನ್ನೈಯ
ತಿಡಮೂಱಿ ಮಱೈಯೋರ್ ನಾಂಗೈನನ್ನಡುವುಳ್
ಶೆಮ್ಪೊನ್‌ಶೆಯ್ ಕೋಯಿಲಿನುಳ್ಳೇ
ಕಡಲ್ ನಿರವಣ್ಣನ್ ತನ್ನೈನಾನಡಿಯೇನ್
ಕಂಡುಕೊಂಡುಯ್‌ನ್ದು ಒಱಿನ್ದೇನೇ ॥೩॥

(ತಿಡ ವಿಶುಂಬು ಎರಿನೀರ್ ತಿಂಗಳುಂ ಶುಡರುಂ) ದೃಢವಾದ ಆಕಾಶ, ಅಗ್ನಿ, ಜಲ, ಮೊದಲಾದ ಪಂಚಭೂತಗಳೂ ಚಂದ್ರನೂ ಸೂರ್ಯನೂ, (ಶೆಱುನಿಲತ್ತು ಉಯಿರ್‌ಹಳುಂ) ವಿಶಾಲವಾದ ಭೂಮಿಯಲ್ಲಿರುವ ಜನುಮ್ಯರುಗಳೂ, (ಮತ್ತುಂ ಪಡರ್ ಪೊರುಳ್‌ಹಳುಂ) ಮತ್ತಿತರ ಅನೇಕ ಬಗೆಯ ಪದಾರ್ಥಗಳೂ ಆದ ಇವುಗಳಿಗೆ (ಆಯ್ ನಿನ್ರವನ್ ತನ್ನೈ) ಅಂತರ್ಯಾಮಿಯಾಗಿರುವವನೂ, (ಕಡಲ್‌ನಿರುವಣ್ಣಂ ತನ್ನೈ) ಸಾಗರದ ವರ್ಣವನ್ನು ಹೋಲುವ ದಿವ್ಯಮಂಗಳ ವಿಗ್ರಹವನ್ನುಳ್ಳವನೂ ಆದ ಪರಮಾತ್ಮನನ್ನು-(ಪಂಗಯತ್ತು ಅಯನ್ ಅವನ್ ಅನ್ನೈಯ) ಕಮಲದಲ್ಲಿ ಜನಿಸಿದ ಬ್ರಹ್ಮದೇವನನ್ನು ಹೋಲುವವರಾಗಿ (ತಿಡಂ ಮೊಱಿಮಱೈಯೋರ್) ದೃಢವಾದ ವಾಕ್ಕನ್ನುಳ್ಳ ಬ್ರಾಹ್ಮಣರುಗಳು ಬಾಳು ತ್ತಿರುವ (ನಾಂಗೈ ನನ್ನಡುವುಳ್ ಶೆಮ್ಪೊನ್‌ಶೆಯ್ ಕೋಯಿಲಿನ್ ಉಳ್ಳೇ) ತಿರುನಾಂಗೂರಿನ ನಟ್ಟನಡುವೆ ಶೆಮ್ಪೊನ್‌ಶೆಯ್ ಕೋಯಿಲ್ ಎಂಬುವ ದಿವ್ಯಕ್ಷೇತ್ರದಲ್ಲಿ (ಅಡಿಯೇನ್ ನಾನ್ ಕಂಡುಕೊಂಡು ಉಯ್‌ನ್ದು ಒಱಿನ್ದೇನೇ) ದಾಸನಾದ ನಾನು ಕಣ್ಣಾರೆಕಂಡು ಉಜ್ಜೀವನ ಹೊಂದಿಬಿಟ್ಟೆನು.

ಹಿಂದಿನ ಪಾಶುರದಲ್ಲಿ ಭಗವಂತನ ದಿವ್ಯಾತ್ಮಸ್ವರೂಪವನ್ನು ಅನು ಸಂಧಾನ ಮಾಡಿದರು. ಈ ಪಾಶುರದಲ್ಲಿ ಭಗವಂತನ ಸರ್ವಾಂತರ್ಯಾಮಿತ್ವ ವನ್ನು ಅನುಸಂಧಾನಮಾಡಿ ಆನಂದಿಸಿದ್ದಾರೆ. ಆಕಾಶವೆಂಬ ತತ್ತ್ವ ಇಲ್ಲವೆಂದು ಲೋಕಾಯತಿಕರು ಹೇಳುತ್ತಾರೆ. ಅದನ್ನಿಲ್ಲಿ ನಿರಸನ ಮಾಡಲು ಮೊದಲು ಆಕಾಶತತ್ತ್ವದ ಉಲ್ಲೇಖ ಮಾಡಿದ್ದಾರೆ. 'ಆಕಾಶಾದ್ವಾಯುಃ' ಎಂಬುವ ಕ್ರಮದಲ್ಲಿ ಇನ್ನಿತರ ತತ್ತ್ವಗಳೆಲ್ಲ ಆಕಾಶದಿಂದಾಗುವುವಷ್ಟೇ ? ಉಳಿದ

ತತ್ತ್ವಗಳು ತಮ್ಮ ತಮ್ಮ ಮೂಲಕಾರಣದಲ್ಲಿ ಲಯವಾದಾಗ ಅವೆಲ್ಲಾ ಆಕಾಶದಲ್ಲಿ ಲೀನವಾಗುತ್ತವೆ. ಸ್ವಲ್ಪಕಾಲವಿದ್ದು ಆಕಾಶ ಕೊನೆಗೆ ಪರಮಾತ್ಮ ನೊಡನೆ ಒಂದಾಗುವುದು. ಆದುದರಿಂದ 'ದೃಢವಾದ ಆಕಾಶ' ಎಂದಿದ್ದಾರೆ ಇಲ್ಲಿ. ಚಂದ್ರ, ಸೂರ್ಯ ಎಂದು ಹೇಳಿರುವುದು ಕಾರ್ಯವರ್ಗಕ್ಕೆಲ್ಲಾ ಉಪಲಕ್ಷಣವಾಗಿದೆ. ಇವರೊಡನೆ ಮನುಷ್ಯರು, ದೇವ, ತಿರ್ಯಕ್, ಸ್ಥಾವರ ಮೊದಲಾದವೆಲ್ಲಾ ಸೇರುತ್ತವೆ. 'ತತ್ಸೃಷ್ಟ್ವಾ, ತದೇವಾನು ಪ್ರಾವಿಶತ್' ಎಂದು ಹೇಳಿದಂತೆ ಇವುಗಳನ್ನು ಸೃಜಿಸಿ ಇವುಗಳೊಳಗೆ ಅನುಪ್ರವೇಶಮಾಡಿ ಪರಮಾತ್ಮನು ನಾಮರೂಪವ್ಯಾಕರಣವನ್ನು ಮಾಡಿದನಷ್ಟೇ ? 'ಬಹುಸ್ಯಾಂ' ಎಂಬುದಕ್ಕನುಸಾರವಾಗಿ ಅವನೇ ಇದೆಲ್ಲವೂ ಆಗಿರುವಂತೆ ಇದ್ದಾನೆ. ಅವನೇ ಸ್ಥೂಲರೂಪದಲ್ಲಿರುವ ಚೇತನಾಚೇತನ ವಿಶಿಷ್ಟನಾಗಿರುತ್ತಿದ್ದಾನೆ. ಆ ಭಗವಂತನ ದಿವ್ಯಮಂಗಳ ರೂಪವನ್ನು ಸಂದರ್ಶಿಸಿದ ಕ್ಷಣವೇ ತಾಪತ್ರಯಂಗಳೆಲ್ಲ ತೀರಿಹೋಗುವಂತೆ ಶ್ರಮಹರವಾದ ರೂಪಹೊಂದಿರುವನು ಅವನು. ಅವನನ್ನು ಸಂದರ್ಶಿಸಿ ನಾನು ಉಜ್ಜೀವಿಸುವಂತಾಯಿತು! ಎನ್ನುತ್ತಾರೆ ಆಳ್ವಾರ್ ಅವರು.

**ವಳೈ ಅರುಕುರುಳಾಯ್ ಮಾವಲಿವೇಳ್ವಿಯಿಲ್**
**ಮಣ್ ಅಳವಿಟ್ಟವನ್‌ತನ್ನೈ**
**ಅಳೈವರುಂ ಅಮರರ್ ಅಡಿಇಣೈ ವಣಂಗ**
**ಅಲೈಕಡಲ್ ತುಯಿನ್ರ ಅಮ್ಮಾನೈ**
**ದಿಳೈಮುಹನ್ ಅನ್ನೈಯೋರ್ ನಾಂಗೈನನ್ನಡುವುಳ್**
**ಶೆಮ್ಪೊನ್‌ಶೆಯ್ ಕೋಯಿಲಿನುಳ್ಳೇ**
**ಉಯರ್ ಮಣಿಮಕುಟಮ್ ಶೂಡಿನಿನ್ರಾನೈ**
**ಕಂಡುಕೊಂಡು ಉಯ್‌ನ್ದೊಳಿನ್ದೇನೇ ॥೪॥**

(ವಳೈ ಅರುಕುರುಳಾಯ್) ದೋಷರಹಿತವಾದ ವಾಮನರೂಪಿಯಾಗಿ (ಮಾವಲಿ ವೇಳ್ವಿಯಿಲ್) ಮಹಾಬಲಿಯ ಯಾಗಭೂಮಿಯಲ್ಲಿ (ಮಣ್ ಅಳ ವಿಟ್ಟವನ್ ತನ್ನೈ) ಲೋಕವನ್ನು ಅಳೆದವನೂ, (ಅಳೈವು ಅರುಂ ಅಮರರ್) ಅಶಕ್ತ್ಯಾದಿ ದೋಷಗಳಿಲ್ಲದ ನಿತ್ಯಸೂರಿಗಳು (ಅಡಿಇಣೈ ವಣಂಗ) ಎರಡು ಪಾದಗಳನ್ನೂ ಆಶ್ರಯಿಸುವುದಕ್ಕಾಗುವಂತೆ (ಅಲೈಕಡಲ್ ತುಯಿನ್ರ ಅಮ್ಮಾನೈ) ಅಲೆಗಳೇಳುತ್ತಿರುವ ಕ್ಷೀರ ಸಮುದ್ರದಲ್ಲಿ ಶಯನಿಸಿರುವವನೂ

(ಉಯರ್ ಮಣಿಮಕುಟಮ್ ಶೂಡಿನಿನ್ರಾನ್ನೈ) ಉನ್ನತವಾದ ರತ್ನಕಿರೀಟವನ್ನು ಧರಿಸಿಕೊಂಡಿರುವವನೂ ಆದ ಪರಮಾತ್ಮನನ್ನು (ದಿಶೈಮುಹನ್ ಅನ್ನೈಯೋರ್) ಬ್ರಹ್ಮದೇವನನ್ನು ಹೋಲುವ ಬ್ರಾಹ್ಮಣರುಗಳು ಬಾಳುತ್ತಿರುವ (ನಾಂಗೈ ನನ್ನಡುವುಳ್ ಶೆಮ್ಬೊನ್‌ಶೆಯ್ ಕೋಯಿಲಿನುಳ್ಳೇ ಕಂಡುಕೊಂಡು ಉಯ್‌ನ್ದೊ ಬಿನ್ದೇನ್) ತಿರುನಾಂಗೂರಿನ ನಡುಮಧ್ಯದಲ್ಲಿ 'ಶೆಮ್ಬೊನ್ ಶೆಯ್‌ಕೋಯಿಲ್' ಎಂಬ ಕ್ಷೇತ್ರದಲ್ಲಿ ಕಣ್ಣಾರ ಕಂಡು ನಾನು ಉಜ್ಜೀವಿಸಿದೆ.

ಈ ಪಾಶುರದಲ್ಲಿ ವಿಭವಾವತಾರವನ್ನೂ ಅದಕ್ಕೆ ಮೂಲವಾದ ವ್ಯೂಹವನ್ನೂ ಅನುಸಂಧಾನ ಮಾಡಿದ್ದಾರೆ. ವಾಮನ ವೇಷವನ್ನು ಪರಿಗ್ರಹಿಸಿದಾಗ, ಅದಕ್ಕೆ ವಿರೋಧಿಯಾದ ಶ್ರಿಯಃ ಪತಿತ್ವಾದಿ ಚಿಹ್ನೆಗಳಿಂದ 'ಈಶ್ವರನೇನೋ ಇವನು ?' ಎಂದು ಸಂದೇಹ ಪಡದಂತೆ ಇದ್ದನಂತೆ ಅವನು. ಅಂಥ ಒಂದು ಕೊರೆಯನ್ನೂ ಹೇಳುವುದಕ್ಕಾಗದೆ ಇದ್ದನವನು. ಕ್ಷೀರಸಾಗರದಲ್ಲಿ ಶಯನಿಸಿರುವ ಪ್ರಭುವನ್ನು ಬ್ರಹ್ಮಾದಿಗಳು ಬಂದು ರಕ್ಷಣೆಗಾಗಿ ಬೇಡುವಾಗ ಅದರ ದಡದಲ್ಲಿಯೇ ನಿಂತು ಸ್ತುತಿಸಬಹುದೇ ವಿನಾ ಅವನನ್ನು ಸಮೀಪಿಸಿ ಸೇವೆಸಲ್ಲಿಸಲಾರರು. ಆದರೆ ಅಸ್ಪೃಷ್ಟ ದೋಷಗಂಧರಾದ ನಿತ್ಯಸೂರಿಗಳು ಬಂದು ಪಾದಸೇವೆಯನ್ನು ಸಲ್ಲಿಸುವುದಕ್ಕಾಗುವಂತೆ ಕ್ಷೀರಸಾಗರದಲ್ಲಿ ಅವನು ಪವಡಿಸಿದ್ದಾನಂತೆ. ಆ ಕ್ಷೇತ್ರದಲ್ಲಿರುವ ಬ್ರಾಹ್ಮಣರು ಒಬ್ಬೊಬ್ಬರೂ ಬ್ರಹ್ಮದೇವನಂತೆ ಸೃಷ್ಟಿಕ್ಷಮರಾಗಿದ್ದಾರಂತೆ. ಪಶುಗಳನ್ನೂ ಗೋಪಾಲಕರನ್ನೂ ಕಟಾಕ್ಷಿಸಲು ಗೋವಿಂದ ಪಟ್ಟಾಭಿಷೇಕವನ್ನು ಮಾಡಿಕೊಂಡು ನಿಂತಹಾಗೆ ಸಂಸಾರಿಗಳ ರಕ್ಷಣಕ್ಕಾಗಿ ಸರ್ವೇಶ್ವರದ್ಯೋತಕವಾದ ಉನ್ನತವಾದ ಕಿರೀಟವನ್ನು ಸ್ವಾಮಿ ಧರಿಸಿ ನಿಂತಿದ್ದಾನೆ. ಲೋಕದವರನ್ನು ವಶಪಡಿಸಿಕೊಳ್ಳಲೂ ಮತ್ತು ಅವರಿಂದ ತಾನೂ ವಶೀಕೃತನಾಗಲೂ ಹೀಗೆ ನಿಂತಿರುವ ನಿಲುವನ್ನು ಕಂಡು ಆ ಹರ್ಷಪ್ರಕರ್ಷದಿಂದ ಧನ್ಯರಾಗಿದ್ದಾರೆ.

**ತೀಮನತ್ತು ಅರಕ್ಕರ್‌ತಿರಲ್ ಅೞಿತ್ತವನೇ**
**ಎನ್ರು ಶೆನ್ರಡೈನ್ದವರ್ ತಮಕ್ಕು**
**ತಾಯ್‌ಮನತ್ತು ಇರಂಗಿ ಅರುಳಿನೈಕೊಡುಕ್ಕುಂ**
**ತಯರತನ್ ಮದಲೈಯೈ ಶಯಮೇ**

ತೇನ್ ಮಲರ್ ಪೊಟಿಲ್ ಶೋಟಿ ನಾಂಗೈ ನನ್ನಡುವುಳ್
ಶೆವ್ವೊನ್ ಶೆಯ್ ಕೋಯಿಲಿನುಳ್ಳೇ
ಕಾಮನೈ ಪಯನ್ದಾನ್ ತನ್ನೈ ನಾನಡಿಯೇನ್
ಕಂಡುಕೊಂಡುಯ್ ನ್ದೊಟಿನ್ದೇನೇ ॥೫॥

(ತೀಮನತ್ತು ಅರಕ್ಕರ್) ದುಷ್ಟಮನಸ್ಸನ್ನುಳ್ಳ ರಾಕ್ಷಸರುಗಳ (ತಿರಲ್ ಅಟಿತ್ತವನೇ) ಕೊಬ್ಬನ್ನು ನಾಶಪಡಿಸಿದವನೇ (ಎನ್ರುಶೆನ್ರು ಅಡೈಂದವರ್ ತಮಕ್ಕು) ಎಂದು ಹೇಳಿಕೊಂಡು ಬಂದು ಆಶ್ರಯಿಸಿದವರ ವಿಷಯದಲ್ಲಿ (ತಾಯ್ ಮನತ್ತು ಇರಂಗಿ) ತಾಯಿಯಂತೆ ಮನಕರಗಿ ಕೃಪೆಯನ್ನು ಮಾಡುವ (ತಯರತನ್‌ಮಂದಲೈಯೈ) ದಶರಥಪುತ್ರನಾದವನೂ, (ಕಾಮನೈ ಪಯನ್ದಾನ್ ತನ್ನೈ) ಪ್ರದ್ಯುಮ್ನನನ್ನು ಪುತ್ರನನ್ನಾಗಿ ಪಡೆದವನೂ ಆದ ಸ್ವಾಮಿಯನ್ನು– (ಶಯಮ್ ಮೇ) ಜಯ ಶಬ್ದಗಳು ಹೊಂದಿಕೊಂಡಿರುವಂಥದೂ, (ತೇನ್ ಮಲರ್ ಪೊಟಿಲ್ ಶೋಟಿ) ಮಕರಂದ ಭರಿತವಾದ ಪುಷ್ಪಗಳನ್ನುಳ್ಳ ತೋಟಗಳಿಂದ ಸುತ್ತುವರಿಯಲ್ಪಟ್ಟುದೂ ಆದ (ನಾಂಗೈ ನನ್ನಡುವುಳ್ ಶೆವ್ವೊನ್ ಶೆಯ್ ಕೋಯಿಲಿನ್ ಉಳ್ಳೇ ಅಡಿಯೇನ್ ನಾನ್ ಕಂಡುಕೊಂಡು ಉಯ್ ನ್ದು ಒಟಿನ್ದೇನ್) ತಿರುನಾಂಗೂರಿನ ನಡುಮಧ್ಯದಲ್ಲಿರುವ ಶೆವ್ವೊನ್ ಶೆಯ್ ಕೋಯಿಲ್ ಎಂಬ ದಿವ್ಯಕ್ಷೇತ್ರದಲ್ಲಿ ದಾಸನಾದ ನಾನು ಕಂಡುಕೊಂಡು ಉಜ್ಜೀವಿಸಿದೆ.

ವಿಭವಾವತಾರಗಳಲ್ಲಿ ಶ್ರೀರಾಮಕೃಷ್ಣಾವತಾರಗಳನ್ನು ಸ್ಮರಿಸಿ ಅನುಭವಿಸಿದ್ದಾರೆ ಈ ಪಾಶುರದಲ್ಲಿ. ದುಷ್ಟರಾಕ್ಷಸರನ್ನು ನಿರಸನಮಾಡಿದಂತೆ 'ನಮ್ಮ ಪ್ರತಿಬಂಧಕಗಳನ್ನೂ ಹೋಗಲಾಡಿಸಿ ಸಲಹಬೇಕು' ಎಂದು ಆಶ್ರಯಿಸುವವರ ಬಗೆಗೆ ತಾಯಿಯಂತೆ ಮನಕರಗಿ, 'ಮತ್ತೊಂದು ರಕ್ಷಣೆ ಇಲ್ಲದೆ ಹೋದವರಾಗಿ ನಮ್ಮಲ್ಲಿ ಆಶ್ರಯಿಸಿದ್ದಾರೆ, ಪಾಪ' ಎಂದು ಅನುಗ್ರಹಮಾಡುವನು ಆ ಸರ್ವೇಶ್ವರ. 'ಶಯಮೇ' ಎಂಬುವುದಕ್ಕೆ 'ಸ್ವಯಂ' ಎಂದೂ ಅರ್ಥವಾಗಿ ಅವನು ತಾನೇ ಬಂದು ರಕ್ಷಿಸುವನು ಎಂಬ ಭಾವ ತೋರುವುದು. 'ಜಯ' ಎಂಬ ಅರ್ಥವಾದಾಗ ಹೇಳಿದ 'ವಿಜಯ'ಗಳೆಲ್ಲಾ ಹೊಂದಿಕೊಳ್ಳುವಂತಹ ಶ್ರೀಕ್ಷೇತ್ರ ಎಂಬ ಅರ್ಥ ಬರುತ್ತದೆ. ಅಂದಿನಂತೆ ಇಂದೂ ಲೋಕವನ್ನೆಲ್ಲಾ ಜಯಿಸಲು ಉದ್ದೇಶಿಸಿ ಇಲ್ಲಿ ಇರುತ್ತಿದ್ದಾನೆ ಎಂಬ ಭಾವ. 'ಶಯ' ಎಂಬು

ವುದೇ 'ಚಯಂ' ಎಂಬ ಅರ್ಥವನ್ನು ಸೂಚಿಸುವುದಾದರೆ ಸಮೂಹವಾದ ಪುಷ್ಪತೋಟಗಳನ್ನುಳ್ಳ ಕ್ಷೇತ್ರ ಎಂಬ ಅರ್ಥವಾಗುತ್ತದೆ. ಇಂಥ ಸ್ವಾಮಿಯಂನ್ನು ಶೇಷಭೂತನಾದ ನಾನು ಕಣ್ಣಾರೆಕಂಡು ಧನ್ಯನಾದೆ ಎನ್ನುತ್ತಾರೆ.

**ಮಲ್ಲೈಮಾಮುನ್ನೀರ್ ಅದರ್‌ಪಡ**
**ಮಲೈಯಾಲ್ ಅಣೈಶೆಯ್‌ದು ಮಹಿಳ್‌ನ್ದವನ್ ತನ್ನೈ**
**ಕಲ್ಲಿನ್ ಮೀದು ಇಯನ್ರ ಕಡಿಮದಿಳ್**
**ಇಲಂಗೈ ಕಲಂಗ ಓರ್‌ವಾಳಿತೊಟ್ಟಾನೈ**
**ಶೆಲ್ವಮ್ ನಾಲ್‌ಮರೈಯೋರ್ ನಾಂಗೈ ನನ್ನಡುವುಳ್**
**ಶೆಮ್ಬೊನ್‌ಶೆಯ್ ಕೋಯಿಲಿನುಳ್ಳೇ**
**ಅಲ್ಲಿಮಾಮಲರಾಳ್ ತನ್ನೊಡುಮ್**
**ಅಡಿಯೇನ್ ಕಂಡುಕೊಂಡು ಅಲ್ಲಲ್‌ತೀರ್‌ನ್ದೇನೇ ॥೬॥**

(ಮಲ್ಲೈಮಾಮುನ್ನೀರ್) ಸಂಪದ್ಭರಿತವಾದ ಅಪಾರವಾದ ಸಾಗರವು (ಅದರ್‌ಪಡ) ದಾರಿಯಾಗಿ ಹೊಂದಿಕೊಳ್ಳುವಂತೆ (ಮಲೈಯಾಲ್ ಅಣೈಶೆಯ್‌ದು) ಬೆಟ್ಟಗಳಿಂದ ಸೇತುವೆಯನ್ನು ಕಟ್ಟಿ (ಮಹಿಳ್‌ನ್ದವನ್‌ತನ್ನೈ) ಸಂತೋಷ ಹೊಂದಿದವನೂ, (ಕಲ್ಲಿನ್‌ಮೀದು) ತ್ರಿಕೂಟಪರ್ವತದ ಮೇಲೆ (ಇಯನ್ರ) ಕಟ್ಟಲಾದ (ಕಡಿಮದಿಳ್ ಇಲಂಗೈ) ದುರ್ಭೇದ್ಯವಾದ ಕೋಟೆಯನ್ನುಳ್ಳ ಲಂಕಾಪುರಿಯು (ಕಲಂಗ) ಶಿಥಿಲವಾಗಿ ನಾಶವಾಗುವಂತೆ (ಓರ್ ವಾಳಿ ತೊಟ್ಟಾನೈ) ಒಂದು ಬಾಣವನ್ನು ಪ್ರಯೋಗಿಸಿದವನೂ ಆದ ಪರಮಾತ್ಮನನ್ನು (ಶೆಲ್‌ವಮ್ ನಾಲ್‌ಮರೈಯೋರ್) ಚತುರ್ವೇದಗಳನ್ನೇ ಸಂಪತ್ತನ್ನಾಗಿ ಉಳ್ಳ ಬ್ರಾಹ್ಮಣರು ನೆಲಸಿರುವ (ನಾಂಗೈನನ್ನಡುವುಳ್ ಶೆಮ್ಬೊನ್‌ಶೆಯ್ ಕೋಯಿಲಿನ್‌ಉಳ್ಳೇ) ತಿರುನಾಂಗೂರಿನಲ್ಲಿ ನಟ್ಟನಡುವೆ ಇರುವ ಶೆಮ್ಬೊನ್‌ಶೆಯ್ ಕೋಯಿಲ್ ಎಂಬ ದಿವ್ಯಕ್ಷೇತ್ರದಲ್ಲಿ (ಅಲ್ಲಿ ಮಾಮಲರಾಳ್ ತನ್ನೊಡುಂ) ಆಗ ತಾನೇ ಅರಳಿದ ಪುಷ್ಪದಲ್ಲಿ ಜನಿಸಿದ ಶ್ರೀದೇವಿಯೊಡನೆ (ಅಡಿಯೇನ್ ಕಂಡುಕೊಂಡು) ಶೇಷಭೂತನಾದ ನಾನು ಸೇವಿಸಿ (ಅಲ್ಲಲ್ ತೀರ್‌ನ್ದೇನ್) ದುಃಖಗಳನ್ನೆಲ್ಲಾ ಹೋಗಲಾಡಿಸಿಕೊಂಡೆನು.

ನಿರವಧಿಕವಾದ ಸಂಪತ್ತನ್ನು ಹೊಂದಿ ಎಲ್ಲೆಯೇ ಇಲ್ಲದಂತಿದ್ದ ಸಾಗರವೂ ಸುಗಮ ದಾರಿ ಆಗುವಹಾಗೆ ಪರ್ವತಗಳಿಂದ ಸೇತುವೆಯನ್ನು

ಕಟ್ಟಿ ಲೀಲಾರಸವನ್ನನುಭವಿಸಿ ಸ್ವಾಮಿ ಹೃಷ್ಟನಾದ. ಪರಮದುರ್ದರ್ಶನವೂ ಅಭೇದ್ಯವೂ ಆದ ಕೋಟೆಯುಳ್ಳ ಲಂಕೆಯನ್ನು ಕೈಗೆ ಸಿಕ್ಕಿದ ಬಾಣದಿಂದ ಧ್ವಂಸ ಮಾಡಿದ. ಇಂಥ ಸರ್ವೇಶ್ವರ ಇರುತ್ತಿರುವ ಕ್ಷೇತ್ರ ಇದು. ನಿರವಧಿಕ ಸಂಪತ್ತುಳ್ಳ ವಿಪ್ರರು ಅಲ್ಲಿ ನೆರದಿರುವಂತೆ. ಅವರುಗಳ ಐಶ್ವರ್ಯಕ್ಕೆ ಕಾರಣ ಭೂತೆಯಾದ ಶ್ರೀದೇವಿಯೊಡನೆ ಆ ಪರಮಾತ್ಮನನ್ನು ಕಾಣುವ ಭಾಗ್ಯ ಹೊಂದಿದ ನಾನು ಸಾಂಸಾರಿಕ ಸಕಲ ದುರಿತಗಳನ್ನೂ ಹೋಗಲಾಡಿಸಿಕೊಂಡೆ ಎನ್ನುತ್ತಾರೆ.

ವೆಮ್ ಶಿನಂ ಕಳಿರುಂ ವಿಲ್ಲೊಡು ಮಲ್ಲುಂ
ವೆಹುಂಡು ಇರುತ್ತು ಅಡೆರ್ತವನ್ ತನ್ನೈ
ಕಂಜನೈ ಕಾಯ್ ನ್ದ ಕಾಳೈ ಅಮ್ಮಾನೈ
ಕರುಮುಹಿಲ್ ತಿರುನಿರತ್ತವನ್ನೈ
ಶೆಂಶೊಲ್ ನಾಲ್ ಮರೈಯೋರ್ ನಾಂಗೈ ನನ್ನಡುವುಳ್
ಶೆಮ್ಪೊನ್ ಶೆಯ್ ಕೋಯಿಲಿನುಳ್ಳೇ
ಅಂಜನಕ್ಕುನ್ರಂ ನಿನ್ರದು ಒಪ್ಪಾನೈ
ಕಂಡುಕೊಂಡು ಅಲ್ಲಲ್ ತೀರ್ ನ್ದೇನೇ ॥೭॥

(ವೆಮ್ ಶಿನಂ) ತೀಕ್ಷ್ಣವಾದ ಕೋಪವನ್ನುಳ್ಳ (ಕಳಿರು ವೆಹುಂಡು) ಕುವಲಯಾ ಪೀಡವೆನ್ನುವ ಆನೆಯನ್ನು ಕನಲಿ ಮುಗಿಸಿಬಿಟ್ಟು, (ವಿಲ್ ಇರತ್ತು) ಕಂಸನು ಪೂಜಿಸುತ್ತಾ ಇಟ್ಟಿದ್ದ ಧನುಸ್ಸನ್ನು ಮುರಿದುಹಾಕಿ, (ಮಲ್ಲುಂ ಅಡರ್ತ್ತವನ್ ತನ್ನೈ) ಮಲ್ಲರುಗಳನ್ನೂ ಸಂಹರಿಸಿದವನಾಗಿ, (ಕಂಜನೈಕಾಯ್ ನ್ದ ಕಾಳೈ) ಕೋಪದಿಂದ ಕಂಸನನ್ನೂ ಮುಗಿಸಿದ ಯುವಕನಾದವನೂ (ಅಮ್ಮಾನೈ) ನಮಗೆ ಸ್ವಾಮಿಯಾದವನೂ, (ಕರುಮುಹಿಲ್ ತಿರುನಿರತ್ತವನ್ನೈ) ಕಾಳಮೇಘದಂತೆ ನೀಲವರ್ಣನಾದವನೂ, (ಅಂಜನಕ್ಕುನ್ರಂ ನಿನ್ರದು ಒಪ್ಪಾನೈ) ಅಂಜನಗಿರಿಯು ನಿಂತಿದೆಯೋ ಎಂಬಂತೆ ಹೊಳೆಯುತ್ತಿರುವವನೂ ಆದ ಸ್ವಾಮಿಯನ್ನು (ಶೆಮ್ ಶೊಲ್ ನಾಲ್ ಮರೈಯೋರ್) ಸುಂದರವಾದ ವಚನಗಳನ್ನಾಡುವ ಚತುರ್ವೇದಾ ಧ್ಯಾಯಿಗಳು ಬಾಳುತ್ತಿರುವ (ನಾಂಗೈ ನನ್ನಡುವುಳ್ ಶೆಮ್ಪೊನ್ ಶೆಯ್ ಕೋಯಿಲಿನುಳ್ಳೇ ಕಂಡುಕೊಂಡು) ತಿರುನಾಂಗೂರಿನಲ್ಲಿ ನಟ್ಟನಡುವೆ ಇರುವ

ಶೆವ್ವೊನ್ ಶೆಯ್‌ಕೋಯಿಲ್ ಕ್ಷೇತ್ರದಲ್ಲಿ ಕಣ್ಣಾರೆ ಕಂಡು (ಅಲ್ಲಲ್‌ತೀರ್ನ್ದೇನೇ) ದುಃಖಗಳನ್ನೆಲ್ಲಾ ನಾನು ತೊಲಗಿಸಿ ಕೊಂಡೆನು.

ಕೃಷ್ಣಾವತಾರದಲ್ಲಿ ಭಗವಂತನು ವಿನಾಡಿದ ಲೀಲಾಚೇಷ್ಟಿತಗಳ ಪರಂಪರೆಯಲ್ಲಿ ಮನಸೋತವರಾಗಿ ಅದನ್ನೇ ಬಾಯಾರ ಕೊಂಡಾಡುತ್ತಾರೆ. ಇನ್ನೂ ಪ್ರಾಯವು ತುಂಬಿಬರುವುದಕ್ಕೆ ಮೊದಲೇ ಈ ಚೇಷ್ಟಿತಗಳನ್ನವನು ಮಾಡಿದುದು. 'ಆಶ್ರಿತ ವಿರೋಧಿಯನ್ನು ನಾಶಪಮಾಡಿದ್ದಾಯಿತು'—ಎಂಬುವ ಮನಸ್ಸಮಾಧಾನದಿಂದ ಸ್ವಾಮಿ ಶ್ರಮಹರವಾದ ರೂಪದೊಡನೆ ಬಂದು ನಿಂತಿದ್ದಾನೆ. ಅಲ್ಲಿರುವ ವಿಪ್ರೋತ್ತಮರು ಯಥಾರ್ಥದರ್ಶಿಗಳೂ ಭೂತಹಿತವನ್ನೇ ಆಡುವವರೂ ಆಗಿದ್ದಾರಂತೆ. ತನ್ನನ್ನು ಬೇಡುವವರಿಗೆಲ್ಲ ತಾನೇ ಉಪಾಯನಾಗಿ ಅಕಿಂಚನನಿಧಿಯಾಗಿರುವ ಸ್ವಾಮಿಯನ್ನು ಸಂದರ್ಶಿಸಿ ದುಃಖಗಳನ್ನೆಲ್ಲಾ ಹೋಗಲಾಡಿಸಿಕೊಂಡೆ ಎನ್ನುತ್ತಾರೆ.

ಅನ್ರಿಯ ವಾಣನ್ ಆಯಿರಂ ತೋಳುಂ ತುಣಿಯ
ಅನ್ರು ಆಟಿ ತೊಟ್ಟಾನೈ
ಮಿನ್ ತಿಹಟ್ ಕುಡುಮಿ ವೇಂಗಡಂಮಲೈಮೇಲ್
ಮೇವಿಯ ವೇದಂ ನಲ್‌ವಿಳಕ್ಕೈ
ತೆನ್‌ತಿಶೈ ತಿಲದಂ ಅನ್ನೈಯವರ್ ನಾಂಗೈ
ಶೆವ್ವೊನ್‌ಶೆಯ್ ಕೋಯಿಲಿನುಳ್ಳೇ
ಮನ್ರು ಅದು ಪೊಲಿಯಮಹಿಟ್ನ್ದ ನಿನ್ರಾನೈ
ವಣಂಗಿ ನಾನ್ ವಾಟ್ನ್ದ ಒಟಿನ್ದೇನೇ ॥೮॥

(ಅನ್ರಿಯ) ಕೋಪದಿಂದ ಎದುರಿಸಿಬಂದ (ವಾಣನ್ ಆಯಿರಂ ತೋಳುಂ ತುಣಿಯ) ಬಾಣಾಸುರನ ಸಹಸ್ರಭುಜಗಳನ್ನೂ ಕತ್ತರಿಸಿ ಹಾಕುವಂತೆ (ಅನ್ರು ಆಟಿ ತೊಟ್ಟಾನೈ) ಆ ಕಾಲದಲ್ಲಿ ಚಕ್ರಾಯುಧವನ್ನು ಪ್ರಯೋಗಿಸಿದವನೂ, (ಮಿನ್‌ತಿಹಟ್ ಕುಡುಮಿ ವೇಂಗಡಂ ಮಲೈಮೇಲ್) ಮಿಂಚುಗಳನ್ನೂ ತನ್ನ ಪ್ರಕಾಶದಿಂದ ಧಿಕ್ಕರಿಸುವ ಶಿಖರಗಳನ್ನುಳ್ಳ ತಿರುವೇಂಕಟಾದ್ರಿಯ ಮೇಲೆ (ಮೇವಿಯ) ನೆಲಸಿರುವವನೂ, (ವೇದಂ ನಲ್ ವಿಳಕ್ಕೈ) ವೇದಗಳಿಂದ ಕಾಣಬಹುದಾದ ಪರಂಜ್ಯೋತಿಯಾದವನೂ, (ತೆನ್‌ತಿಶೈ ತಿಲದಂ ಅನ್ನೈಯವರ್)

ದಕ್ಷಿಣದಿಕ್ಕಿಗೆ ತಿಲಕಪ್ರಾಯರಾದ ಮಹನೀಯರು ಬಾಳುತ್ತಿರುವಂತಹ (ನಾಂಗೈ ಶೆಮ್ಬೊನ್‌ಶೆಯರ್ ಕೋಯಿಲಿನುಳ್ಳೇ) ತಿರುನಾಂಗೂರಿನಲ್ಲಿರುವ ಶೆಮ್ಬೊನ್‌ಶೆಯ್ ಕೋಯಿಲ್ ಕ್ಷೇತ್ರದಲ್ಲಿ (ಮನ್ನು ಅದು ಪೊಲಿಯ) ಶ್ರೀವೈಷ್ಣವಗೋಷ್ಠಿಯು ವರ್ಧಿಸಲು (ಮಹಿಟ್‌ನ್ದುನಿನ್ರಾನೈ) ಮನ ಒಲಿದು ಬಂದು ನಿಂತವನಾದ ಪರಮಾತ್ಮನನ್ನು (ನಾನ್‌ವಣಂಗಿ ವಾಟ್‌ನ್ದೊಟಿನ್ದೇನ್) ನಾನು ಸೇವಿಸಿ ಉಜ್ಜೀವಿಸಿ ಹೋದೆ!

ತನ್ನ ಮೊಮ್ಮಗನಾದ ಅನಿರುದ್ಧನೊಡನೆ ಹಗೆಮಾಡಿ ತನ್ನನ್ನೂ ಎದುರಿಸಿ ನಿಂತ ಬಾಣನ ಸಹಸ್ರಬಾಹುಗಳೂ ಕತ್ತರಿಸಿ ಬೀಳುವ ಹಾಗೆ ಶ್ರೀಸುದರ್ಶನ ವನ್ನು ಸ್ಪರ್ಶಿಸಿದವನು ಅವನು. 'ಇನ್ನೂ ಬಾಣನಂತಹ ವಿರೋಧಿಗಳು ಬಂದು ಮೊಳೆತರೆ ಏನು ಮಾಡುವುದು,' ಎಂದು ಮಿಂಚುಗಳು ಅಲಂಕರಿಸುವ ಶಿಖರಗಳನ್ನುಳ್ಳ ತಿರುಮಲೆಯಲ್ಲಿ ನಿತ್ಯವಾಸ ಮಾಡುತ್ತಿದ್ದಾನೆ ಆ ವೇದೈಕ ವೇದ್ಯನೂ ಸ್ವಯಂಪ್ರಕಾಶಮಾನ ಸ್ವರೂಪಿಯೂ ಆದ ಸ್ವಾಮಿ. ಭಾಗವತ ಗೋಷ್ಠಿಯಿಂದ ಸಮೃದ್ಧವಾದ ಈ ಕ್ಷೇತ್ರದಲ್ಲಿ ಅವನಿಗೆ ನಿರವಧಿಕವಾದ ಪ್ರೀತಿಯಂತೆ. ಪರಮಪದ ವಿಭೂತಿಯಲ್ಲಿ ಹೇಗೆ ಪ್ರೀತಿಯೋ ಹಾಗೇ ಈ ಕ್ಷೇತ್ರವೂ ಅವನ ಪ್ರೀತಿಗೆ ಪರಮಪಾತ್ರವಾಗಿದೆ.

**ಕಳಂಗನಿವಣ್ಣಾ ಕಣ್ಣನೇ ಎನ್‌ತನ್‌ಕಾರ್‌ಮುಹಿಲೇ**
**ಎನ ನಿನ್ನೆಂದಿಟ್ಟು**
**ಉಳಂ ಕನಿಂದಿರುಕ್ಕುಂ ಅಡಿಯವರ್ ತಂಗಳ್**
**ಉಳ್ಳತ್ತುಳ್ ಊರಿಯುತೇನ್ನೈ**
**ತೆಳಿಂದ ನಾನ್‌ಮರೈಯೋರ್ ನಾಂಗೈ ನನ್ನಡುವುಳ್**
**ಶೆಮ್ಬೊನ್‌ಶೆಯತ್ ಕೋಯಿಲಿನುಳ್ಳೇ**
**ವಳಂಕೊಳ್ ಪೇರಿನ್ಬಂ ಮನ್ನಿನಿನ್ರಾನೈ**
**ವಣಂಗಿನಾನ್‌ವಾಟ್‌ನ್ದೊಟಿನ್ದೇನೇ ॥೯॥**

(ಕಳಂಗನಿವಣ್ಣಾ) ಕಳಾಫಲದಂತೆ ಮೈ ಬಣ್ಣವನ್ನುಳ್ಳವನೇ, (ಕಣ್ಣನೇ ಎನ್ ತನ್ ಕಾರ್‌ಮುಹಿಲೇ) ಶ್ರೀಕೃಷ್ಣನೇ, ನನ್ನ ಕಾಳಮೇಘವೇ, (ಎನನಿನ್ನೆಂದಿಟ್ಟು) ಎಂದು ಧ್ಯಾನಿಸಿ (ಉಳಂ ಕನಿಂದಿರುಕ್ಕುಂ) ಮನಸ್ಸು ಪರಿಪಕ್ವವಾಗಿರುವ (ಅಡಿಯವರ್ ತಂಗಳ್ ಉಳ್ಳತ್ತುಳ್) ಭಕ್ತರುಗಳ ಹೃದಯದಲ್ಲಿ (ಊರಿಯು)

ನಿಶ್ಚಲವಾಗಿ ಊರಿರುತ್ತಿರುವ (ತೇನ್ನೈ) ಭೋಗ್ಯವಾದ ಜೇನಿನಂತಿರುವವನೂ, (ತೆಳಿಂದ ನಾನ್ ಮರ್ರೈಯೋರ್ ನಾಂಗ್ಯೆ ನನ್ನಡುವುಳ್ ಶೆಮ್ಪೊನ್ ಶೆಯ್ ಕೋಯಿಲಿನುಳ್ಳೇ) ಒಳ್ಳೆಯ ಅರಿವುಳ್ಳ ಚತುರ್ವೇದಿಗಳಿರುವ ತಿರುನಾಂಗೂರಿನ ನಟ್ಟನಡುವೆ ಇರುವ ಶೆಮ್ಪೊನ್ ಶೆಯ್‌ಕೋಯಿಲ್ ಎಂಬ ದಿವ್ಯಕ್ಷೇತ್ರದಲ್ಲಿ (ವಳರ್ ಕೊಳ್ ಪೆರಿನ್ಬಮ್ ಮನ್ನಿನಿನ್ರಾನ್ನೈ) ಅತ್ಯಧಿಕವಾದ ಪರಮಾನಂದವನ್ನು ಹೊಂದಿ ತಂಗಿರುವವನಾದ ಪರಮಾತ್ಮನನ್ನು (ನಾನ್ ವಣಂಗಿ ವಾಟ್ಪೊಡ್ಟಿನ್ದೇನ್) ನಾನು ಸೇವಿಸಿ ಬದುಕಿಹೋದೆ !

ಕಣ್ಣಿಗೆ ತಂಪಾಗಿರುವ ಕಳಾಫಲದ ಹಾಗೆ ಅತಿಮನೋಹರವಾದ ದಿವ್ಯ ಮಂಗಳ ವಿಗ್ರಹದಿಂದ ಎಲ್ಲರ ಚಿತ್ತವನ್ನೂ ಅಪಹರಿಸಿ ಅವರ ತಾಪವನ್ನೆಲ್ಲಾ ಹೋಗಲಾಡಿಸುವವನು ಈ ಸರ್ವೇಶ್ವರ. ಹೀಗೆ ಅವನನ್ನು ಧ್ಯಾನಿಸಿ ಹೃದಯಂ ಪಕ್ವವಾದ ಶೇಷಭೂತರಾದ ಭಕ್ತರ ಹೃದಯಂದಲ್ಲಿ ಊರಿದ ಜೇನಿನಂತೆ ಭೋಗ್ಯನಾದವನವನು. 'ಯಾವಾಗಲೂ ಸರ್ವೇಶ್ವರನೇ ನಮಗೆ ರಕ್ಷಕ'— ಎಂದು ತಿಳಿದ ಬ್ರಾಹ್ಮಣರು ತಂಡತಂಡವಾಗಿರುವ ಈ ಕ್ಷೇತ್ರದಲ್ಲಿ ನಿರವಧಿಕವಾದ ಆನಂದವನ್ನು ಹೊಂದಿದವನಾಗಿ ನೆಲೆಸಿದ್ದಾನೆ ಆ ಸರ್ವೇಶ್ವರ.

**ತೇನ್ ಅಮರ್ ಶೋಲೈ ನಾಂಗ್ಯೆ ನನ್ನಡುವುಳ್**
**ಶೆಮ್ಪೊನ್ ಶೆಯ್ತ್ ಕೋಯಿಲಿನುಳ್ಳೇ**
**ವಾನವರ್‌ಕೋನೈ ಕಂಡಮೈ ಶೊಲ್ಲುಂ**
**ಮಂಗೈಯಾರ್ ವಾಳ್‌ಕಲಿಕನಿ**
**ಊನಮಿಲ್ ಪಾಡಲ್ ಒನ್ಬದೋಡೊನ್ರುಂ**
**ಒಟ್ರಿವಿನ್ರಿ ಕತ್ತುವಲ್ಲಾರ್‌ಹಳ್**
**ಮಾನವೆಣ್ ಕುಡೈಕ್ಕೀಟ್ವೈಯಹಂ**
**ಆಂಡು ವಾನವರಾಹುವರ್ ಮಹಿಟ್ನ್ದೇ ॥೧೦॥**

(ತೇನ್‌ಅಮರ್‌ಶೋಲೈ) ದುಂಬಿಗಳು ಯಾವಾಗಲೂ ಝೇಂಕರಿಸುತ್ತಿರುವ ತೋಟಗಳನ್ನುಳ್ಳ (ನಾಂಗೈನನ್ನಡುವುಳ್ ಶೆಮ್ಪೊನ್‌ಶೆಯ್‌ ಕೋಯಿಲಿನುಳ್ಳೇ) ತಿರುನಾಂಗೂರಿನ ನಟ್ಟನಡುವೆ ಇರುವ ಶೆಮ್ಪೊನ್‌ಶೆಯ್‌ ಕೋಯಿಲ್ ಎಂಬ ದಿವ್ಯ ಕ್ಷೇತ್ರದಲ್ಲಿ (ವಾನವರ್ ಕೋನೈ ಕಣ್ಣಮೈ) ದೇವಾಧಿದೇವನನ್ನು ತಾವು ಸೇವಿಸಿದ ಪ್ರಕಾರವನ್ನು (ಶೊಲ್ಲುಂ) ಹೇಳಿದವರೂ (ಮಂಗೈಯರ್)

ತಿರುಮಂಗೈಯಲ್ಲಿರುವವರಿಗೆ ನಾಯಕರಾದವರೂ (ವಾಳ್) ಖಡ್ಗವನ್ನು ಧರಿಸಿದವರೂ ಆದ (ಕಲಿಕನ್ರಿ) ತಿರುಮಂಗೈಯಾಳ್ವಾರ್ ಅವರು ಹಾಡಿದ (ಊನಮ್ ಇಲ್‌ಪಾಡಲ್) ದೋಷವಾವುದೂ ಇಲ್ಲದ ಹಾಡಾದ (ಒನ್ಬ ದೋಡು ಒನ್ರುಂ) ಈ ಹತ್ತು ಪಾಶುರಗಳನ್ನೂ (ಒಳಿವು ಇನ್ರಿ) ಒಂದನ್ನೂ ಬಿಡದೆ (ಕತ್ತುವಲ್ಲಾರ್‌ಹಳ್) ಓದಿ ಅರಿಯಬಲ್ಲವರು (ಪಾನಂ ವೆಣ್ ಕುಡೈ ಕ್ಕೀಟ್) ಹರಡಿದ ಶ್ವೇತಚ್ಛತ್ರದ ಅಡಿಯಲ್ಲಿ ಇದ್ದುಕೊಂಡು (ವೈಯಹಂ ಆಂಡು) ಭೂಮಂಡಲವನ್ನು ಆಳಿ (ಮಹಿಟ್‌ನ್ದು) ಸಂತೋಷಿಸಿ (ವಾನವರ್ ಆಹುವರ್) ಅನಂತರ ನಿತ್ಯಸೂರಿಗಳೂ ಆಗುತ್ತಾರೆ.

ನಿತ್ಯಸೂರಿಗಳಂತೆ ಯಾವಾಗಲೂ ಆನಂದದಿಂದ ಮೊರೆಯುವ ದುಂಬಿಗಳ ಹಿಂಡಿನಿಂದ ಕೂಡಿರುವ ತೋಟಗಳು ಮೆರೆಯುತ್ತಿವೆ ಈ ದಿವ್ಯಕ್ಷೇತ್ರದಲ್ಲಿ. ಈ ಹತ್ತುಪಾಶುರಗಳನ್ನೂ ಆಳ್ವಾರ್ ಅವರು ಭಗವಂತನನ್ನು ಸಂದರ್ಶಿಸಿದ ಹರ್ಷಪ್ರಕರ್ಷದಿಂದ ಹಾಡಿದ್ದಾರೆ. ಇವುಗಳಲ್ಲಿ ಒಂದನ್ನೂ ಆ ಕಾರಣದಿಂದಲೇ ಬಿಡತಕ್ಕದಲ್ಲ. ಇದರ ಅರ್ಥಗಳನ್ನೂ ಅರಿಯುವವರಾಗಿ ಇದನ್ನು ಅನುಸಂಧಾನ ಮಾಡುವವರು ಈ ಭೂಮಂಡಲದಲ್ಲಿ ಏಕಚಕ್ರಾಧಿಪತ್ಯ ಹೊಂದುತ್ತಾರೆ. ಎಲ್ಲವನ್ನೂ ಭಾಗವತ ಶೇಷವನ್ನಾಗಿ ಮಾಡಲು ನಿರ್ವಾಹಕರಾಗುತ್ತಾರೆ. ಅನಂತರ ನಿರವಧಿಕ ಪ್ರೀತಿಯುಕ್ತರಾಗಿ ನಿತ್ಯಸೂರಿಗಳ ಜೊತೆಗೆ ತಾವೂ ಒಬ್ಬರಾಗಿ ಸೇರಿ ಹೋಗುತ್ತಾರೆ.

---

### ನಾಲ್ಕನೆಯ ಪತ್ತು—ನಾಲ್ಕನೆಯ ತಿರುಮೊೞಿ

# 'ಮಾತ್ತರಶರ್'

## ಪ್ರವೇಶ

ವಿಭವಾವತಾರಗಳನ್ನು ಮಾಡಿದ ಜಗತ್ಕಾರಣನೂ ಪರಬ್ರಹ್ಮರೂಪಿಯೂ ಆಗಿರುವ ಶ್ರೀಮನ್ನಾರಾಯಣನೇ ಅರ್ಚಾವತಾರಿಯಾಗಿ ಮೆರೆದಿರುವುದನ್ನು ಅರಿಯದೆ ಅರ್ಚಾವತಾರಗಳಿಗೂ ವಿಭವಾವತಾರಗಳಿಗೂ ಭೇದವಿದೆಯೆಂದು

ಭ್ರಮಿಸಿ, 'ಅರ್ಚಾವತಾರಗಳಲ್ಲಿ ಸಾವು ಶರಣ ವರಣವಾಡಿ ಉಜ್ಜೀವಿಸುವುದು ಹೇಗೆ ?'—ಎಂದು ಸಂದೇಹಿಸುವ ಪಾಮರ ಜನರನ್ನು ಕಂಡು ಅವರಿಗೆ ಸರಿಯಾದ ಅರಿವನ್ನು ಆಳ್ವಾರ್ ಅವರು ನೀಡುತ್ತಾರೆ. ರಾಮಕೃಷ್ಣಾದಿ ರೂಪದಲ್ಲಿ ಅವತರಿಸಿದ ಭಗವಂತ, ನಾವು ಆ ಅವತಾರಗಳ ನಂತರ ಇಲ್ಲಿ ಬಂದ ಕಾರಣ ನಮಗೆ ರಾಮಕೃಷ್ಣಾದಿಗಳು ಸುಲಭರಲ್ಲ. ವಿಭವಾದಿ ದೆಶೆಯಲ್ಲಿ ನಮಗೆ ಮೋಕ್ಷೋಪಾಯವನ್ನು 'ಮಾಮೇಕಂ ಶರಣಂ ವ್ರಜ'–ಎಂದು ವಿಧಿಸಿದವನೇ ನಮ್ಮ ರಕ್ಷಣೆಯ ಭಾರವನ್ನು ವಹಿಸಿಕೊಳ್ಳುವುದಕ್ಕಾಗಿಯೂ ನಮ್ಮನ್ನು ದಾಸರನ್ನಾಗಿ ಮಾಡಿಕೊಳ್ಳುವುದಕ್ಕಾಗಿಯೂ ಈ ದಿವ್ಯಕ್ಷೇತ್ರಗಳಲ್ಲಿ ಒಲಿದುಬಂದು ನಿತ್ಯವಾಸವಾಡುತ್ತಿದ್ದಾನೆ. ಆದುದರಿಂದ ಈ ದಿವ್ಯ ಕ್ಷೇತ್ರಗಳಲ್ಲಿ ಹೋಗಿ ಸೇವಿಸಬೇಕು ಅವನನ್ನು. ಅರ್ಚಾರೂಪಿಗೂ ವಿಭವರೂಪಿಗೂ ತಾದಾತ್ಮ್ಯವನ್ನು ಅನುಭವಿಸಿದ್ದಾರೆ. ಸರ್ವರಕ್ಷಕನಾದ ಸರ್ವೇಶ್ವರ ನಮ್ಮನ್ನು ಅನುಗ್ರಹಿಸಲೆಂದೇ 'ತಿರುತ್ತೆತ್ತಿಯಂಬಲಂ' ಎಂಬ ಈ ಕ್ಷೇತ್ರದಲ್ಲಿ ನೆಲಸಿದ್ದಾನೆಂದು ಅನುಸಂಧಾನ ಮಾಡಿದ್ದಾರೆ.

**ಮಾತ್ತರಶರ್ ಮಣಿಮುಡಿಯುಂ ತಿರಲುಂ ತೇಶುಂ**
**ಮತ್ತವರ್‌ತಮ್ ಕಾದಲಿಮಾರ್ ಕುಟ್ಟೆಯುಂ, ತಂದೈ**
**ಕಾಲ್ ಶಳೈಯುಂ ಉಡನ್ ಕೞಲ ವಂದು ತೋನ್ರಿ**
**ಕದಂ ನಾಹಂ ಕಾತ್ತು ಅಳಿತ್ತ ಕಣ್ಣರ್ ಕೆಂಡೀರ್**
**ನೊತ್ತಿದೞ್‌ಕೊಳ್ ಅರವಿಂದಂ ನುಟ್ಟೆಂದ ಪಳ್ಳತ್ತು**
**ಇಳಂ ಕಮುಹಿನ್ ಮುದುಪಾಳೈ ಪರುವಾಯ್‌ನೆಂಡಿನ್**
**ಶೇತ್ತಿ ಳ್ಳೆಯಿಲ್ ವೆಣ್ ಮುತ್ತಂ ಶಿನ್ದು ನಾಂಗೂರ್**
**ತಿರುತ್ತೆತ್ತಿಯಂಬಲತ್ತೆನ್ ಶೆಂಗಣ್‌ಮಾಲೇ** ॥೧॥

(ಪಳ್ಳತ್ತಿಲ್) ತಗ್ಗಾದ ಹಳ್ಳದ ಪ್ರದೇಶದಲ್ಲಿ ಮೊಳಿತ (ನೂರು ಇದೞ್‌ಕೊಳ್ ಅರವಿಂದಂನುಟ್ಟೆನ್ದ) ನೂರು ದಳಗಳುಳ್ಳ ತಾವರೆ ಹೂವಿನಲ್ಲಿ ಪ್ರವೇಶಿಸಿದ (ಪರುವಾಯ್‌ನೆಂಡಿನ್) ಬಿರಿದ ಬಾಯನ್ನುಳ್ಳ ನಳ್ಳಿಯು (ಶೇರು ಅಳ್ಳೆಯಿಲ್) ಕೆಸರಿನಿಂದ ಕೂಡಿದ ಪ್ರದೇಶದಲ್ಲಿ (ಇಳಕಮುಕಿನ್ ಮುದುಪಾಳೈ) ಎಳೆಯ ಅಡಿಕೆ ಮರಗಳ ಪಕ್ವವಾದ ಹೊಂಬಾಳೆಯು (ವೆಣ್‌ಮುತ್ತಂ ಶಿನ್ದು) ಬಿಳಿಯ

ಮುತ್ತುಗಳನ್ನು ಚೆಲ್ಲುವಂತಹ (ನಾಂಗೂರ್ ತಿರುತ್ತೆತ್ತಿಯಂಬಲತ್ತು) ನಾಂಗೂರಿನಲ್ಲಿರುವ 'ತಿರುತ್ತೆತ್ತಿಯಂಬಲಂ' ಎನ್ನುವ ದಿವ್ಯ ಕ್ಷೇತ್ರದಲ್ಲಿ ದಯಮಾಡಿರುವ (ಎನ್ ಶೆಮ್‌ಕಣ್‌ಮಾಲ್) ನನಗೆ ಸ್ವಾಮಿಯೂ, ಕೆಂದಾವರೆ ಗಳಂತೆ ಚೆಲುವಾದ ನೇತ್ರಗಳನ್ನುಳ್ಳವನೂ ಆದ ಸರ್ವೇಶ್ವರನು ಯಾರು ಎಂದರೆ—(ಮಾರು ಅರಶರ್) ಶತ್ರುಗಳಾದ ದುರ್ಯೋಧನಾದಿ ರಾಜರುಗಳ (ಮಣಿ ಮುಡಿಯುಂ) ಮಾಣಿಕ್ಯಖಚಿತವಾದ ಕಿರೀಟಗಳೂ (ತಿರಲುಂ) ಬಲವೂ (ತೇಶುಂ) ತೇಜಸ್ಸೂ, (ಅವರ್‌ತಮ್ ಕಾದಲಿಮಾರ್ ಕುಟ್ಟಿಯುಂ) ಅವರ ದಯಿತೆಯರ ಮಂಗಳಸೂತ್ರವೂ, (ತಂದೈ ಕಾಲ್‌ತಳೈಯುಂ) ತನ್ನ ತಂದೆ ಯಾದ ವಸುದೇವನ ಕಾಲಿಗೆ ಹಾಕಿದ್ದ ಸಂಕೋಲೆಯೂ (ಉಡನ್ ಕಟಿಲ) ಏಕಕಾಲದಲ್ಲಿ ಕಳಚಿಹೋಗುವಂತೆ (ವಂದು ತೋನ್ರಿ) ಬಂದು ಅವತರಿಸಿದವ ನಾಗಿ (ಕದುನಾಹಂ ಕಾತ್ತು ಅಳಿತ್ತ) ಬಹಳ ವೇದನೆ ಅನುಭವಿಸುತ್ತಿದ್ದ ಗಜೇಂದ್ರನನ್ನು ರಕ್ಷಿಸಿ ಕೃಪೆಮಾಡಿದವನಾದ (ಕಣ್ಣರ್‌ಕುಡೀರ್) ಶ್ರೀಕೃಷ್ಣ ಪರಮಾತ್ಮನೇ ಎಂದು ಕಾಣಿರಿ.

'ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್' ಎಂದು ಪಾಂಡವ ಶತ್ರುಗಳಾದ ದುರ್ಯೋಧನಾದಿಗಳನ್ನು ಕುರಿತು ಹೇಳಿದ ಸ್ವಾಮಿ. ಅಂಥ ವಿರೋಧಿಗಳಾದ ದುರ್ಯೋಧನಾದಿಗಳ ರತ್ನಖಚಿತವಾದ ಕಿರೀಟಗಳು, ದರ್ಪ, ದಿಗ್ವಿಜಯಮಾಡಿ ಅವರು ಪಡೆದುಕೊಂಡ ಹಿರಿಮೆ, ಅವರ ಸ್ತ್ರೀಯರ ಮಂಗಳಸೂತ್ರ, ವಸುದೇವರ ಕಾಲ್ಸಂಕೋಲೆಗಳು—ಇವೆಲ್ಲಾ ನಾಶವಾಗು ವಂತೆ ಬಂದು ಅವತರಿಸಿದನು ಆ ಸರ್ವೇಶ್ವರ. 'ಮೊಸಳೆಯಿಂದ ದುಃಖ ಕ್ಕೊಳಗಾದಾಗ ತಕ್ಷಣ ಬಂದೊದಗಲಿಲ್ಲವಲ್ಲಾ !' ಎಂದು ಆ ಗಜೇಂದ್ರನಿಗೆ ವೇದನೆ ಆಯಿತಂತೆ. 'ಒಬ್ಬರೂ ನನಗೆ ದಿಕ್ಕಿಲ್ಲದವರಂತೆ ನಾನು ಕಷ್ಟ ಪಡು ವುದೇ ?' ಎಂದು ಆ ಗಜೇಂದ್ರ ದುಃಖಿಸಿದನಂತೆ. ಅರವಿಂದದ ಗರ್ಭವನ್ನು ಸೇರಿದ ನಳ್ಳಿಯು ಮೇಲೆ ಅಡಿಕೆಮರದ ಪಕ್ವವಾದ ಹೊಂಬಾಳೆ ಮುತ್ತನ್ನು ದುರಿಸುವಂತಹ ಪ್ರದೇಶ ಆ ನಾಂಗೂರ್‌ಕ್ಷೇತ್ರ. ಭಗವಚ್ಚರಣಾರವಿಂದಗಳಲ್ಲಿ ಪ್ರವೇಶಿಸಿದ ಜಂತುವಿನ ಸಂಬಂಧಿಗಳ ವಿಷಯದಲ್ಲಿ ನಿತ್ಯಸೂರಿಗಳು ಪ್ರಸಾದ ವನ್ನು ಹೊಂದುವರು ಎಂಬ ಅರ್ಥ ಧ್ವನಿಸುತ್ತದೆ. ಭಗವಚ್ಚರಣಾರವಿಂದ ಪರಿಮಳ ಯಾವ ಜಂತುವಿನ ಬಗೆಗೆ ಉಂಟಾಗುವುದೋ ಅಲ್ಲಿ ನಿತ್ಯಸೂರಿಗಳ

ಪ್ರಸಾದವೂ ಕೊರೆಯಿಲ್ಲದಿರುವುದು ಎಂಬ ಅರ್ಥವೂ ತೋರುತ್ತದೆ. ತಾವರೆಯಹಾದಂದು ನಳ್ಳಿಯು ಇರುತ್ತಿರುವ ಕೆಸರಿನಲ್ಲಿ ಅರಳಿ ಪರಿಮಳವನ್ನು ಕೊಟ್ಟರೆ ಎಳೆಯ ಅಡಿಕೆ ಮರಗಳು ಆ ಪ್ರದೇಶದ ಮೇಲೆ ಪಕ್ವವಾದ ಹೊಂಬಾಳೆಯ ಬಿಳಿಯ ಮುತ್ತುಗಳನ್ನು ವರ್ಷಿಸುವುವಂತೆ !

ಪೊನ್‌ತೊಡಿತೋಳ್‌ಮಡಂ ಮಹಳ್‌ತನ್ ವಡಿವುಕೊಂಡ
ಪೊಲ್ಲಾದ ವನ್‌ಪೇಯ್‌ಚ್ಚಿ ಕೊಂಗೈವಾಂಗಿ
ಪೆತ್ತು ಎಡುತ್ತತಾಯ್‌ಪೋಲ ಮಡುಪ್ಪ
ಆರುಂಪೇಣಾ ನೆಂಜು ಉಂಡು ಉಹಂದ ಪಿಳ್ಳೈಕಂಡೀರ್
ನೆಲ್‌ತೊಡುತ್ತಮಲರ್‌ನೀಲವ್ ನಿರೈನ್ದ ಶೂಳಿಲ್
ಇರುಶಿರೈಯ ವಂಡು ಒಲಿಯುಂ ನೆಡುಕಣ್ಣಾರ್‌ತವ್
ಶಿರು ಅಡಿನೇಲ್ ಶಿಲಂಬು ಒಲಿಯುಂ ಮಿಳಿತ್ತು
ನಾಂಗೂರ್ ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್‌ಮಾಲೇ
॥೨॥

(ನೆಲ್ ತೊಡುತ್ತ) ಭತ್ತದ ಪೈರುಗಳ ಮೇಲೆ ಸಾಲು ಸಾಲಾಗಿ ತಲೆ ಎತ್ತಿರುವ (ನೀಲವ್ ಮಲರ್ ನಿರೈಂದಶೂಳಿಲ್) ಕನ್ನೈದಿಲೆಯ ಹೂಗಳಿಂದ ತುಂಬಿರುವ ಪರಿಸರ ಪ್ರದೇಶಗಳಲ್ಲಿ (ಇರು ಶಿರೈಯ ವಂಡು ಒಲಿಯುಂ) ಸುಂದರವಾದ ರೆಕ್ಕೆಗಳನ್ನುಳ್ಳ ದುಂಬಿಗಳ ಝೇಂಕಾರವೂ (ನೆಡುಕಣ್ಣಾರ್‌ತವ್) ನೀಳವಾದ ನೇತ್ರಗಳನ್ನುಳ್ಳ ಸ್ತ್ರೀಯರು (ಶಿರು ಅಡಿಮೇಲ್ ಶಿಲಂಬು ಒಲಿಯುಂ) ಚಿಕ್ಕ ಪಾದಗಳಲ್ಲಿ ಧರಿಸಿರುವ ಕಾಲಂದುಗೆಗಳ ಧ್ವನಿಯೂ (ಮಿಳಿತ್ತು) ಕೂಡಿ ಧ್ವನಿಸು ವಂತಹ (ನಾಂಗೂರ್ ತಿರುತ್ತೆತ್ತಿ ಅಂಬಲತ್ತು ಎನ್ ಶೆಂಗಣ್‌ಮಾಲ್) ನಾಂಗೂರಿನಲ್ಲಿರುವ ತಿರುತ್ತೆತ್ತಿಯಂಬಲಂ ಕ್ಷೇತ್ರದಲ್ಲಿರುವ ನಮ್ಮ ಸ್ವಾಮಿ ಯಾದ ಅರವಿಂದಾಕ್ಷನು ಯಾರೆಂದರೆ— (ಪೊನ್ ತೊಡಿ) ಚಿನ್ನದ ಬಳೆ ಧರಿಸಿದ (ತೋಳ್ ) ಭುಜಗಳನ್ನುಳ್ಳವಳೂ (ಮಡಂ) ಆತ್ಮಗುಣಗಳನ್ನುಳ್ಳವಳೂ ಆದ (ಮಹಳ್‌ತನ್) ಯಶೋದಾ ದೇವಿಯ (ವಡಿವುಕೊಂಡ) ವೇಷವನ್ನು ಹಾಕಿ ಕೊಂಡು ಬಂದ (ಪೊಲ್ಲಾದ ವನ್ ಪೇಯ್‌ಚ್ಚಿ) ದುಷ್ಟರಾಕ್ಷಸಿಯಾದ ಪೂತ ನಿಯು (ಕೊಂಗೈವಾಂಗಿ) ತನ್ನ ಸ್ತನವನ್ನು ಕೈಯಲ್ಲೆತ್ತಿ (ಪೆತ್ತು ಎಡುತ್ತ ತಾಯ್ ಪೋಲ ಮಡುಪ್ಪ) ಹೆತ್ತು ಸಾಕಿದ ತಾಯಿಯ ಹಾಗೆ ಬಾಲಕೃಷ್ಣನ

ಬಾಯಲ್ಲಿ ಇಡಲು (ಆರುಂ ಪೇಣಾನಂಜು) ಯಾರೂ ಬಯಸದ ವಿಷವನ್ನು (ಉಂಡು) ಮೊಲೆ ಹಾಲಿನೊಡನೆ ಹೀರಿ (ಉಹಂದ) ಸಂತೋಷಿಸಿದ (ಪಿಳ್ಳೈ ಕಂಡೀರ್) ಎಳೆಯ ಮಗುವೆಂದು ತಿಳಿದುಕೊಳ್ಳಿ.

ಪೂತನಿ ಯಶೋದಾದೇವಿಯ ರೂಪವನ್ನು ಹಾಗೆಯೇ ಅನುಕರಿಸಿ ತೊಟ್ಟು ಬಂದಳು. ಎಂಥರೂಪವನ್ನುಳ್ಳವಳು ಎಂಥರೂಪವನ್ನನುಕರಿಸಿದಳು ! ಅವಳು ಅತ್ಯಂತ ಕ್ರೂರಿಯಾದ ರಾಕ್ಷಸಿ. ಭಯಂಕರವಾದ ಆಕಾರವುಳ್ಳವಳು. ಅವಳು ತೊಟ್ಟ ವೇಷ ಸಕಲಗುಣ ಪೂರ್ಣೆಯೂ ಚೆಲುವೆಯೂ ಆದ ಯಶೋದೆಯ ವೇಷ. ಯಾರೂ ಬಯಸದ ವಿಷವನ್ನುಉಂಡು ಸಂತೋಷಿಸಿದನಂತೆ ಅವನು, ಇನ್ನೂ ಅರಿವು ಉಂಟಾಗದ ಕಾರಣ ಹಾಗೆ ಸಂತೋಷಿಸಿದನೋ ಏನೋ ! ತಿಳಿವಳಿಕೆ ಬಂದಾಗ ಹಾಗೆ ಮಾಡಲಾಗುವುದಿಲ್ಲವಲ್ಲ ! ಭೃಂಗಗಳ ಝೇಂಕಾರ ಹಾಗೂ ನೂಪುರಗಳ ಶಿಂಜಿತ ಎರಡೂ ಸೇರಿ ಕೇಳಿಬರುತ್ತಿವೆಯಂತೆ ಅವುಗಳಲ್ಲಿ ಭೇದವನ್ನು ಅರಿಯುವುದಕ್ಕಾಗದಂತೆ ಆ ದಿವ್ಯ ಕ್ಷೇತ್ರದಲ್ಲಿ. ಆ ಬಾಲಗೋಪಾಲನೇ 'ತಿರುತ್ತೆತ್ತಿಯಂಬಲಂ' ನಲ್ಲಿರುವ ಪದ್ಮನಯನನಾದ ಸ್ವಾಮಿಯಾಗಿದ್ದಾನೆ.

ಪಡಲಡೈತ್ತ ಶಿರು ಕುರಂಬೈ ನುಳೈನ್ದು ಪುಕ್ಕು
ಪಶುವೆಣ್ಣೆಯ್ ಪದಮಾರ ಪಣ್ಣೈಮುತ್ತುವಾ್
ಅಡಲಡರ್ತ್ತವೇಲ್ ಕಣ್ಣಾರ್ ತೋಕ್ಕೈ ಪತ್ತಿ
ಅಲಂದಲೈಮೈಶೆಯ್‌ದು ಉಬಿಲುಂ ಐಯನ್ ಕಂಡೀರ್
ಮಡಲೆಡುತ್ತ ನೆಡುತೆಂಗಿನ್ ಪಟಂಗಳ್‌ವೀಟಿ
ಮಾಂಗನಿಹಳ್ ತಿರಟ್ಟು ಉರುಟ್ಟಾ ವರುನೀರ್‌ಪ್ಪೊನ್ನಿ
ತಿಡಲೆಡುತ್ತು ಮಲರ್ ಶುಮಂದು ಅಂಗಿಟಿಯುವಾ್
ನಾಂಗೂರ್ ತಿರುತ್ತೆತ್ತಿಯಂಬಲತ್ತೆನ್ ಶೆಂಗಣ್‌ಮಾಲೇ ॥೩॥

(ಮಡಲ್ ಎಡುತ್ತ ನೆಡುತೆಂಗಿನ್) ಹೊಂಬಾಳೆಗಳನ್ನು ಹೆಚ್ಚಾಗಿ ಹೊಂದಿರುವಂತಹ ಉನ್ನತವಾಗಿರುವ ತೆಂಗಿನಮರಗಳಿಂದ (ಪಟಂಗಳ್ ವಿಟಿ) ಕಾಯಿಗಳು ಮಾವಿನಮರಗಳ ಮೇಲೆ ಬೀಳಲು (ಮಾಂಗನಿಹಳ್ ತಿರಟ್ಟು ಉರುಟ್ಟಾ) ಆಗ ಮಾವಿನ ಹಣ್ಣುಗಳು ರಾಶಿರಾಶಿಯಾಗಿ ಉದುರಲು ಅವುಗಳ

ನ್ನೆಲ್ಲಾ ಕೊಚ್ಚಿಕೊಂಡು ಬರುತ್ತಾ (ಮಲರ್ ಶುಮನ್ದು) ಹೂಗಳನ್ನು ತೇಲಿಸಿ ಕೊಂಡು ಬರುತ್ತಾ (ವರುಮ್‌ನೀರ್) ಹರಿಯುವ ಪ್ರವಾಹವನ್ನುಳ್ಳ (ಪೊನ್ನಿ) ಕಾವೇರಿಯು (ತಿಡಲ್ ಎಡುತ್ತು ಇಟಿಯುಂ) ಎತ್ತರವಾದ ಪ್ರದೇಶಗಳನ್ನು ಕೊಚ್ಚಿಹಾಕಿ ಪ್ರವಹಿಸುವಂತಹ (ನಾಂಗೂರ್ ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್‌ಮಾಲ್) ನಾಂಗೂರಿನಲ್ಲಿರುವ ತಿರುತ್ತೆತ್ತಿಯಂಬಲದ ಕ್ಷೇತ್ರದಲ್ಲಿರುವ ನನ್ನ ಸ್ವಾಮಿಯಾದ ಅರವಿಂದಾಕ್ಷನಾದ ಸರ್ವೇಶ್ವರನು ಯಾರೆಂದರೆ—(ಪಶು ವೆಣ್ಣೆಯಯ್ ಪದಂ ಅರ) ಆಗತಾನೇ ಕಡೆದು ತೆಗೆದ ಬೆಣ್ಣೆಯನ್ನು ಭುಜಿಸುವುದ ಕ್ಕಾಗಿ (ಪಡಲ್ ಅಡ್ಕೆತ್ತ ಶಿರು ಕುರಂಬೈ ನುಟ್ಟೈನ್ದು ಪುಕ್ಕು) ಕಟ್ಟಿದ ಚಾಪೆಯ ಬಾಗಿಲುಳ್ಳ ಗುಡಿಸಲುಗಳೊಳಗೆ ನುಗ್ಗಿ ಒಳಗೆ ಹೋಗಿ (ಅಡಲ್ ಅಡರ್‌ತ್ತ ವೇಲ್ ಕಣ್ಣಾರ್) ಯುದ್ಧ ಮಾಡಲು ತಕ್ಕದಾದ ನಿಶಿತವಾದ ಮೇಲಾಯುಧ ದಂತೆ ನೇತ್ರಗಳನ್ನುಳ್ಳ ಗೋಪಿಯರ (ತೋಕ್ಕೈ) ಸೀರೆಯ ಸೆರಗನ್ನು (ಪತ್ತಿ) ಹಿಡಿದೆಳೆದು (ಅಲಂದಲೈಮೈಶೆಯ್‌ದು) ಚೇಷ್ಟೆಗಳನ್ನು ಮಾಡಿ (ಪಣ್ಣೈ ಮುತ್ತುಂ ಉಟಲುಂ) ಗೊಲ್ಲಹಟ್ಟಿಯಲ್ಲೆಲ್ಲಲ್ಲಿಯೂ ತಿರಿಯುವ (ಐಯನ್ ಕಂಡೀರ್) ಮಹಾನುಭಾವನೆಂಬುದನ್ನು ಕಾಣಿರಿ.

ಹಿಂದಿನ ಪಾಶುರದಲ್ಲಿ ನಂಜುಂಡ ರೀತಿಯನ್ನು ಹೇಳಿದರು. ಈ ಪಾಶುರ ದಲ್ಲಿ ಆ ಊರಿನಲ್ಲಿ ಬೆಣ್ಣೆಯನ್ನು ಆ ಮಹಾನುಭಾವ ಉಂಡ ರೀತಿಯನ್ನು ವರ್ಣಿಸಿದ್ದಾರೆ. ಆಗತಾನೇ ಕಡೆದು ತೆಗೆದ ಬೆಣ್ಣೆಯು ನರುಗಂಪು ಆರುವ ಮೊದಲೇ ಅದನ್ನು ಭುಜಿಸಲು ಸ್ವಾಮಿ ಗುಡಿಸಲುಗಳಿಗೆ ಕಟ್ಟಿದ ಚಾಪೆಯ ಬಾಗಿಲನ್ನು ತಿರುಗಿಸಿಟ್ಟು ಒಳಹೊಕ್ಕನಂತೆ. ಆ ಗೋಪಿಯರು ತಮ್ಮ ನಿಶಿತ ವಾದ ಕಣ್ನೋಟದಿಂದ ಅವನು ಹೋಗುವುದಕ್ಕಾಗದಂತೆ ಮಾಡುವರಂತೆ. ಅವರ ಸೀರೆಯ ಸೆರಗನ್ನು ಸೆಳೆದು ಚೆಲ್ಲಾಟವಾಡಿದ ಆ ಮಹಾನುಭಾವ. ತೆಂಗಿನಕಾಯಿಗಳು ಮೇಲೆ ಬಿದ್ದಾಗ ಮಾಮರಗಳಿಂದ ಉದುರಿದ ಮಾವಿನ ಹಣ್ಣುಗಳನ್ನೆಲ್ಲಾ ಕೊಚ್ಚಿಕೊಂಡು ಬರುವ ನೀರನ್ನುಳ್ಳ ಕಾವೇರಿ ಉನ್ನತ ಪ್ರದೇಶಗಳನ್ನೆಲ್ಲಾ ಸವರಿಹಾಕಿ ಎಲ್ಲೆಲ್ಲೂ ಹೂಗಳ ಹರವು ಇರುವಂತೆ ಮಾಡುವುದು. ಅಂಥ ಕ್ಷೇತ್ರದಲ್ಲಿರುವ ಸರ್ವೇಶ್ವರ ಮತ್ತಾರೂ ಅಲ್ಲದೆ ವಿಭವಾವತಾರಮಾಡಿದ ಆ ಬಾಲಕೃಷ್ಣನೇ ಆಗಿದ್ದಾನೆ.

ವಾರ್ ಆರುಂಮುಲೈಮಡವಾಳ್ ಪಿನ್ನೈಕ್ಕಾಹಿ
ವಳ್ಳಿ ಮರುಪ್ಪಿನ್ ಕಡುಂಶಿನತ್ತುವನ್ ತಾಳಾರ್ನ್ದ
ಕಾರಾರ್ ತಿಣ್ವಿಡೈ ಅಡರ್ತ್ತು ವದುವೈ ಆಣ್ಡ
ಕರುಮುಹಿಲ್ಪೋಲ್ ತಿರುನಿರತ್ತು ಎನ್ ಕಣ್ಣರ್ ಕಂಡೀರ್
ಏರಾರುಂ ಮಲರ್ಪೊಟಿಲ್ಹಳ್ ತಟುವಿಎಂಗುಂ
ಎಟಿಲ್ ಮದಿಯ್ಕೈ ಕಾಲ್ತೊಡರ ವಿಳಂಗು ಶೋದಿ
ಶೀರಾರು ಮಣಿಮಾಡಂ ತಿಹೞಿನಾಂಗೂರ್
ತಿರುತ್ತೆತ್ತಿಯೆಂಬಲತ್ತಿನ್ ಶೆಂಗಣ್ಮಾಲೇ ॥೪॥

(ಏರ್ ಆರುಂ) ಸೌಂದರ್ಯಹೊಂದಿರುವ (ಮಲರ್ ಪೊಟಿಲ್ಹಳ್) ಹೂಗಳನ್ನುಳ್ಳ ತೋಪುಗಳಾದವು (ಎಂಗುಂತಟುವಿ) ಆಕಾಶದವರೆಗೂ ವ್ಯಾಪಿಸಿ ಎಟಿಲ್ ಮದಿಯ್ಕೈ) ಅಂದವಾದ ಚಂದ್ರನು (ಕಾಲ್ತೊಡರ) ಚಲಿಸದಂತೆ ಕಾಲನ್ನು ಕಟ್ಟಿಹಾಕುವಂತಹದೂ, (ವಿಳಂಗುಶೋದಿ ಶೀರ್ ಆರುಂ ಮಣಿ ಮಾಡಂ ತಿಹೞುಂ) ಬೆಳಗುವ ಪ್ರಕಾಶವನ್ನುಳ್ಳ ಸುಂದರವಾದ ಮಣಿಮಂದಿರ ಗಳು ಸೊಗಯಿಸುತ್ತಿರುವಂಥದೂ ಆದ (ನಾಂಗೂರ್ ತಿರುತ್ತೆತ್ತಿಯಂ ಬಲತ್ತು ಎನ್ ಶೆಂಗಣ್ಮಾಲ್) ನಾಂಗೂರಿನಲ್ಲಿರುವ ತಿರುತ್ತೆತ್ತಿಯಂಬಲಂ ದಿವ್ಯ ಕ್ಷೇತ್ರದಲ್ಲಿರುವ ಸರ್ವೇಶ್ವರನಾದ ನಮ್ಮ ಅರವಿಂದ ನೇತ್ರನು ಯಾರೆಂದರೆ— (ವಾರಾರುಂ ಮುಲೈ) ಕಂಚುಕ ಧರಿಸಿದ ಸ್ತನಮಂಡಲವನ್ನುಳ್ಳವಳೂ (ಮಡವಾಳ್) ಆತ್ಮಗುಣಪೂರ್ತಿಯನ್ನುಳ್ಳವಳೂ ಆದ (ಪಿನ್ನೈಕ್ಕು ಆಹಿ) ನಪ್ಪಿನ್ನೈಪಿರಾಟ್ಟಿಯನ್ನು ಪಡೆಯುವುದಕ್ಕಾಗಿ (ವಳ್ಳಿಮರುಪ್ಪಿನ್) ಬೆಳೆದ ಕೊಂಬುಗಳನ್ನುಳ್ಳವೂ (ಕಡುಂಶಿನತ್ತು) ಉಗ್ರವಾದ ಕೋಪವನ್ನುಳ್ಳವೂ (ವನ್ ತಾಳ್ ಆರ್ನ್ದ) ಬಹಳ ಬಲಿಷ್ಠವಾದ ಕಾಲುಗಳನ್ನುಳ್ಳವೂ (ಕಾರ್ ಆರ್) ಕಪ್ಪುಬಣ್ಣ ಹೊಂದಿದವೂ ಆದ (ತಿಣ್ ವಿಡೈ) ಬಲಿಷ್ಠವಾದ ವೃಷಭ ಗಳನ್ನು (ಅಡರ್ತ್ತು) ಅಡಗಿಸಿ (ವದುವೈಆಂಡ) ಅವಳನ್ನು ವಿವಾಹಮಾಡಿ ಕೊಂಡ (ಕರುಮುಹಿಲ್ಪೋಲ್ ತಿರುನಿರತ್ತು ಎನ್ಕಣ್ಣರ್ ಕಂಡೀರ್) ನೀಲಮೇಘಶ್ಯಾಮಲನಾದ ನಮ್ಮ ಶ್ರೀಕೃಷ್ಣನೆಂದು ತಿಳಿಯಿರಿ.

ಶ್ರೀಕೃಷ್ಣನು ಪ್ರಾಪ್ತಯೌವನೆಯಾದ ನಪ್ಪಿನ್ನೈಪಿರಾಟ್ಟಿಗಾಗಿ ಬಲಿಷ್ಠ ವಾದವೂ ಅದಮ್ಯವಾದವೂ ಆದ ಸಪ್ತವೃಷಭಗಳನ್ನು ಅಡಗಿಸಿದ ವೃತ್ತಾಂತ

ವನ್ನು ಇಲ್ಲಿ ವರ್ಣಿಸಿದ್ದಾರೆ. ನಪ್ಪಿನ್ನೈಯೊಡನೆ ವಿವಾಹಮಂಗಲವನ್ನು ಸ್ವಾಮಿ ನೆರವೇರಿಸಿಕೊಂಡ. ಅಲ್ಲಿನ ಉನ್ನತವಾದ ತೋಟಗಳು ಆಕಾಶದುದ್ದಕ್ಕೂ ಬೆಳೆದಿವೆಯಂತೆ. ಆ ತೋಟದಲ್ಲಿರುವ ಕುಸುಮಗಳ ಪರಿಮಳವನ್ನು ಮುಂದೆ ಮಾಡಿಕೊಂಡು ಅವು ಚಂದ್ರನ ಗತಿಯನ್ನು ಕುಂಠಿತಗೊಳಿಸುತ್ತಿವೆಯಂತೆ. ಆ ಪರಿಮಳಕ್ಕೆ ಮನಸೋತು ಮುಂದೆ ಹೋಗುವುದಕ್ಕಾಗದಂತೆ ಚಂದ್ರ ಅಲ್ಲೇ ನಿಂತು ಬಿಡುವನಂತೆ. ಆ ಕ್ಷೇತ್ರದಲ್ಲಿರುವ ಮಣಿಕ್ಯಖಚಿತವಾದ ಮಾಡಗಳಿಂದ ಸಂಪತ್ಪ್ರಕಾಶವನ್ನು ಹೊಂದಿದೆ. ಆ ಕ್ಷೇತ್ರದಲ್ಲಿ ನನ್ನಿಂದ ಸೇವೆ ಸಲ್ಲಿಸಿಕೊಂಡ ಅರವಿಂದನೇತ್ರನೇ ಆ ಶ್ರೀಕೃಷ್ಣಪರಮಾತ್ಮನು.

**ಕಲ್ಲೈ ಇಲಂಗುಂ ಅಹಲ್ ಅಲ್‌ಹುಲ್ ಕಮುಲಪ್ಪಾವೈ**
**ಕದಿರ್‌ಮುತ್ತ ವೆಳ್‌ನಹೈಯೊಳ್ ಕರುಂಗಣ್ ಆಯ್‌ಚ್ಚಿ**
**ಮುಲ್ಲೈ ಇಲಂಗುಂ ಒಳಿಮಣಿಪೂಣ್ ವಡಮುಂ ತೆಯ್‌ಪ್ಪ**
**ಮೂವಾದ ಮಕ್ಕೈ ನೆಡುಂದೋಳ್ ಮೂರ್ತಿ ಕಂಡೀರ್**
**ಮುಲ್ಲೈ ಇಲಂಗು ನಿರೈ ಶಂದಿಮಾಡಂ ವೀದಿ ಆಡಮಕ್ಕೈ**
**ಮುಡಮೊಟಿಯಾರ್ ಮುಹತ್ತು ಇರಂಡು**
**ಶಿಲೈ ವಿಲಂಗಿ ಮನಂ ಶಿರೈಕೊಂಡಿರುಕ್ಕುಂ ನಾಂಗೂರ್**
**ತಿರುತ್ತೆತ್ತಿಯಂಬಲತ್ತೆನ್ ಶೆಂಗಣ್‌ಮಾಲೇ** ॥೫॥

(ಮುಲ್ಲೈಇಲಂಗು) ಬೆಟ್ಟದಹಾಗೆ ಶೋಭಿಸುವ (ನಿರೈ ಶಂದಿ) ಸಾಲುಸಾಲಾಗಿ ಒಂದರೊಡನೊಂದು ಸೇರಿಕೊಂಡಿರುವ (ಮಾಡಂವೀದಿ) ಭವನಗಳಿರುವ ಬೀದಿಗಳಲ್ಲಿ (ಮಡಮೊಟಿಯಾರ್) ಮಧುರವಾದ ವಾಕ್ಕನ್ನುಳ್ಳ ಹೆಂಗಸರ (ಮುಹತ್ತು ಇರಂಡುಶಿಲೈ ವಿಲಂಗಿ) ಮುಖಗಳಲ್ಲಿರುವ ಎರಡು ಬಿಲ್ಲುಗಳನ್ನು ಹೋಲುವ ಹುಬ್ಬುಗಳು ಬಾಗಿದವುಗಳಾಗಿ (ಆಡಮಕ್ಕೈ ಮನಂ) ಕಾಂತರುಗಳ ಮನಸ್ಸನ್ನು (ಶಿರೈಕೊಂಡಿರುಕ್ಕುಂ) ಸೆರೆ ಹಿಡಿದಿಟ್ಟಿರುವಂತಹ (ನಾಂಗೂರ್ ತಿರುತ್ತೆತ್ತಿಯಂ ಬಲತ್ತು ಎನ್‌ಶೆಂಗಣ್‌ಮಾಲ್) ನಾಂಗೂರಿನಲ್ಲಿರುವ ತಿರುತ್ತೆತ್ತಿಯಂಬಲವೆಂಬ ದಿವ್ಯಕ್ಷೇತ್ರದಲ್ಲಿರುವ ಪದ್ಮನೇತ್ರನಾದ ನಮ್ಮ ಸರ್ವಸ್ವಾಮಿಯು ಯಾರೆಂದರೆ—(ಕಲ್ಲೈ ಇಲಂಗುಂ) ಮೇಖಲೆಯು ಶೋಭಿಸುತ್ತಿರುವಂತಹ (ಅಹಲ್ ಅಲ್‌ಹುಲ್) ವಿಸ್ತಾರವಾದ ನಿತಂಬವನ್ನುಳ್ಳವಳೂ,

(ಕದಿರ್ ಮುತ್ತ ವೆಳ್‌ನಹೈಯರಾಳ್) ಪ್ರಕಾಶಯುಕ್ತವಾದ ಮುತ್ತುಗಳ ಹಾಗೆ ಬೆಳ್ಳಗಿರುವ ದಂತಪಂಕ್ತಿಯುಳ್ಳವಳೂ) ಆದ (ಕಮಲಪ್ಪಾವೈ) ಶ್ರೀದೇವಿಯು ಹಾಗೂ (ಕರುಕಣ್ ಆಯ್‌ಚ್ಚಿ) ಕಪ್ಪಾದ ಕಣ್ಣುಗಳನ್ನುಳ್ಳ ನಪ್ಪಿನ್ನೈದೇವಿಯು (ಮುಲೈ ಇಲಂಗುಂ)ಸ್ತನ ಮಂಡಲಗಳಲ್ಲಿ ಬೆಳಗುತ್ತಿರುವ (ಒಳಿಮಣಿ ಪೂನ್) ಸುಂದರವಾದ ರತ್ನಖಚಿತವಾದ ಕಂಠಿಕೆಯೂ (ವಡಮುಂ) ಹಾರವೂ (ತೆಯ್‌ಪ್ಪ) ಸಂಘರ್ಷಿಸಲು ಅದರಿಂದ (ಮೂವಾದ) ಕೊರೆಯಾಗದ ನಿತ್ಯಯೌವ್ವನವನ್ನುಳ್ಳ (ವರೈನೆಡು ತೋಳ್) ಬೆಟ್ಟದಂತೆ ಹೋಲುವ ದೀರ್ಘವಾದ ಬಾಹುಗಳನ್ನುಳ್ಳ (ಮೂರ್ತಿ ಕಂಡೀರ್) ನಮ್ಮ ಸ್ವಾಮಿಯಿಂದು ಕಾಣಿರಿ.

ಹಿಂದಿನ ಪಾಶುರದಲ್ಲಿ ಗೋಪಕುಲಕ್ಕೆ ಸೇರಿದ ನಪ್ಪಿನ್ನೈದೇವಿಯನ್ನು ಅನುಸಂಧಾನ ಮಾಡಿದರು. ಈ ಪಾಶುರದಲ್ಲಿ ಯದುಕುಲಕ್ಕೆ ಸೇರಿದ ದೇವಿಯಾದ ರುಕ್ಮಿಣೀ ದೇವಿಯೊಡನೆ ವಿವಾಹವಾದುದನ್ನು ನೆನೆದು ಇವರಿಬ್ಬರೊಡನೆಯೂ ಸಂಶ್ಲೇಷಿಸಿದ ರೀತಿಯನ್ನು ಅನುಸಂಧಾನ ಮಾಡಿದ್ದಾರೆ. ಸ್ವಾಮಿಯ ದಿವ್ಯಮಂಗಳ ವಿಗ್ರಹವನ್ನು ನೋಡಿದಂತೆಯೇ ನೀಲಾದೇವಿಯ ಕಣ್ಣುಗಳು ನೀಲವಾಗಿ ಶೋಭಿಸಿವೆಯಂತೆ. ಆವನ ದೇಹದ ನೀಲಕಾಂತಿ ಅವಳ ಕಣ್ಣಿನಲ್ಲಿ ಊರಿರುವಂತಿದೆಯಂತೆ. ದೇವಿಯರಿಬ್ಬರೂ ಧರಿಸಿರುವ ರತ್ನಖಚಿತವಾದ ಹಾರಗಳೇನು, ತ್ರಿಸರ, ಪಂಚಸರ ಎನ್ನುವಂತಹ ಮುತ್ತಿನ ಸರಗಳೇನು ಇವುಗಳಿಂದ ಸ್ವಲ್ಪವೂ ಬಾಡದ ದೃಢವಾದ ತೋಳುಗಳನ್ನುಳ್ಳ ದಿವ್ಯಮಂಗಳ ವಿಗ್ರಹವನ್ನುಳ್ಳ ನಮ್ಮ ಸ್ವಾಮಿಯೇ ಇಲ್ಲಿ ನೆಲಸಿರುವ ಸರ್ವೇಶ್ವರ.

ಸ್ವಾಮಿಯು ಲೀಲಾವಿಹಾರಕ್ಕಾಗಿ ರಾಜಬೀದಿಯಲ್ಲಿ ದಯೆಮಾಡುವಾಗ ಭವ್ಯತೆಯನ್ನುಳ್ಳ ಸೂಕ್ತಿಗಳನ್ನೂ ದೃಷ್ಟಿಗಳನ್ನೂ ಉಳ್ಳ ಸ್ತ್ರೀಯರುಗಳ ಮುಖಮಂಡಲದಲ್ಲಿರುವ ಬಿಲ್ಲುಗಳೋಪಾದಿ ಇರುವ ಹುಬ್ಬುಗಳು ಬಾಗಿದವುಗಳಾಗಿ ಅವರ ಮನಸ್ಸುಗಳು ಆ ಸ್ವಾಮಿಯಲ್ಲಿ ಸೆರೆಹೋಗುವುವು ಎಂಬ ಅರ್ಥವೂ ಇಲ್ಲಿ ಧ್ವನಿಸುತ್ತದೆ.

ತಾನ್ ಪೋಲುಂ ಎನ್ರು ಎಟುನ್ದಾನ್ ತರಣಿಯೊಳನ್
ಅದುಕಣ್ಣು ತರಿತ್ತು ಇರುಪ್ಪಾನ್ ಅರಕ್ಕರ್ ತಂಗಳ್
ಕೋನ್‌ಪೋಲುಂ ಎನ್ರು ಎಟುನ್ದಾನ್ ಕುನ್ರಮ್ ಅನ್ನ
ಇರುಪದು ತೋಳುಡನ್ ತುಣಿತ್ತ ಒರುವನ್ ಕಂಡೀರ್
ಮಾನ್‌ಪೋಲುಂ ಮೆನ್‌ನೋಕ್ಕಿನ್ ಶೆಯ್ಯವಾಯಾರ್
ಮರಕತಂಪೋಲ್ ಮಡಕ್ಕಿಳಿಯೈ ಕ್ಕೈಮೇಲ್‌ಕೊಂಡು
ತೇನ್‌ಪೋಲುಂ ಮೆನ್‌ಮೊಟಿಲೈ ಪಯಿಱ್ರುಂ ನಾಂಗೂರ್
ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್‌ಮಾಲೇ ॥೬॥

(ಮಾನ್ ಪೋಲುಂ ಮೆನ್‌ನೋಕ್ಕಿನ್) ಜಿಂಕೆಯ ನೋಟದಂತೆ ಅಂದವಾದ ನೋಟಗಳನ್ನುಳ್ಳವರೂ (ಶೆಯ್ಯವಾಯಾರ್) ಕೆಂಪಾದ ಅಧರವನ್ನುಳ್ಳವರೂ ಆದ ಹೆಂಗಸರು (ಮರಕತಂ ಪೋಲ್) ಮರಕತದಂತೆ ಹಸಿರು ವರ್ಣಹೊಂದಿ (ಮಡಂ) ಸುಂದರವಾದ (ಕಿಳಿಯೈ) ಗಿಳಿಮರಿಯನ್ನು (ಕ್ಕೈಮೇಲ್‌ಕೊಂಡು) ತಮ್ಮ ಕೈಗಳಿನ ಮೇಲಿಟ್ಟುಕೊಂಡು (ತೇನ್‌ಪೋಲುಂ ಮೆಲ್‌ಮೊಟಿಲೈ) ಜೇನಿನಂತೆ ಸವಿಯಾದುದೂ, ಮೃದುವಾದುದೂ ಆದ ಮಾತುಗಳನ್ನು (ಪಯಿಱ್ರುಂ) ಕಲಿಸುವಂತಹ (ನಾಂಗೂರ್ ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್‌ಮಾಲ್) ನಾಂಗೂರ್ ಕ್ಷೇತ್ರದಲ್ಲಿರುವ ತಿರುತ್ತೆತ್ತಿಯಂಬಲವೆಂಬ ದಿವ್ಯ ಕ್ಷೇತ್ರದಲ್ಲಿರುವ ಸರ್ವೇಶ್ವರನಾದ ಪದ್ಮನಯನನು ಯಾರೆಂದರೆ—(ತರಣಿ ಆಳನ್ ತಾನ್ ಪೋಲುಂ ಎನ್ರು ಎಟುನ್ದಾನ್) 'ರಾಮನೆನ್ನುವ ಒಬ್ಬ ಮನುಷ್ಯನು ಭೂಮಿಯನ್ನೆಲ್ಲಾ ತಾನೇ ಆಳುವವನೆಂದು ನೆನೆದು ಅಹಂಕಾರ ಪಡುವನು. (ಅದು ಕಣ್ಣು) ಅದನ್ನು ತಿಳಿದೂ (ತರಿತ್ತು ಇರುಪ್ಪಾನ್) ಸಹಿಸಿಕೊಂಡಿರುವನು (ಅರಕ್ಕರ್ ತಂಗಳ್ ಕೋನ್ ಪೋಲುಂ) ರಾಕ್ಷಸರಿಗೆ ಚಕ್ರವರ್ತಿಯಾಗುವನೋ ?' (ಎನ್ರು) ಎಂದು ಈ ರೀತಿಯಲ್ಲಿ ಚಿಂತಿಸಿ (ಎಟುನ್ದಾನ್) ಎದ್ದುನಿಂತ ರಾವಣನ (ಕುನ್ರುಂ ಅನ್ನ) ಪರ್ವತಸಮಾನವಾದ (ಇರುಪದು ತೋಳ್) ಇಪ್ಪತ್ತು ತೋಳುಗಳನ್ನೂ (ಉಡನ್ ತುಣಿತ್ತ) ಏಕ ಕಾಲದಲ್ಲಿ ಕತ್ತರಿಸಿಹಾಕಿದ (ಒರುವನ್ ಕಂಡೀರ್) ಅದ್ವಿತೀಯನಾದ ವೀರನೆಂದು ಕಾಣಿರಿ.

'ತಾನ್‌ಪೋಲುಂ' ಎಂದು ಆರಂಭವಾಗುವ ಪದಪುಂಜ ರಾವಣನಮಾತು. ತನ್ನ ದುರ್ವಾನದಿಂದ ರಾವಣ—'ರಾಜ್ಯಭ್ರಷ್ಟರಾದ ತಾಪಸರು ತಾನೇ

ಇವರು. ಧರಣಿಯನ್ನಾಳುವವರೋ ಇವರು ?'—ಎಂದು ಎಣಿಸಿದನಂತೆ, 'ಯಾವನೋ ಒಬ್ಬ ಕ್ಷತ್ರಿಯ ಇವನು' ಎಂದು ಅವನು ರಾಮನನ್ನು ಎದುರಿಸಿದ. 'ತಾನು ರಾಕ್ಷಸರಾಜ'–ಎಂಬ ಗರ್ವದಿಂದ ಬಂದು ಎದುರಿಸಿದ ರಾವಣನ ಪರ್ವತೋಪಮವಾದ ಇಪ್ಪತ್ತು ಭುಜಗಳನ್ನು ಕತ್ತರಿಸಿಹಾಕಿದ ಮಹಾವೀರನೇ ಈ ಕ್ಷೇತ್ರದಲ್ಲಿರುವ ಸರ್ವೇಶ್ವರ.

ಆ ಕ್ಷೇತ್ರದಲ್ಲಿನ ಹೆಂಗಸರು ಗಿಣಿಗೆ ಶಿಕ್ಷಣ ಕೊಡುವುದು—'ಒಂದು ಗಿಳಿಗೆ ಮತ್ತೊಂದು ಗಿಳಿ ಕಲಿಸಿಕೊಟ್ಟಂತೆ ಇದೆಯಂತೆ. ಕಲಿತುಕೊಳ್ಳುವ ಗಿಳಿಯ ಮಾತಿಗಿಂತ ಕಲಿಸುವ ಇವಳ ಮಾತು ಮುದ್ದಾಗಿದೆಯಂತೆ. ಇಂಥ ದಿವ್ಯಕ್ಷೇತ್ರದಲ್ಲಿ ಆ ಸ್ವಾಮಿ ಸರ್ವರನ್ನೂ ಉದ್ಧರಿಸುವುದಕ್ಕಾಗಿ ಬಂದು ನೆಲಸಿದ್ದಾನೆ.

**ಪೊಂಗಿಲಂಗು ಪುರಿನೂಲುಂ ತೋಲುಂ ತಾಟಿ**
**ಪೊಲ್ಲಾದ ಕುರುಳುರುವಾಯ್ ಪೊರುನ್ದಾವಾಣನ್**
**ಮಂಗಲಂಶೇರ್ ಮರ್ರೈವೇಳ್ವಿ ಅದನುಳ್ ಪುಕ್ಕು**
**ಮಣ್ಣಹಲಂ ಕುರ್ರೈ ಅರಂದ ಮ್ಯೆಂದನ್ ಕಂಡೀರ್**
**ಕೊಂಗಲರ್ನ್ದ ಮಲರ್ ಕುಟಿಲಾರ್ ಕೊಂಗೈತೋಯ್ನ್ದ**
**ಕುಂಕುಮತ್ತಿನ್ ಕುಟಿಂಬು ಅಳೈನ್ದ ಕೋಲಂ ತನ್ನಾಲ್**
**ಶೆವ್ ಕಲಂಗಲ್ ವೆಣ್ಮಣಲ್ ಮೇಲ್ ತವಟುಂ ನಾಂಗೂರ್**
**ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್ಮಾಲೇ ॥೭॥**

(ಕೊಂಗು ಅಲರ್ನ್ದಮಲರ್) ಪರಿಮಳ ಹರಡುತ್ತಿರುವ ಹೂಗಳನ್ನು ಮುಡಿದ (ಕುಟಿಲಾರ್) ತಲೆಗೂದಲನ್ನುಳ್ಳ ಸ್ತ್ರೀಯರುಗಳ (ಕೊಂಗೈತೋಯ್ನ್ದ) ಸ್ತನಮಂಡಲಗಳಿಂದ ಸ್ರವಿಸಿದ (ಕುಂಕುಮತ್ತಿನ್‌ಕುಟಿಂಬು) ಕುಂಕುಮದ ಸಾರವು (ಅಳೈಂದ) ಮಿಶ್ರಗೊಂಡುದರ ಕಾರಣ (ಕೋಲಂತನ್ನಾಲ್) ಉಂಟಾದ ಚೆಲುವಿನಿಂದ (ಶೆವ್) ಕೆಂಪಾಗಿರುವ (ಕಲಂಗಲ್) ಜಲಪ್ರವಾಹವಾದುದು (ವೆಣ್ಮಣಲ್ ಮೇಲ್ ತವಟುಂ) ಬೆಳ್ಳಗಿರುವ ಮರಳಿನ ದಿಣ್ಣೆಗಳ ಮೇಲೆ ಹರಡುವಂತಹ (ನಾಂಗೂರ್ ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್ಮಾಲ್) ನಾಂಗೂರ್ ಕ್ಷೇತ್ರದಲ್ಲಿರುವ ತಿರುತ್ತೆತ್ತಿಯಂಬಲಂನಲ್ಲಿರುವ ನಮ್ಮ ಸರ್ವೇಶ್ವರ ನಾದ ಅರವಿಂದಾಕ್ಷನು ಯಾರೆಂದರೆ—(ಪೊಂಗು ಇಲಂಗು ಪುರಿನೂಲುಂ)

ಉಜ್ವಲವಾಗಿ ಶೋಭಿಸುತ್ತಿರುವ ಯಜ್ಞೋಪವೀತವನ್ನೂ (ತೋಲುಂ) ಕೃಷ್ಣಾಜಿನವನ್ನೂ (ತಾಟಿ) ತೂಗಿ ತೊನೆಯುವಂತೆ ಧರಿಸಿದ (ಪೊಲ್ಲಾದ ಕುರಳ್ ಉರುಆಯ್) ಸುಂದರನಾದ ವಾಮನಮೂರ್ತಿಯಾಗಿ (ಪೊರುನ್ದಾ ವಾಣನ್) ಅಸುರ ಪ್ರಕೃತಿಯಾದ ಮಹಾಬಲಿಯ (ಮಂಗಲಂಶೇರ್‌ಮಱೈ ವೇಳ್ವಿ ಅದನುಳ್) ಮಂಗಳತಂಗಿರುವ ವೇದಘೋಷವನ್ನುಳ್ಳ ಯಾಗಭೂಮಿ ಯಲ್ಲಿ (ಪ್ರಕ್ಕು) ಪ್ರವೇಶಿಸಿ (ಕುಱ್ಱ್) ತನಗೆ ಕೊರೆಯಾಗಿ ಬೇಕಾಗಿದ್ದ (ಮಣ್ ಅಹಲಂ ಇರನ್ದ) ಭೂಮಿಯನ್ನು ಯಾಚಿಸಿದ (ವ್ಮೆಂದನ್‌ಕಂಡೀರ್) ಸಮರ್ಥ ನಾದ ಕಿರು ಬಾಲಕನೆಂದು ಕಾಣಿರಿ.

ಹಿಂದಿನ ಪಾಶುರದಲ್ಲಿ ದೇವಿಗಾಗಿ ರಾವಣನ ಭುಜಗಳನ್ನು ಛೇದಿಸಿದು ದನ್ನು ಹೇಳಿದರು. ಈ ಪಾಶುರದಲ್ಲಿ ಅಂಥ ದೇವಿಯನ್ನೂ ಕೃಷ್ಣಾಜಿನದಿಂದ ಮರೆಸಿಕ್ಕೊಂಡು ಇಂದ್ರನಿಗಾಗಿ ಯಾಚಿಸಿದುದನ್ನು ವರ್ಣಿಸಿದ್ದಾರೆ. ಅತಿ ಮಾತ್ರವಾಗಿ ಪ್ರತಿಕೂಲರಾದವರನ್ನು ಆ ಸ್ವಾಮಿ ನಿಗ್ರಹಿಸಲು ಬಲ್ಲ. ಹಾಗೆಯೇ ಅನುಕೂಲರಂತೆ ಕಾಣುತ್ತಿರುವವರನ್ನು ಉಪಾಯದಿಂದಲೂ ಗೆಲ್ಲ ಬಲ್ಲ ಎಂದು ವಾಮನಾವತಾರದ ಅನುಸಂಧಾನ ಮಾಡಿದ್ದಾರೆ. ವಾಮನನ ರೂಪವನ್ನು 'ಪೊಲ್ಲಾದ' ಎಂದು ವಿಪರೀತ ಲಕ್ಷಣೆಯಿಂದ ಹೇಳಿದ್ದಾರೆ. 'ಸುಂದರವಾದುದು' ಎಂದರೆ ಎಲ್ಲಿ ಜನರ ದೃಷ್ಟಿತಾಕುವುದೋ ಎಂದು ಹೀಗೆ ಹೇಳುತ್ತಾರೆ. ಬಲಿ ಆಚರಿಸುತ್ತಿದ್ದ ಯಾಗ ಮಂಗಳಮಯವಾಗಿತ್ತು, ಎಂದು ಹೇಳುವುದಕ್ಕೆ ಏನೂ ಕೊರೆಯಿಲ್ಲವಷ್ಟೇ ? ಏಕೆಂದರೆ ಸರ್ವೇಶ್ವರನೇ ಅಲ್ಲಿಗೆ ಹೋಗುವಂತಾದ ಯಾಗ ಅದು ! ಮಹಾಬಲವನ್ನುತಾನುಳ್ಳವನಾದರೂ ಕೊರೆ ಉಳ್ಳವನಂತೆ ಸ್ವಾಮಿ ಅವನಲ್ಲಿ ಮೂರಡಿ ನೆಲವನ್ನು ಯಾಚಿಸಿದ ! ಆ ಊರಿನ ಸ್ತ್ರೀಗಳು ನದಿಯಲ್ಲಿ ಅವಗಾಹನ ಸ್ನಾನ ಮಾಡಲು ಅವರ ಸ್ತನಮಂಡಲದ ಕುಂಕುಮಲೇಪಗಳು ಜಲದಲ್ಲಿ ಕರಗಿ ಸೇರಿದಾಗ ಪ್ರವಾಹವು ಕೆಸರಾಗಿ ಮೆಲ್ಲ ಮೆಲ್ಲನೆ ಹರಿದು ಬರುವುದಂತೆ ಮಾಳಲ ದಂಡೆಯ ಬಳಿ.

**ಶಿಲಂಬಿನಿಡೈ ಶಿರುಪರಲ್‌ಪೋಲ್ ಪೆರಿಯಮೇರು**
**ತಿರುಕ್ಕುಳಂಬಿಲ್ ಕಣಕಣಪ್ಪ ತಿರುವಾಕಾರಂ**
**ಕುಲುಂಗ ನಿಲಮಡಂದೈತನ್ನೈ ಇಡಂದು ಪುಲ್‌ಹಿ**
**ಕೋಟ್ಟಿಡೈವೈತ್ತು ಅರುಳಿಯ ಎನ್ ಕೋಮಾನ್ ಕಂಡೀರ್**

ಇಲಂಗಿಯೆ ನಾನ್‌ಮರ್ೈ ಅನೈತ್ತುಂ ಅಂಗಂಆರುಂ
ಏಟಿಃಶೈಯುಂ ಕೇಳ್ವಿಹಳುಂ ಎಣ್‌ದಿಕ್ಕು ಎಂಗುಂ
ಶಿಲಂಬಿಯ ನಲ್‌ಪೆರುಂ ಶೆಲ್ವಂ ತಿಹಟು ನಾಂಗೂರ್
ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್‌ಮಾಲೇ ॥೮॥

(ಇಲಂಗಿಯಂ) ಪರಮಪ್ರಮಾಣವಾಗಿ ಬೆಳಗುವ (ನಾಲ್‌ಮರ್ೈ ಅನೈತ್ತುಂ) ಚತುರ್ವೇದಗಳು, (ಅಂಗಂಆರೂ) ಆರು ವೇದಾಂಗಗಳು, (ಏಟ್‌ಇಶೈಯುಂ) ಸಪ್ತಸ್ವರಗಳು (ಕೇಳ್ವಿಹಳುಂ) ಇತಿಹಾಸ ಪುರಾಣಗಳು ಇವೆಲ್ಲಾ (ಎಣ್‌ದಿಕ್ಕು ಎಂಗುಂ ಶಿಲಂಬಿಯಂ) ಎಂಟು ದಿಕ್ಕುಗಳಲ್ಲೆಲ್ಲಾ ಪ್ರತಿಧ್ವನಿಸುತ್ತಿರುವಂಥದೂ, (ನಲ್‌ಪೆರುಂಶೆಲ್ವಂ) ಒಳ್ಳೆಯದಾದುದೂ ಅಪರಿಮಿತವಾದುದೂ ಆದ ಸಂಪತ್ತು (ತಿಹಟುಂ) ಬೆಳಗುತ್ತಿರುವುದೂ ಆದ (ನಾಂಗೂರ್ ತಿರುತ್ತೆತ್ತಿ ಅಂಬಲತ್ತು ಎನ್ ಶೆಂಗಣ್‌ಮಾಲ್) ನಾಂಗೂರಿನಲ್ಲಿರುವ ತಿರುತ್ತೆತ್ತಿಯಂಬಲಂನಲ್ಲಿರುವ ನಮ್ಮ ಸ್ವಾಮಿಯಾದ ಪದ್ಮಲೋಚನನು ಯಾರೆಂದರೆ—(ಶಿಲಂಬಿನ್‌ಇಡೈ) ಕಾಲ್ಕಡಗದ ನಡುವೆ ಇಟ್ಟ (ಶಿರುಪರಲ್‌ಪೋಲ್) ಚಿಕ್ಕ ರತ್ನದೋಪಾದಿಯಲ್ಲಿ (ಪೆರಿಯ ಮೇರು) ಅತ್ಯಂತ ದೊಡ್ಡದಾದ ಮೇರು ಪರ್ವತ (ತಿರುಕ್ಕುಳಂಬಿಲ್) ಚೆಲುವಾದ ಪಾದದಲ್ಲಿ (ಕಣಕಣಪ್ಪ) ಝಣಝಣವೆಂದು ಶಬ್ದಿಸುವಂತೆಯೂ (ತಿರು ಅಕಾರಂ ಕುಲುಂಗ) ಶ್ರೀದೇವಿಯು ಇರುತ್ತಿರುವ ನಿಲುವೂ ಕುಲುಕು ವಂತೆ (ನಿಲಂ ಮಡಂದೈತನೈ) ಭೂದೇವಿಯನ್ನು (ಇಡಂದು) ಕೋರೆಹಲ್ಲಿನಿಂದ ಚುಚ್ಚಿ ಎತ್ತಿ (ಪುಲ್‌ಹಿ) ಸಂಶ್ಲೇಷಿಸಿಕೊಂಡು (ಕೋಟ್ಟಿಡೈವೈತ್ತು ಅರುಳಿಯ) ಅವಳನ್ನು ಕೋರೆ ಹಲ್ಲಿನ ತುದಿಯಲ್ಲಿ ಸ್ಥಾಪಿಸಿಕೊಂಡ (ಎಮ್ ಕೋಮಾನ್ ಕಂಡೀರ್) ನಮ್ಮ ಸ್ವಾಮಿ ಎಂದು ತಿಳಿಯಿರಿ.

ಸ್ವಾಮಿ ಭೂಮಿಯನ್ನು ಆಳಿದ ಚೇಷ್ಟಿತವನ್ನು ನಿರೂಪಿಸುತ್ತಿದ್ದಂತೆಯೇ ಆ ಪ್ರಭು ಭೂಮಿಯನ್ನು ವರಾಹರೂಪಿಯಾಗಿ ದಂಷ್ಟ್ರಾಗ್ರದಮೇಲಿಟ್ಟು ಕೊಂಡು ಎತ್ತಿತಂದ ಚೇಷ್ಟಿತವನ್ನು ಸ್ಮರಿಸಿ ಅನುಸಂಧಾನ ಮಾಡಿದ್ದಾರೆ ಇಲ್ಲಿ. ಶ್ರೀವರಾಹನ ದಿವ್ಯಾದ್ಭುತರೂಪ ಎಷ್ಟು ಬೃಹತ್ತಾಗಿತ್ತೆಂಬುದನ್ನು ಇಲ್ಲಿ ಸೂಚಿಸಿದೆ. 'ಖುರಮಧ್ಯಗತೋ ಯಸ್ಯ ಮೇರುಃ ಕಣಕಣಾಯತೇ' ಎಂದು ಹೇಳಿದಂತೆ ಶ್ರೀವರಾಹನ ಪಾದದಲ್ಲಿ ಮೇರು ಒಂದು ಕಣವಾಗಿ

ಕಡಗದನಡುವೆ ಕೆತ್ತಿದ ರತ್ನದೋಪಾದಿ ಆಯಿತು. ಆ ವೇಗದಲ್ಲಿ ವಕ್ಷಃ ಸ್ಥಲ ಗತೆಯಾದ ಶ್ರೀದೇವಿಯ ದಿವ್ಯಮಂಗಳ ವಿಗ್ರಹವೂ ಸ್ವಲ್ಪ ಅಲುಗಾಡಿತಂತೆ. ದಂಷ್ಟ್ರಾಗ್ರದಲ್ಲಿ ನೀಲಮಣಿಯು ಅಲಂಕಾರ ಮಾಡಿದಂತೆ, ಭೂದೇವಿಯನ್ನೆತ್ತಿ ಕೊಂಡು ಬಂದ ಸ್ವಾಮಿ ತನ್ನ ಈ ದಿವ್ಯ ಚೇಷ್ಟಿತದಿಂದ ನನ್ನನ್ನು ದಾಸನನ್ನಾಗಿ ಮಾಡಿಕೊಂಡುಬಿಟ್ಟ. ಅಂಥ ನನ್ನ ಸ್ವಾಮಿಯೇ ಈ ದಿವ್ಯಕ್ಷೇತ್ರದಲ್ಲಿ ಭಕ್ತ ಜನರ ಆರ್ತಿಯನ್ನು ಹೋಗಲಾಡಿಸಲು ನೆಲಸಿದ್ದಾನೆ.

**ಏಳುಲಹುಂ ತಾಳ್‌ವರೈಯುಂ ಎಂಗುಂ ಮೂಡಿ**
**ಎಣ್ ತಿಶೈಯುಮ್ ಮಂಡಲಮುಂಮುಂಡಿ, ಅಂಡಂ**
**ಮೋಟ್ಟೈ ಯೆಟುನ್ದ ಆಟಿ ಮಿಹುಂ ಊಟಿನೆಳ್ಳಂ**
**ಮುನ್ ಅಹಟ್ಟಿಲ್ ಒಡುಂಗಿಯೆ ಎಮ್‌ಮೂರ್ತಿ ಕಂಡೀರ್**
**ಊಟಿತೋರುಂ ಊಟಿತೋರುಂ ಉಯರ್‌ನ್ದ ಶೆಲ್ವತ್ತು**
**ಓಂಗಿಯ ನಾರ್ಮರೈ ಅನೈತ್ತುಂ ತಾಂಗು ನಾವರ್**
**ಶೇಟುಯರ್‌ನ್ದ ಮಣಿಮಾಡಂ ತಿಹಟುಂ ನಾಂಗೂರ್**
**ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್‌ಮಾಲೇ** ॥೯॥

(ಊಟಿತೋರುಂ ಊಟಿತೋರುಂ) ಪ್ರತಿಯೊಂದು ಬ್ರಹ್ಮಕಲ್ಪದಲ್ಲಿಯೂ (ಉಯರ್‌ನ್ದ) ಅಭಿವೃದ್ಧಿ ಆಗಿ ಬರುತ್ತಿರುವ (ಶೆಲ್ವತ್ತು) ಸಂಪತ್ತನ್ನುಳ್ಳವರಾಗಿ (ಓಂಗಿಯನಾರ್ ಮರೈಅನೈತ್ತುಂ ತಾಂಗುನಾವರ್) ಶ್ರೇಷ್ಠವಾದ ವೇದಗಳೆಲ್ಲವನ್ನೂ ನಾಲಗೆಯ ಮೇಲೆ ಧರಿಸಿರುವ ವೈದಿಕರುಗಳು ಇರುವಂಥದೂ (ಶೇಟುಯರ್‌ನ್ದ ಮಣಿಮಾಡಂ ತಿಹಟುಮ್) ಬಹಳ ಉನ್ನತವಾದ ಮಣಿಖಚಿತವಾದ ಉಪ್ಪರಿಗೆಯ ಮನೆಗಳಿಂದ ಬೆಳಗುತ್ತಿರುವುದೂ ಆದ (ನಾಂಗೂರ್ ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್‌ಮಾಲ್) ನಾಂಗೂರಿನಲ್ಲಿರುವ ತಿರುತ್ತೆತ್ತಿಯಂಬಲಂ ಕ್ಷೇತ್ರದಲ್ಲಿ ನೆಲಸಿರುವ ನಮ್ಮ ಪ್ರಭುವಾದ ಕಮಲನಯನನು ಯಾರೆಂದರೆ (ಏಳುಲಹಂ) ಸಪ್ತದ್ವೀಪಗಳು (ತಾಳ್‌ವರೈಯುಂ) ಪಕ್ಕದ ಚಿಕ್ಕ ಬೆಟ್ಟಗಳನ್ನುಳ್ಳ ದೊಡ್ಡ ಪರ್ವತಗಳು (ಎಂಗುಂ) ಎಂಬುವ ಈ ಪ್ರದೇಶಗಳೆಲ್ಲವನ್ನೂ (ಮೂಡಿ) ಆಕ್ರಮಿಸಿ (ಎಣ್ ತಿಶೈಯುಮ್) ಎಂಟು ದಿಕ್ಕುಗಳಲ್ಲಿಯೂ (ಮಣ್‌ತಲಮುಂ) ಎಲ್ಲ ಭೂಮಿಯಲ್ಲಿಯೂ, (ಅಂಡಂ) ಅಂಡದಲ್ಲಿಯೂ (ಮಂಡಿ) ಹರಡಿ (ಮೋಟ್ಟೈಯೆಟುನ್ದ) ಮೇಲೆ ಉಕ್ಕುವ ಬುಗ್ಗೆಯಾಗಿ

(ಆಟಿಮಿಹುಂ) ಸಮುದ್ರವು ವರ್ಧಿಸುವಂತಿದ್ದ (ಊಟಿವೆಳ್ಳಂ) ಪ್ರಳಯ ಕಾಲದ ಮಹಾಪ್ರವಾಹವನ್ನು (ಮುನ್) ಹಿಂದೊಂದು ಕಾಲದಲ್ಲಿ (ಅಹಟ್ಟಿಲ್ ಒಡುಂಗಿಯ) ತನ್ನ ಉದರದಲ್ಲಿ ಅಡಗಿಸಿಟ್ಟುಕೊಂಡ (ಎಮ್ ಮೂರ್ತಿ ಕಂಡೀರ್) ನಮ್ಮ ಸ್ವಾಮಿಯೇ ಎಂಬುದನ್ನು ಕಾಣಿರಿ.

ಪ್ರತಿಯೊಂದು ಬ್ರಹ್ಮಕಲ್ಪದಲ್ಲಿಯೂ ಹಿರಿಮೆಗಳಿಸಿದ ನಿತ್ಯವೂ ನಿರ್ದುಷ್ಟವೂ ನಿರತಿಶಯವೂ ಆದ ಸಂಪತ್ತಿನಿಂದ ಉತ್ಕರ್ಷಹೊಂದಿ ಅದರೊಡನೆ ವೇದವೆಲ್ಲವನ್ನು ಜಿಹ್ವಾಗ್ರದಲ್ಲಿ ಧರಿಸಬಲ್ಲವರಿಂದ ಕೂಡಿದುದು ಈ ಕ್ಷೇತ್ರ. ಗಗನಾಲೀಢ ಮಣಿಖಚಿತಮಾಡಗಳಿಂದ ಸುತ್ತುವರಿಯಲ್ಪಟ್ಟ ಈ ದಿವ್ಯ ಕ್ಷೇತ್ರದಲ್ಲಿರುವ ತಿರುತ್ತೆತ್ತಿಯಂಬಲಂನಲ್ಲಿರುವ ಸ್ವಾಮಿ ನನ್ನ ಮೇಲಿನ ಅತಿ ವಾತ್ಸಲ್ಯದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ನನ್ನನ್ನು ದಾಸ ನನ್ನಾಗಿ ಮಾಡಿಕೊಂಡವನಾಗಿದ್ದಾನೆ. ಅವನು ಯಾರೆಂದರೆ ಪ್ರಳಯ ಕಾಲ ದಲ್ಲಿ ಹರವಿರಿಂಚಿಮುಖಪ್ರಪಂಚವೆಲ್ಲವನ್ನೂ ತನ್ನ ಉದರದ ಏಕದೇಶದಲ್ಲಿಟ್ಟು ಕೊಂಡ ಅದ್ಭುತ ಚೇಷ್ಟಿತನಾದ ದೇವದೇವನೇ ಆಗಿದ್ದಾನೆ.

ಶೀರ್ ಅಣಿನ್ದ ಮಣಿಮಾಡಮ್ ತಿಹೞು ನಾಂಗೂರ್
ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್ ಮಾಲ್ಯೆ
ಕೂರಣಿನ್ದ ವೇಲ್ ವಲವನ್ ಆಲಿನಾಡನ್
ಕೊಡಿಮಾಡ ಮಂಗೈಯರ್ ಕೋನ್ ಕುರೈಯಲ್ ಆಳಿ
ವಾರ್ ಅಣಿನ್ದ ತೊಲ್ ಪುಹೞಾನ್ ಕಲಿಯನ್ ಶೊನ್ನ
ಪಾಮಾಲ್ಯೆ ಇವ್ವೈ ಐನ್ದುಂ ಐನ್ದುಂ ವಲ್ಲಾರ್
ಶೀರಣಿನ್ದ ಉಲಹತ್ತು ಮನ್ನರಾಹಿ ಶೇಣ್
ವಿಶುಂಬಿಲ್ ವಾನವರಾಯ್ ತಿಹೞ್ವರ್ ತಾಮೇ ॥೧೦॥

(ಶೀರ್ ಅಣಿನ್ದ) ಸಂಪದ್ಭರಿತವಾದ (ಮಣಿಮಾಡಂಗಳ್ ತಿಹೞುಂ) ಮಣಿಖಚಿತ ವಾದ ಭವನಗಳು ಪ್ರಕಾಶಿಸುತ್ತಿರುವ (ನಾಂಗೂರ್) ತಿರುನಾಂಗೂರಿನಲ್ಲಿರುವ (ತಿರುತ್ತೆತ್ತಿಯಂಬಲತ್ತು ಎನ್ ಶೆಂಗಣ್ ಮಾಲ್ಯೆ) ತಿರುತ್ತೆತ್ತಿಯಂಬಲಂ ಎನ್ನುವ ದಿವ್ಯಕ್ಷೇತ್ರದಲ್ಲಿ ದಯಮಾಡಿಸಿರುವ ನನ್ನ ಸ್ವಾಮಿಯಾದ ಕೆಂದಾವರೆ ಯಂತೆ ನೇತ್ರಗಳನ್ನುಳ್ಳ ಸ್ವಾಮಿಯನ್ನು ಕುರಿತು (ಕೂರ್ ಅಣಿನ್ದವೇಲ್

ವಲವನ್) ನಿಶಿತವಾದ ವೇಲಾಯುಧವನ್ನು ಆಳುವವರೂ (ಆಲಿನಾಡನ್ ತಿರುವಾಲಿ ನಾಡಿಗೆ ನಾಯಕರೂ, (ಕೊಡಿವಾಡಂ ಮಂಗೈಯರ್ ಕೋನ್) ಧ್ವಜಗಳು ಹಾರಾಡುತ್ತಿರುವ ಮಾಡಗಳನ್ನುಳ್ಳ ತಿರುಮಂಗೈಯಲ್ಲಿರುವವರಿಗೆ ನಿರ್ವಾಹಕರೂ (ಕುರೈಯಲ್ ಆಳಿ) ತಿರುಕ್ಕುರೈಯಲೂರನ್ನು ಆಳುವವರೂ (ಪಾರ್ ಅಣಿನ್ದ ತೊಲ್ ಪುಹೞಾನ್) ಭೂಮಿಗೆ ಅಲಂಕಾರವಾಗಿರುವ ಒಳ್ಳೆಯ ಕೀರ್ತಿಯನ್ನುಳ್ಳವರೂ ಆದ (ಕಲಿಯನ್) ತಿರುಮಂಗೈಆಳ್ವಾರ್ರುವರೇ (ಶೊನ ಪಾಮಾಲೈ ಇವೈ ಐನ್ದುಂ ಐನ್ದುಂ) ಅನುಗ್ರಹಿಸಿದ ಈ ಹತ್ತು ಪಾಶುರಗಳನ್ನು (ವಲ್ಲಾರ್‌ತಾಮ್) ಅಧ್ಯಯನ ಮಾಡಬಲ್ಲವರು (ಉಲಹತ್ತು) ಈ ಲೋಕದಲ್ಲಿ (ಶೀರ್ ಅಣಿನ್ದ ಮನ್ನರ್ಆಹಿ) ರಾಜರುಗಳಾಗಿ ಬಾಳಿ ಅನಂತರ (ಶೇಣ್ ವಿಶುಂಬಿಲ್) ಪರಮಾಕಾಶವೆನ್ನುವ ಪರಮ ಪದದಲ್ಲಿ (ವಾನವರ್ ಆಯ್) ನಿತ್ಯಸೂರಿಗಳೊಡನೆ ಸೇರಿಕೊಂಡು ಅವರಲ್ಲಿ ಒಬ್ಬರಾಗಿ (ತಿಹೞ್‌ವರ್) ಪ್ರಕಾಶಿಸುವರಾಗುತ್ತಾರೆ.

ಈ ದಶಕದಲ್ಲಿ ಸಂಪದ್ಭರಿತವಾದ, ಮಣಿಮಯಗಳಾದ ಭವನಗಳಿರುವ ತಿರುನಾಂಗೂರ್ ತಿರುತ್ತೆತ್ತಿಯಂಬಲದಲ್ಲಿರುವ ಪುಂಡರೀಕಾಕ್ಷನನ್ನು ಆಳ್ವಾರ್ರುವರು ಸ್ತುತಿಸಿದ್ದಾರೆ. ಇದನ್ನು ಅರ್ಥಸಂದರ್ಭ ಮತ್ತು ಛಂದಸ್ಸಂದರ್ಭ ದೊಡನೆ ಅಧ್ಯಯನ ಮಾಡುವವರು ಐಹಿಕದಲ್ಲಿ ಶ್ರೀವೈಷ್ಣವ ಶ್ರೀಯನ್ನುಳ್ಳ ಜನಕ್ಕೆ ನಿರ್ವಾಹಕರಾಗಿ ಕೊನೆಗೆ ಪರಮಪದದಲ್ಲಿ ನಿತ್ಯಸೂರಿಗಳ ಶ್ರೇಣಿಯಲ್ಲಿ ಸಲ್ಲುವವರಾಗುತ್ತಾರೆ.

---

### ನಾಲ್ಕನೆಯ ಪತ್ತು—ಐದನೆಯ ತಿರುಮೊೞಿ

# 'ತೂಮ್ಬುಡೈ'

## ಪ್ರವೇಶ

ಹಿಂದಿನ ದಶಕದಲ್ಲಿ 'ಶೆಂಗಣ್‌ಮಾಲೇ' ಎಂದು ಒತ್ತಿಹೇಳಿದುದು ಆದರಾತಿಶಯದಿಂದ. ಎಲ್ಲ ಅರ್ಚಾವತಾರಗಳೂ ಪ್ರಪತ್ತವ್ಯವಾದವುಗಳೇ. ಆ

ಸ್ವಾಮಿ ಸರ್ವನಿರ್ವಾಹಕನಾಗಿ, ಸರ್ವಾಪೇಕ್ಷಿತಪ್ರದನಾಗಿ, ಆಶ್ರಿತರ ವಿರೋಧಿ ಗಳನ್ನು ಹೋಗಲಾಡಿಸುವ ಸ್ವಭಾವದವನಾಗಿ 'ತಿರುಮಣಿಕ್ಕೂಡ'ದಲ್ಲಿ ನೆಲಸಿರುವುದನ್ನು ಅನುಸಂಧಾನಮಾಡಿ ತಮ್ಮ ಕೃತಜ್ಞತೆಯನ್ನು ಆ ಪರಮೋಪ ಕಾರಕನಲ್ಲಿ ಸಲ್ಲಿಸುತ್ತಾರೆ. ತಮಗೆ ಅನುಗ್ರಹ ಮಾಡುವುದಕ್ಕೇ ಇಲ್ಲಿ ಬಂದು ನೆಲಸಿದ್ದಾನೆ ಎಂದು ಹೃಷ್ಟರಾಗುತ್ತಾರೆ.

ತೊಮ್ಬುಡೈ ಪನೈಕ್ಕೈವೇಟಮ್ ತುಯರ್ ಕೆಡುತ್ತರುಳಿ ಮನ್ನು
ಕಾಮ್ಬುಡೈಕ್ಕುನ್ರಂ ಏನ್ದಿ ಕಡುಮಳೈಕಾತ್ತ ಎನ್ದೈ
ಪೂಮ್ಬುನಲ್ ಪೊನ್ನಿಮುತ್ತಂ ಪುಹುನ್ದು ಪೊನ್
ವರಣ್ಡ ಎಂಗುಂ
ತೇಮ್ಪೊಟಿಲ್ ಕಮಟುಂ ನಾಂಗೂರ್
ತಿರುಮಣಿಕ್ಕೂಡತ್ತಾನೇ ॥೧॥

(ತೊಂಬು ಉಡೈ ಪನೈಕ್ಕೈವೇಟಮ್) ರಂಧ್ರವನ್ನು ಹೊಂದಿರುವ ಪನೈ ಮರದಂತೆ ಸೊಂಡಿಲಿನ ತುದಿಯನ್ನುಳ್ಳ ಗಜೇಂದ್ರನ (ತುಯರ್) ದುಃಖವನ್ನು (ಕೆಡುತ್ತರುಳಿ) ಕಳೆದು ಅನುಗ್ರಹಿಸಿದವನೂ, (ಮನ್ನುಕಾಂಬು ಉಡೈಕುನ್ರಂ) ದೃಢವಾಗಿದ್ದ ಬಿದಿರುಗಳನ್ನುಳ್ಳ ಗೋವರ್ಧನ ಪರ್ವತವನ್ನು (ಏನ್ದಿ) ಕೊಡೆ ಯಂತೆ ಮೇಲೆತ್ತಿ ಹಿಡಿದು (ಕಡುಮಳೈ) ಉಗ್ರವಾದ ಮಳೆಯನ್ನು (ಕಾತ್ತ) ತಡೆದವನೂ ಆದ (ಎಂದೈ) ನಮ್ಮ ಸ್ವಾಮಿಯು ಎಲ್ಲಿರುವನೆಂದರೆ— (ಪೂಪೊನಲ್ಪೊನ್ನಿ) ಸುಂದರವಾದ ಜಲವನ್ನುಳ್ಳ ಕಾವೇರಿಯು (ಮುತ್ತಂ ಪುಹನ್ದು) ಎಲ್ಲೆಲ್ಲಿಯೂ ಪ್ರವಹಿಸಿ (ಪೊನ್ವರಣ್ಡ) ಸಿಕ್ಕಿದ ಪೊನ್ನೆಯನ್ನೆಲ್ಲಾ ತಂದು ದಡದ ಮೇಲೆ ತಳ್ಳುವಂಥದೂ, (ಎಂಗುಂ) ನೋಡಿದ ಜಾಗದಲ್ಲೆಲ್ಲ (ತೇಮ್ಪೊಟಿಲ್ಕಮಟುಮ್) ಜೇನು ತುಂಬಿರುವ ತೋಪುಗಳಲ್ಲಿ ಪರಿಮಳವು ಹರಡುತ್ತಿರುವಂಥದೂ ಆದ (ನಾಂಗೂರ್ ತಿರುಮಣಿಕೂಡತ್ತಾನ್) ತಿರು ನಾಂಗೂರಿನಲ್ಲಿ ತಿರುಮಣಿಕ್ಕೂಡಂ ಎನ್ನುವ ದಿವ್ಯಕ್ಷೇತ್ರದಲ್ಲಿದ್ದಾನೆ.

ಆಶ್ರಿತನಾದ ಗಜೇಂದ್ರನ ದುಃಖವನ್ನೂ ಗೋಪಾಲಕರಿಗೂ ಪಶುಗಳಿಗೂ ಬಂದ ಆಪತ್ತನ್ನೂ ಹೋಗಲಾಡಿಸಿದ ವೃತ್ತಾಂತದ ಅನುಸಂಧಾನ ಮಾಡಿದ್ದಾರೆ. ತನಗಾಗದವರನ್ನು ಸೆಳೆದು ಬಿಸಾಡುವ ಕೈಯ್ಯನುಳ್ಳ ಆನೆ ಅದು. ವಂದಿಸಿದ್ದ

ಆ ಆನೆ ಇತರರಿಂದ ಪರಿಭವವನ್ನು ಎಂದೂ ಕಂಡಿರಲಿಲ್ಲವಂತೆ. ಅದರ ದುಃಖವನ್ನು ಸ್ವಾಮಿ ಪರಿಹಾರಮಾಡಿದ. ನೆಲದಲ್ಲಿ ಬೇರುಬಿಟ್ಟಿದ್ದ ಬಿದಿರುಮೆಳೆಗಳನ್ನುಳ್ಳ ಗೋವರ್ಧನ ಪರ್ವತವನ್ನು ಕೊಡೆಯಂತೆ ಏಳು ಹಗಲುರಾತ್ರಿ ಎತ್ತಿ ಹಿಡಿದು ಅಪರಿಹರಣೀಯವಾದ ಮಳೆಯನ್ನು ಪರಿಹರಿಸಿದ ಪ್ರಭು ಅವನು. ಜಾಗ ಇರುವೆಡೆಯಲ್ಲೆಲ್ಲಾ ನುಗ್ಗಿ ಸಿಕ್ಕಿದ ಪೊನ್ನೈ ಮರಗಳನ್ನೆಲ್ಲಾ ಉರುಳಿಸಿಕೊಂಡು ಬಂದು ದಡದಲ್ಲಿ ಪೇರಿಸುವುದಂತೆ ಆ ಕ್ಷೇತ್ರದಲ್ಲಿ ಕನಕಸರಿತ್ತು.

ಕನ್ನೈವಾಳ್ ಎಯಿರು ವಲ್‌ಪೇಯ್ ಕದಿರ್‌ಮುಲ್ಲೈ
ಶುಪ್ಪೈತ್ತು, ಇಲಂಗೈ
ವಪ್ಪಿಯ ಇಡುಂಬೈ ತೀರ ಕಡುಂಗಣೈ ತುರಂದ ಎನ್ದೈ
ಕೊವ್ವೈವಾಯ್ ಮಹಳಿರ್ ಕೊಂಗೈ ಕುಂಕುಮಂ
ಕಟುವಿ ಪೋನ್ದ
ತೆಯ್‌ವನೀರ್ ಕಮುಟುನಾಂಗೂರ್ ತಿರುಮಣಿಕೂಡತ್ತಾನೇ
॥೨॥

(ಕವ್ವೈ) ಬಾಯಿಯಿಂದ ಶಬ್ದಾಡಂಬರ ಮಾಡುವವಳೂ (ವಾಳ್‌ಎಯಿರು) ಕತ್ತಿಯನ್ನು ಹೋಲುವಂತಹ ಹರಿತವಾದ ಹಲ್ಲುಗಳನ್ನುಳ್ಳವಳೂ (ವಲ್ ಪೇಯ್) ಕಠಿಣವಾದ ಮನಸ್ಸನ್ನುಳ್ಳವಳೂ ಆದ ಪೂತನಿಯ (ಕದಿರ್‌ಮುಲ್ಲೈ) ವಿಷಾನಲದಿಂದ ಜ್ವಲಿಸುವ ಮೊಲೆಯನ್ನು (ಶುಪ್ಪೈತ್ತು) ಹೀರಿ ಉಂಡವನೂ, (ಇಲಂಗೈವಪ್ಪಿಯ) ಲಂಕಾಪುರಿಗೆ ಉಂಟಾದ (ಇಡುಂಬೈ) ಆ ಲಂಕೆಯೇ ಸಹಿಸಲಾಗದಂತಹ ಕೇಡು (ತೀರ) ತೊಲಗಿಹೋಗುವಂತೆ (ಕಡುಂಗಣೈ) ಕ್ರೂರವಾದ ಬಾಣಗಳನ್ನು (ತುರಂದ) ಆ ಲಂಕೆಯ ಮೇಲೆ ಎಸೆದವನೂ ಆದ (ಎನ್ದೈ) ನಮ್ಮ ಸ್ವಾಮಿಯಾದವನು ಯಾವ ಸ್ಥಲದಲ್ಲಿದ್ದಾನೆ ಎಂದರೆ–(ಕೊವ್ವೈವಾಯ್ ಮಹಳೀರ್) ತೊಂಡೆಯ ಹಣ್ಣಿನಂತೆ ಬಾಯಿಯನ್ನುಳ್ಳ ಹೆಂಗಸರು (ಕೊಂಗೈ ಕುಂಕುಮಂ ಕಟುವಿ) ತಮ್ಮ ಸ್ತನತಟಗಳಿಂದ ಕುಂಕುಮ ಲೇಪವನ್ನು ತೊಳೆಯಲು (ಪೋನ್ದ) ಅದರೊಡನೆ ಕೂಡಿ ಹರಿಯುವಂತಹ (ತೆಯ್‌ವಂ ನೀರ್) ದಿವ್ಯವಾದ ತೀರ್ಥವು (ಕಮಟುಂ) ಸುವಾಸನೆಯನ್ನು ಹರಡುತ್ತಿರುವ (ನಾಂಗೈ ತಿರುಮಣಿಕ್ಕೂಡತ್ತಾನೇ) ನಾಂಗೂರ್ ಕ್ಷೇತ್ರದಲ್ಲಿರುವ ತಿರುಮಣಿ ಕೂಡತ್ತಾನ್ ಕ್ಷೇತ್ರವೇ ಆಗಿದೆ.

ತನಗೂ ತನ್ನ ದೇವಿಯಿಹಾದ ವೈದೇಹಿಗೂ ಬಂದ ಆಪತ್ತನ್ನು ಸ್ವಾಮಿ ಹೋಗಲಾಡಿಸಿ ಅದನ್ನು ನಾನು ಅನುಭವಿಸುವಂತೆ ಉಪಕಾರ ಮಾಡಿದವನು ಆ ಪ್ರಭು. ಯಶೋದೆಯನ್ನು ಅನುಕರಿಸಿ ಆ ಪೂತನಿ ಬಾಯಲ್ಲಿ ಶಬ್ದ ಮಾಡುತ್ತಾ ಬಂದಳಂತೆ. ವಿಷಾನಲದಿಂದ ಜ್ವಲಿಸುವಂತಿದ್ದ ಅವಳ ಸ್ತನವನ್ನು ಪಾನಮಾಡಿ ಅವಳ ಪ್ರಾಣವನ್ನೂ ಹೀರಿಕೊಂಡ ಅವನು. ದುರ್ವರ್ಗವಾದ ರಾಕ್ಷಸಜಾತಿ ತಪ್ಪದೆ ಇರುತ್ತಿದ್ದ ಜಾಗ ಆ ಲಂಕೆ—ಹುತ್ತದಲ್ಲಿ ಹಾವು ತಪ್ಪದೆ ಇರುತ್ತಿರುವ ಹಾಗೆ. 'ಸಂತಮೇನಂ ತತೋ ವಿದುಃ' ಎಂಬಂತೆ ಬ್ರಹ್ಮ ಜ್ಞಾನಿಗಳು ಇಲ್ಲದೆ ಇದ್ದುದರಿಂದ ಅಸ್ತು ಭೂತರಾದವರು ಇರುತ್ತಿದ್ದರೂ ಸಹ ಆ ಲಂಕೆ 'ನೇಯಮಸ್ತಿ ಪುರೀ ಲಂಕಾ' ಎಂಬುವಂತೆ ರಿಕ್ತವಾದ ಸ್ಥಲವೆನ್ನು ಮಂತಿದ್ದಿತಂತೆ. ಲಂಕೆಗೆ ರಾವಣನ ಸಂಬಂಧದಿಂದ ಬಂದ ದುಃಖ ಹೋಗುವಂತೆ ಬಾಣಪ್ರಯೋಗ ಮಾಡಿದ ಆ ಸರ್ವೇಶ್ವರ. ಅಂಥ ಸ್ವಾಮಿಯೇ ಇಲ್ಲಿ ತಿರುಮಣಿಕೂಡತ್ತಾನ್ ಆಗಿದ್ದಾನೆ.

**ಮಾಶೊಟಿಲ್ ಮಡಂಗಚ್ಚೆತ್ತು ಮರುತು ಇರನೆಡಂದು,**
**ವಲ್‌ಶಾಳ್**
**ಶೇ ತೊಟಿಲ್ ಶಿತೈತ್ತು ಪಿನ್ನೈಶೆವ್ವಿತೋಳ್ ಪುಣರ್‌ನ್ದ ಎನ್ದೈ**
**ನಾ ಶೊಟಿಲ್ ಮರೈವಲ್ಲಾರ್‌ಹಳ್ ನಯೆಂದು ಅರಂ**
**ಪಯಿನ್ದವಣ್ಣೈ**
**ತೀ ತೊಟಿಲ್ ಪಯಿಲುನಾಂಗೂರ್ ತಿರುಮಣಿ ಕೂಡತ್ತಾನೇ**
**॥೩॥**

(ಮಾ) ಅಶ್ವರೂಪಿಯಾಗಿ ಬಂದ ಕೇಶಿ ಎಂಬ ಅಸುರನ (ತೊಟಿಲ್ ಮಡಂಗ) ಪರಾಕ್ರಮ ಚೇಷ್ಟಿತಗಳೆಲ್ಲಾ ಅಡಗುವಂತೆಮಾಡಿ ಆ ಅಸುರನನ್ನು (ಶೆತ್ತು) ಸಂಹರಿಸಿದವನೂ, (ಮರುದು ಇರ ನಡಂದು) ಅರ್ಜುನ ವೃಕ್ಷಗಳು ಮುರಿದು ಬೀಳುವಂತೆ ನಡುವೆ ಅಂಬೆಗಾಲಿಡುತ್ತಾ ನಡೆದವನೂ, (ವಲ್‌ತಾಳ್) ಬಲಿಷ್ಠ ವಾದ ಕಾಲುಗಳನ್ನುಳ್ಳ (ಶೇ) ಸಪ್ತವೃಷಭಗಳ (ತೊಟಿಲ್‌ಶಿತೈತ್ತು) ವ್ಯಾಪಾರ ವನ್ನು ಭಂಗಗೊಳಿಸಿ (ಪಿನ್ನೈಶೆವ್ವಿತೋಳ್ ಪುಣರ್‌ನ್ದ) ನಪ್ಪಿನ್ನೈಪಿರಾಟ್ಟಿಯ ಚೆಲುವಾದ ತೋಳುಗಳೊಡನೆ ಸಂಶ್ಲೇಷ ಹೊಂದಿದವನೂ ಆದ (ಎನ್ದೈ) ನಮ್ಮ ಸ್ವಾಮಿ ಎಲ್ಲಿದ್ದಾನೆ ಎಂದರೆ—(ನಾ ತೊಟಿಲ್) ನಾಲಗೆಗೆ ವ್ಯಾಪಾರ

ವಾಗುವಂತೆ (ಮರ್ೈವಲ್ಲಾರ್‌ಹಳ್) ವೇದಗಳನ್ನು ಅಭ್ಯಾಸಮಾಡಿದವರೂ (ನಯಂನ್ದ ಅರಂ ಪಯಂಂದು) ಇಚ್ಛೆಯೊಡನೆ ಧರ್ಮಗಳನ್ನು ಅನುಷ್ಠಿಸಿ (ವನ್ ಕೈ) ಉದಾರವಾದ ಕೈಗಳಿಂದ (ತೀತೊಟಿಲ್) ಅಗ್ನಿಕಾರ್ಯಗಳನ್ನು (ಪಯಿಲುಂ) ಎಡೆಬಿಡದೆ ಮಾಡುತ್ತಿರುವ (ನಾಂಗೂರ್ ತಿರುಮಣಿಕ್ಕೂಡತ್ತಾನ್) ತಿರುನಾಂಗೂರಿನ ತಿರುಮಣಿಕ್ಕೂಡತ್ತಾನ್ ಕ್ಷೇತ್ರದಲ್ಲಿದ್ದಾನೆ.

ಕೇಶಿಮಥನನೂ ಉದಾರನೂ ಆದ ಸ್ವಾಮಿ ಇನ್ನೂ ನಡೆಯನ್ನು ಕಲಿಯುತ್ತಿದ್ದ ಕಾಲದಲ್ಲಿಯೇ ಅರ್ಜುನ ವೃಕ್ಷಗಳು ಮುರಿದು ಬೀಳುವಂತೆ ನಡೆಯನ್ನು ಕಲಿತನಂತೆ. ಮಣ್ಣಿನ ಬೊಂಬೆಗಳನ್ನು ನಾಶಪಡಿಸುವಂತೆ ಸಪ್ತ ವೃಷಭಗಳನ್ನು ಅನಾಯಾಸದಿಂದ ಸ್ವಾಮಿ ನಿರಸನಮಾಡಿದ. ಆ ಕ್ಷೇತ್ರದಲ್ಲಿರುವ ವೇದವಿದಗ್ರೇಸರರು ಆದರದಿಂದ ಧರ್ಮಾನುಷ್ಠಾನಮಾಡುವರು. ಭಗವತ್ಪಾರ ತಂತ್ರ್ಯಜ್ಞಾನವುಳ್ಳವರು ಅವರು. ಅನೃಶಂಸ್ಯಪ್ರಧಾನರಾಗಿ ಲೋಕೋಜ್ಜೀವನಕ್ಕಾಗಿ ವೇದದಲ್ಲಿ ವಿಧಿಸಿರುವ ಕರ್ಮಗಳನ್ನು ಅನುಷ್ಠಿಸುವವರು. ಆ ಊರಿನಲ್ಲಿರುವವರಿಗೆ ಅಧ್ಯಯನವೂ ಅನುಷ್ಠಾನವೂ ಯಾತ್ರೆಯಾದ ಹಾಗೆ ಆ ಸರ್ವೇಶ್ವರನಿಗೂ ಸಹ ಆಶ್ರಿತರಿಗಾಗಿಯೇ ವಿರೋಧಿನಿರಸನ ಮಾಡುವುದು ಯಾತ್ರೆಯಾಗಿರುವಂತಿದೆ.

**ತಾಂಗ ಅರು ಶಿನತ್ತು ವನ್‌ತಾಳ್ ತಡಕ್ಕೈ ಮಾ ಮರುಪ್ಪು ವಾಂಗಿ**
**ಪೂಂಗುರುನ್ದು ಒಶಿತ್ತು ಪುಳ್‌ವಾಯ್‌ಪಿಳನ್ದು ಎರುದು**
**ಅಡರ್‌ತ್ತ ಎನ್‌ದೈ**
**ಮಾಂಗನಿ ನುಹರ್‌ನ್ದ ಮಂದಿ ವಂದು ವಂಡಿರಿಯ ವಾಟ್ಚೈ**
**ತೀವಾ್‌ಕನಿ ನುಹರು ನಾಂಗೂರ್ ತಿರುಮಣಿಕ್ಕೂಡತ್ತಾನೇ**

॥೪॥

(ತಾಂಗ ಅರುಶಿನತ್ತು) ಯಾರಿಂದಲೂ ತಡೆಯಲಾಗದ ಕೋಪವನ್ನುಳ್ಳದೂ, (ವನ್‌ತಾಳ್) ತುಂಬ ಬಲಿಷ್ಠವಾದ ಕಾಲುಗಳನ್ನುಳ್ಳದೂ, (ತಡಕ್ಕೈ) ದೊಡ್ಡ ಸೊಂಡಿಲನ್ನುಳ್ಳದೂ ಆದ (ಮಾ) ಕುವಲಯಾಪೀಡವೆನ್ನುವ ಆನೆಯ (ಮರುಪ್ಪು ವಾಂಗಿ) ದಂತವನ್ನು ಕಿತ್ತು ಹಾಕಿದವನೂ, (ಪೂಕುರುಂದು ಒಶಿತ್ತು) ಹೂ ಬಿಟ್ಟ ಕುರುಂಕೃತ್ತಿಮರವನ್ನು ಮುರಿದು ಹಾಕಿದವನೂ, (ಪುಳ್‌ವಾಯ್

ಪಿಳಂದು) ಬಕಾಸುರನ ಬಾಯನ್ನು ಸೀಳಿದವನೂ, (ಎರುಂದು ಅಡರ್ತ) ಸಪ್ತ ವೃಷಭಗಳ ಬಲವನ್ನಡಗಿಸಿದವನೂ ಆದ (ಎನ್ದೈ) ನಮ್ಮ ಸ್ವಾಮಿಯು ಎಲ್ಲಿರು ತ್ತಿದ್ದಾನೆ ಎಂದರೆ—(ಮಾಕನಿ) ಮಾವಿನ ಹಣ್ಣುಗಳನ್ನು (ನುಹರ್ನ್ದ ಮಂದಿ) ಭುಂಜಿಸಿದ ಕಪಿಗಳು (ವಂದು) ಆ ಮಾವಿನ ಮರದಿಂದ ಬಾಳೆಯ ಗಿಡವನ್ನು ಬಂದು ಸೇರಿ (ವಂಡು ಇರಿಯ) ಅಲ್ಲಿದ್ದ ಭೃಂಗಗಳು ಚದುರಿಹೋಗುವಂತೆ (ತೀವರ್ ವಾಳೈಕನಿ) ಮಧುರವಾದ ಬಾಳೆಯ ಹಣ್ಣುಗಳನ್ನು (ನುಹರುಂ) ಭುಜಿಸುವಂತಹ (ನಾಂಗೂರ್ ತಿರುಮಣಿಕೂಡತ್ತಾನೇ) ನಾಂಗೂರಿನಲ್ಲಿರುವ ತಿರುಮಣಿಕೂಡವೆಂಬ ಕ್ಷೇತ್ರದಲ್ಲಿಯೇ.

ತನಗೂ, ನಪ್ಪಿನ್ನೈಪಿರಾಟ್ಟಿಗೂ ಇದ್ದ ವಿರೋಧಿಗಳನ್ನು ನಿರಸನ ಮಾಡಿದುದಷ್ಟೇ ಅಲ್ಲದೆ, ಮಧುರಾನಗರಿಯ ಸ್ತ್ರೀಗಳಿಗೆ ಒದಗಿದವಿಪತ್ತನ್ನು ಪರಿಹಾರ ಮಾಡಿ ಉಪಕಾರಕನಾದುದನ್ನು ಅನುಸಂಧಾನ ಮಾಡಿದ್ದಾರೆ. ಆಶ್ರಿತರ ವಿರೋಧಿಗಳನ್ನು ನಿರಸನ ಮಾಡುವುದರಿಂದಲ್ಲದೆ ಬೇರೆಯಾವುದ ರಿಂದಲೂ ಹೇಗೆ ಅವನು ಹೊತ್ತುಕಳೆಯಲಾರನೋ ಹಾಗೆಯೇ ಆ ಕ್ಷೇತ್ರದಲ್ಲಿ ರುವವರೂ ರಸಾನುಭವದಿಂದಲ್ಲದೆ ಬೇರೆಯಾವುದರಿಂದಲೂ ಹೊತ್ತು ಕಳೆಯು ವುದಕ್ಕಾಗದೆ ಇರುವರಂತೆ.

**ಕರುಮುಹಳ್ ಇಲಂಗೈಯಾಟ್ಟಿ ಪಿಲಂಕೊಳ್ ವಾಯ್ ತಿರಂದು,**
**ತನ್‌ಮೇಲ್**
**ವರುಮುಹಳ್ ಶೆವಿಯುಂ ಮೂಕ್ಕುಂ ವಾಳಿನಾಲ್ ತಡಿನ್ದಎನ್ದೈ**
**ಪೆರುಮುಹಳ್ ಪೇದೈ ಮಂಗೈ ಕನ್ನೊಡುಂ ಪಿರಿವಿಲಾದ**
**ತಿರುಮುಹಳ್ ಮರುವುನಾಂಗೂರ್ ತಿರುಮಣಿಕ್ಕೂಡತ್ತಾನೇ**
॥೫॥

(ಕರುಮುಹಳ್) ಚಂಡಾಲಸ್ತ್ರೀಯಂತೆ ತುಂಬ ಕೆಳಗಿನ ಕುಲದವಳಾಗಿ (ಇಲಂಗೈ ಯಾಟ್ಟಿ) ಲಂಕೆಯ ಮೇಲೆ ಅಧಿಕಾರಚಲಾಯಿಸುವವಳೂ, (ಪಿಲಂಕೊಳ್ ವಾಯ್‌ತಿರಂದು ತನ್‌ಮೇಲ್ ವರುಮುಹಳ್) ಗುಹೆಯಂತಿರುವ ಬಾಯನ್ನು ತೆರೆದುಕೊಂಡು ತನ್ನ ಮೇಲೆ ಆಕ್ರಮಿಸಿಬಂದವಳೂ ಆದ ಶೂರ್ಪಣಖಿಯ (ಶೆವಿಯುಂ ಮೂಕ್ಕುಂ) ಕಿವಿಯನ್ನೂ ಮೂಗನ್ನೂ (ವಾಳಿನಾಲ್ ತಡಿನ್ದಎನ್ದೈ)

ಕತ್ತಿಯಿಂದ ಕತ್ತರಿಸಿ ಹಾಕಿದ ನಮ್ಮ ಸ್ವಾಮಿ ಎಲ್ಲಿರುವನೆಂದರೆ—(ಪೆರುಮಹಳ್) ಹಿರಿಮೆಯನ್ನುಳ್ಳವಳೂ (ಪೇದೈ) ಆಶ್ರಿತರ ದೋಷಗಳನ್ನು ಅರಿಯದವಳಾಗಿರುವಳೂ ಆದ (ಮಂಗೈ) ಭೂದೇವಿಯೂ (ತಿರುಮಹಳ್) ಶ್ರೀದೇವಿಯೂ (ತನ್ನೊಡುಂ ಪಿರಿವುಇಲಾದ)ತನ್ನನ್ನು ಬಿಟ್ಟು ಒಂದುಕ್ಷಣವೂ ಇರಲಾರದವರಾಗಿ (ಮರುವುವನ್) ತನ್ನೊಡನೆ ಸೇರಿ ಇರುತ್ತಿರುವವರೂ ಆದ (ನಾಂಗೂರ್ ತಿರುಮಣಿಕ್ಕೂಡತ್ತಾನ್) ನಾಂಗೂರಿನಲ್ಲಿರುವ ತಿರುಮಣಿಕೂಡವೆಂಬ ಕ್ಷೇತ್ರದಲ್ಲಿಯೇ.

ರಾವಣನ ಜೊತೆಯಲ್ಲಿ ಹುಟ್ಟಿದವಳಾದುದರಿಂದ ಶೂರ್ಪಣಖಿ ಲಂಕೆಯಲ್ಲಿದ್ದವರೆಲ್ಲ ಕೊಂಡಾಡುವಂತಿದ್ದಳಂತೆ. ತನ್ನೊಡನೆ ಎಡೆಬಿಡದೆ ಇರುವ ಅನನ್ಯೆಯಾದ ದೇವಿಯ ಮೇಲೆ ಆಕ್ರಮಿಸಿದುದರಿಂದ ತನ್ನ ಮೇಲೆಯೇ ಆಕ್ರಮಣಮಾಡಿದಂತಾಯಿತು. 'ನನಗೆ ಎದುರಿಲ್ಲ' ಎಂದಿದ್ದ ಅವಳ ದುರ್ವಾನವನ್ನು ಖಂಡಿಸಿದ. ಅವಳ ಕಿವಿಮೂಗುಗಳನ್ನು ಕತ್ತರಿಸಿ ಹಾಕಿಸಿದನವನು. ಶ್ರೀಭೂಮಿದೇವಿಯೂ ಶ್ರೀದೇವಿಯೂ ಇಲ್ಲಿ ಸ್ವಾಮಿಯೊಡನೆ ನಿತ್ಯವಾಸ ಮಾಡುತ್ತಿದ್ದಾರೆ. ಆಶ್ರಿತರ ದೋಷಗಳನ್ನು ಇವರು ಎಂದೂ ನೋಡುವುದಿಲ್ಲ. ದಯಾಕ್ಷಮಾದಿಗುಣ ಪ್ರಚುರರಾಗಿರುವವರು ಇವರು. ಆಶ್ರಿತರ ದೋಷಗಳನ್ನು ತಮ್ಮ ವಲ್ಲಭನೂ ಎಣಿಸದಂತೆ ಅವನ ಮನವನ್ನು ಒಲಿಸುವರಿವರು. ಇವರೂ ಆದರಿಸಿ ಬಂದು ನೆಲಸಿರುವರು ಈ ತಿರುಮಣಿಕೂಡ ಕ್ಷೇತ್ರದಲ್ಲಿ.

**ಕೆಂಡೈಯುಂ ಕುರಳುಂ ಪುಳ್ಳುಂ ಕೇಟಲುಂ ಅರಿಯುಂ ಮಾವುಂ**
**ಅಂಡಮುಂ ಶುಡರುಂ ಅಲ್ಲಾ ಅತ್ತಲುಂ ಆಯ ಎನ್ದೈ**
**ಒಣ್ ತಿರಲ್ ತೆನ್ನನ್ ಓಡ ವಡಅರಶು ಓಟ್ಟಂ ಕಂಡ**
**ತಿಣ್ ತಿರಲಾಳರ್ ನಾಂಗೂರ್ ತಿರುಮಣಿಕ್ಕೂಡತ್ತಾನೇ ॥೬॥**

(ಕೆಂಡೈಯುಂ) ಮತ್ಸ್ಯವೂ (ಕುರಳುಂ) ವಾಮನನೂ (ಪುಳ್ಳುಂ) ಹಂಸಪಕ್ಷಿಯೂ (ಕೇಟಲುಂ) ವರಾಹನೂ, (ಅರಿಯುಂ) ನರಸಿಂಹನೂ, (ಮಾವುಂ) ಹಯಗ್ರೀವನೂ ಆಗಿ ಅವತರಿಸಿದವನಾಗಿ (ಅಂಡಮುಂ) ಬ್ರಹ್ಮಾಂಡವೂ (ಶುಡರುಂ) ಸೂರ್ಯ ಚಂದ್ರರುಗಳೂ (ಅಲ್ಲಾ ಅತ್ತಲುಂ) ಮತ್ತೆ ಇರುವ ಎಲ್ಲ ಶ್ರೇಷ್ಠ ವಸ್ತುಗಳೂ (ಆಯ) ತಾನೇ ಆಗಿರುವ (ಎನ್ದೈ) ನಮ್ಮ ಸ್ವಾಮಿಯು ಯಾವ

ಜಾಗದಲ್ಲಿರುವನೆಂದರೆ—(ಒಣ್‌ತಿರಲ್) ಅಧಿಕವಾದ ಬಲವನ್ನುಳ್ಳ (ತೆನ್ನನ್) ಪಾಂಡ್ಯರಾಜನು (ಓಡ) ಸೋತು ಓಡಿಹೋಗುವಂತೆ (ವಡಅರಶು) ಪಾಂಡ್ಯ ದೇಶಕ್ಕೆ ಉತ್ತರಕ್ಕಿರುವ ಚೋಳದೇಶಕ್ಕೆ ಅರಸಾದ ಚೋಳನನ್ನೂ (ಓಟ್ಟಂ ಕಂಡ) ಸೋತು ಓಡಿಹೋಗುವಂತೆ ಮಾಡಿದ (ತಿಣ್ ತಿರಲಾಳರ್) ಮಹಾ ಬಲಿಷ್ಠರು ವಾಸಿಸುತ್ತಿರುವ (ನಾಂಗೂರ್ ತಿರುಮಣಿಕ್ಕೂಡತ್ತಾನ್) ನಾಂಗೂರಿ ನಲ್ಲಿರುವ ತಿರುಮಣಿಕ್ಕೂಡ ಎಂಬ ಕ್ಷೇತ್ರದಲ್ಲಿಯೇ.

ರಾಮಕೃಷ್ಣಾದ್ಯನೇಕ ಅವತಾರಗಳಲ್ಲಿ ರಕ್ಷಕನಾದ ಆ ಸರ್ವಾಪೇಕ್ಷಿತ ಪ್ರದನೇ ತಾನೇ ಆಗಿರುವ ತನ್ನ ಆ ನಿಜರೂಪದಲ್ಲಿ ಎಲ್ಲರೂ ಕಾಣುವುದಕ್ಕಾಗು ವಂತೆ ಈ ಕ್ಷೇತ್ರದಲ್ಲಿ ನೆಲಸಿದ್ದಾನೆ ಎಂದು ಅನುಸಂಧಾನ ಮಾಡಿದ್ದಾರೆ. 'ಯದ್ಯದ್ವಿಭೂತಿಮತ್ ಸತ್ವಂ' ಎಂದು ಹೇಳಿದಂತೆ ಉಚ್ಛ್ರಿತವಾದ ಪದಾರ್ಥ ಗಳೆಲ್ಲವೂ ಅವನೇ ಎಂದು ಹೇಳುವುದಕ್ಕಾಗುವಂತೆ ಇರುವವನು ಅವನು. ಆ ಊರಿನಲ್ಲಿರುವ ಬ್ರಾಹ್ಮಣರು ಬಲಶಾಲಿಗಳಾಗಿ ರಾಜರುಗಳನ್ನು ಸೋಲಿಸು ವಂತಹವರಾಗುತ್ತಾರಂತೆ. ಅನ್ಯಾಯಮಾಡಿ ಭಗವದ್ ದ್ವೇಷಿಗಳಾದವರು ಹೀಗೆ ಪರಾಜಿತರಾಗುವರು. ಭಗವಂತನು ಅವತರಿಸಿ ಮಾಡಬೇಕಾದುದೆಲ್ಲವನ್ನೂ ಆ ಊರಿನಲ್ಲಿರುವ ಭಕ್ತೋತ್ತಮರೇ ಮಾಡಬಲ್ಲವರಾದರು.

**ಕುನ್ರಮುಮ್ ವಾನುಂ ಮಣ್ಣುಂ ಕುಳಿರ್‌ಪುನಲ್**
**ತಿಂಗಳೋಡು**
**ನಿನ್ರ ವೆಮ್‌ಶುಡರುಂ ಅಲ್ಲಾ ನಿಲೈಹಳುಂ ಆಯವೆನ್ದೈ**
**ಮನ್ರಮುಮ್ ವಯಲುಂಕಾವುಂ ಮಾಡಮುಂ**
**ಮಣಂಕೊಂಡು, ಎಂಗುಂ**
**ತೆನ್ರಲ್ ವಂದುಉಲವುಮ್ ನಾಂಗೂರ್**
**ತಿರುಮಣಿಕ್ಕೂಡತ್ತಾನೇ ॥೭॥**

(ಕುನ್ರಮುಂ) ಬೆಟ್ಟಗಳೂ, (ವಾನುಂ) ಆಕಾಶವೂ, (ಮಣ್ಣುಂ) ಭೂಮಿಯೂ, (ಕುಳಿರ್‌ಪುನಲ್) ಶೈತ್ಯಸ್ವಭಾವದ ಜಲವೂ (ತಿಂಗಳೋಡು ನಿನ್ರವೆಮ್ ಶುಡರುಂ) ಚಂದ್ರನೂ, ನೆಲೆನಿಂತಿರುವ ಸೂರ್ಯನೂ (ಅಲ್ಲಾ ನಿಲೈಹಳುಂ) ಮತ್ತೆ ಇರುವ ನಕ್ಷತ್ರ ಮೊದಲಾದವುಗಳ ಸ್ಥಿತಿಯೂ (ಆಯ) ತಾನೇ ಆಗಿರುತ್ತಿ ರುವ (ಎನ್ದೈ) ನಮ್ಮ ಸ್ವಾಮಿಯು ಯಾವ ಜಾಗದಲ್ಲಿರುವನೆಂದರೆ —(ಮನ್ರ

ವಂಂ) ದೊಡ್ಡ ಬೀದಿಗಳೂ (ವಯಲುಂ) ಗದ್ದೆಗಳೂ (ಕಾವುಂ) ತೋಟಗಳೂ (ಮಾಡಮುಂ) ಮಹಾಳಿಗೆ ಮನೆಗಳೂ (ಎಂಗುಂ) ಎಂಬುವ ಇವೆಲ್ಲ ಜಾಗಗಳಲ್ಲಿಯೂ (ತೆನ್ರಲ್) ತೆಂಕಣಗಾಳಿಯು (ಮಣಂಕೊಂಡು) ಪರಿಮಳವನ್ನು ಹರಡಿಕೊಂಡು (ವಂದು ಉಲವ್ರಂ) ಬಂದು ಬೀಸುವಂತಹ (ನಾಂಗೂರ್ ತಿರುಮಣಿಕೂಡತ್ತಾನೇ) ನಾಂಗೂರಿನಲ್ಲಿರುವ ತಿರುಮಣಿಕೂಡವೆಂಬ ಕ್ಷೇತ್ರದಲ್ಲಿಯೇ.

ಹಿಂದಿನ ಪಾಶುರದಲ್ಲಿ ಹೇಳಿದ ಸರ್ವನಿರ್ವಾಹಕತ್ವವನ್ನೂ, ಸರ್ವವೂ ಆವನಿಗೆ ಪ್ರಕಾರವಾಗಿರುವಿಕೆಯನ್ನೂ ಇಲ್ಲಿ ನಿರೂಪಿಸಿದ್ದಾರೆ. ಸರ್ವವೂ ಅವನಿಗೆ ಶರೀರವೇ ಆಗಿರುವುದರಿಂದ ಸಾಮಾನಾಧಿಕರಣ್ಯದಿಂದ ಎಲ್ಲವೂ ಅವನೇ ಆಗಿದ್ದಾನೆಂದು ಉಪನಿಷತ್ತುಗಳು ಉದ್ಘೋಷಿಸುವುದಕ್ಕನುಗುಣವಾಗಿಯೇ ಇದೆ ಈ ನಿರೂಪಣೆ. ಚೇತನರಿಗೆ ಭೋಗ್ಯಭೋಗೋಪಕರಣ ಭೋಗಸ್ಥಾನಗಳನ್ನು ಮಾಡಿಕೊಡುವಂತಹ ಬೆಟ್ಟಗಳೂ, ಅದಕ್ಕವಕಾಶಕೊಡುವ ಆಕಾಶವೂ ತಂಪನ್ನುಂಟುಮಾಡುವ ಜಲವೂ, ಶಾಖ ಕೊಡುವ ಆದಿತ್ಯನೂ, ಚೇತನರ ಜೀವನಕ್ಕೆ ಗುರುತಾದ ಒಳಿತು ಕೆಡಕುಗಳನ್ನು ಜ್ಞಾಪಕ ಮಾಡುವ ನಕ್ಷತ್ರಗಳೂ— ಇವೆಲ್ಲವೂ ಅವನೇ ಆಗಿದ್ದಾನೆ. ಎಂದರೆ ಇವೆಲ್ಲವನ್ನೂ ಅವನು ಶರೀರವನ್ನಾಗಿ ಹೊಂದಿದ್ದಾನೆ. ದಕ್ಷಿಣ ದಿಕ್ಕಿನಿಂದ ಬೀಸುವ ಗಾಳಿ ಪರಿಮಳವನ್ನೆಲ್ಲೆಲ್ಲಿಯೂ ಹರಡುವುದಂತೆ ಆ ಕ್ಷೇತ್ರದಲ್ಲಿ. ಅಂಥ ದಿವ್ಯಕ್ಷೇತ್ರದಲ್ಲಿರುವವನು ಆ ಸರ್ವಶರೀರಿಯೂ, ಸರ್ವನಿರ್ವಾಹಕನೂ ಆದ ಸ್ವಾಮಿಯೇ ಆಗಿದ್ದಾನೆ.

**ಶಂಗೈಯೆಯುಂ ತುಣಿವುಂ ಪೊಯ್ಯುಂ ಮೆಯ್ಯುಂ ಇತ್ತರಣಿ**
**ಓಮ್ಬುವತ್**
**ಪೊಂಗಿಯೆಮುಹಿಲುಂ ಅಲ್ಲಾ ಪೊರುಳ್‌ಹಳುಂ ಆಯ ಎನ್ದೈ**
**ಪೆಂಗಯೆಂ ಉಹುತ್ತ ತೇರಲ್ ಪರುಹಿಯೆ ವಾಳೈ ಪಾಯೆ**
**ಶೆವರ್‌ಕಯೆಲ್ ಉಹಳುಂ ನಾಂಗೂರ್**
**ತಿರುಮಣಿಕ್ಕೂಡತ್ತಾನೇ ॥೮॥**

(ಶಂಗೈಯುಂ) ಸಂದೇಹವೂ (ತುಣಿವುಂ) ನಿಶ್ಚಯವೂ (ಪೊಯ್ಯುಂ) ಅಸತ್ಯವೂ (ಮೆಯ್ಯುಂ) ಸತ್ಯವೂ (ಇತ್ತರಣಿ ಓಂಬುಂ) ಈ ಭೂಮಂಡಲವನ್ನು ರಕ್ಷಿಸುವ

(ಪ್ಪೊಂಗಿಯಂ ಮಂಹಿಲುಂ) ಹರಡಿರುವ ಮೇಘಗಳೂ (ಅಲ್ಲಾಪ್ಪೊರುಳ್‌ಹಳುಂ) ಮತ್ತೆ ಇರುವ ಎಲ್ಲ ವಸ್ತುಗಳೂ (ಆಯು ಎನ್ನೈ) ತಾನೇ ಆಗಿ ಇರುತ್ತಿರುವ ನಮ್ಮ ಸ್ವಾಮಿಯು ಯಾವ ಸ್ಥಲದಲ್ಲಿದ್ದಾನೆ ಎಂದರೆ—(ಪಂಗಯಂ ಉಹಂತ್ತ ತೇರಲ್) ತಾವರೆ ಹೂವು ಉಕ್ಕಿಸಿಹರಿಸಿದ ಮಕರಂದವನ್ನು (ಪರುಹಿಯವಾಳೈ) ಪಾನಮಾಡಿದ ವಾಳೈ ಎಂಬ ದೊಡ್ಡ ಮೀನುಗಳು (ಪಾಯ) ಮೇಲೂ ಕೆಳಗೂ ಹಾಯ್ದು ವಿಹರಿಸಲು (ಶೆಮ್‌ಕಯಲ್) ಕೆಂಬಣ್ಣದ ಸಣ್ಣಮೀನುಗಳು (ಉಹಳುಂ) ಚಿಮ್ಮುವಂತಹ (ನಾಂಗೂರ್ ತಿರುಮಣಿಕ್ಕೂಡತ್ತಾನೇ) ನಾಂಗೂರ್ ಕ್ಷೇತ್ರದಲ್ಲಿರುವ ತಿರುಮಣಿಕ್ಕೂಡವೆಂಬ ಕ್ಷೇತ್ರದಲ್ಲಿಯೇ.

ಸ್ವೇತರ ಸಮಸ್ತ ಪದಾರ್ಥಗಳಿಗೂ ನಿಯಾಮಕನಾಗಿ ಸರ್ವೇಶ್ವರನಿರು ವಾಗ ಈ ವಿಷಯದಲ್ಲಿ ಕೆಲವರು ಸಂದೇಹಿಸುತ್ತಾರೆ. 'ಸಂಶಯಾತ್ಮಾ ವಿನಶ್ಯತಿ' ಎಂಬಂತೆ ವಿನಾಶಕ್ಕೊಳಗಾಗುತ್ತಾರೆ. 'ವ್ಯವಸಾಯಾತ್ಮಿಕಾ ಬುದ್ಧಿರೇಕಾ' ಎಂಬಂತೆ ಕೆಲವರಿಗೆ ದೃಢವಾದ ನಿಶ್ಚಯವಿರುತ್ತದೆ. ಪ್ರಯೋಜನ ನಿರಪೇಕ್ಷ ವಾಗಿ ಅಹಿತವಾದ ಅನೃತವನ್ನು ಕೆಲವರಾಡುತ್ತಾರೆ. ಕೆಲವರು ಹಿತರೂಪವಾದ ಸತ್ಯವನ್ನಾಡುತ್ತಾರೆ. ಲೋಕವನ್ನು ರಕ್ಷಿಸುವಂತ ಮೇಘಗಳು ವರ್ಷಿಸುವ ದೈವಿಕವಾದ ವೃಷ್ಟಿಗಳಲ್ಲಿ ಕೆಲವರು ಜೀವಿಸುತ್ತಾರೆ; ಮುಗಿದುಹೋಗುತ್ತಾರೆ. ಇದೆಲ್ಲವೂ ಅವನೇ ಆಗಿದ್ದಾನೆ ಎಂದರೆ ಚೇತನ ಕರ್ಮಾನುಸಾರಿಯಾಗಿ ಇವೆಲ್ಲ ವನ್ನೂ ನಿರ್ವಾಹಮಾಡುವ 'ಸರ್ವನಿಯಂತಾ' ಅವನೇ ಆಗಿದ್ದಾನೆ. ಅರವಿಂದ ದಿಂದ ಸ್ರವಿಸಿದ ಮಕರಂದ ಪಾನಮಾಡಿದ ದೊಡ್ಡಮೀನು ಆ ಮದದಿಂದ ಮೇಲೂ ಕೆಳಗೂ ಹಾಯಲು ಚಿಕ್ಕಚಿಕ್ಕ ಮೀನುಗಳು ಹೆದರಿ ತಮ್ಮ ಸ್ಥಾನದಿಂದ ಚಿಮ್ಮುತ್ತವಂತೆ ಆ ಕ್ಷೇತ್ರದಲ್ಲಿ.

ಪಾವಮುಂ ಅರಮುಮ್ ವೀಡುಂ ಇನ್ಬಮುಂ
ತುನ್ಬಮ್‌ತಾನುಂ
ಕೋವಮುಂ ಅರುಳುಂ ಅಲ್ಲಾ ಕ್ಕುಣಂಗಳುಂ ಆಯ ಎನ್ನೈ
ಮೂವರಿಲ್ ಎಂಗಳ್‌ಮೂರ್ತಿ ಇವನೆನೆ ಮುನಿವರೋಡು
ತೇವರ್ ವಂದಿರ್ರೈಂಜುಂ ನಾಂಗೂರ್ ತಿರುಮಣಿಕ್ಕೂಡತ್ತಾನೇ
॥೯॥

(ಪಾವಮುಂ ಅರಮುಂ) ಪಾಪವೂ ಪುಣ್ಯವೂ, (ವೀಡುಂ) ಮೋಕ್ಷವೂ (ಇನ್ಬಮುಂ) ಸುಖವೂ (ತುನ್ಬಂತಾನುಂ) ದುಃಖವೂ (ಕೋವಮುಂ ಅರುಳುಂ) ಕೋಪವೂ ಅನುಗ್ರಹವೂ, (ಅಲ್ಲಾ ಕುಣಂಗಳುಂ) ಮತ್ತೆ ಇರುವ ಸತ್ತ್ವ ಮೊದಲಾದ ಗುಣಗಳೂ (ಆಯ) ತಾನೇ ಆಗಿರುವ (ಎನ್ದೈ) ನಮ್ಮ ಸರ್ವೇಶ್ವರನು ಎಲ್ಲಿರುವನೆಂದರೆ–(ಮೂವರಿಲ್ ಎಂಗಳ್‌ಮೂರ್ತಿ) ತ್ರಿಮೂರ್ತಿಗಳಲ್ಲಿ ನಾವು ಆಶ್ರಯಿಸತಕ್ಕ ಮೂರ್ತಿಯು (ಇವನ್‌ಎನ) ! ಈ ವಿಷ್ಣುವೇ ಎಂದು ತಿಳಿದು (ಮುನಿವರೋಡು ತೇವರ್) ಮಹರ್ಷಿಗಳೂ ದೇವತೆಗಳೂ (ವಂದು ಇರೈಂಜುಂ) ಬಂದು ನಮಿಸುವಂತಹ (ನಾಂಗೂರ್ ತಿರುಮಣಿ ಕೂಡತ್ತಾನ್) ತಿರುನಾಂಗೂರಿನಲ್ಲಿರುವ ತಿರುಮಣಿಕ್ಕೂಡವೆನ್ನುವ ದಿವ್ಯ ಕ್ಷೇತ್ರವೇ.

ನಿಷಿದ್ಧಾನುಷ್ಠಾನ, ವಿಹಿತಾನುಷ್ಠಾನ, ಮೋಕ್ಷ, ಮೋಕ್ಷಕ್ಕೆ ಉಪಯೋಗಿಯಾದ ಆತ್ಮಗುಣಗಳು, ಅದಕ್ಕೆ ವಿರೋಧಿಯಾದ ಅನಾತ್ಮಗುಣಗಳು ಇವುಗಳಿಗೆಲ್ಲಾ ನಿಯಾಮಕನಾಗಿರುವವನು ಈ ಕ್ಷೇತ್ರದಲ್ಲಿದ್ದಾನೆ ಎಂದು ಅನುಸಂಧಾನ ಮಾಡುತ್ತಾರೆ. ಬ್ರಹ್ಮಾದಿಗಳಿಗೆ ಅಂತರಾತ್ಮನಾಗಿರುತ್ತಾ, ತನ್ನರೂಪದಿಂದ ಎಲ್ಲರನ್ನೂ ರಕ್ಷಿಸುವವನಾಗಿರುವುದರಿಂದ ಪ್ರಧಾನವಾಗಿ ತೋರುವ ಮೂರು ಮೂರ್ತಿಗಳಲ್ಲಿ ಸತ್ವಪ್ರಚುರರಾದ ನಮಗೆ ಇವನೇ ಆಶ್ರಯಣೀಯನೆಂದು ಸನಕಾದಿಗಳೊಡನೆ ಇಂದ್ರನೇ ಮೊದಲಾದ ದೇವತೆಗಳು ಬಂದು ಆಶ್ರಯಿಸುವುದಕ್ಕಾಗುವಂತೆ ಈ ದಿವ್ಯಕ್ಷೇತ್ರದಲ್ಲಿ ಅವನೇ ಬಂದು ನೆಲಸಿದ್ದಾನೆ.

**ತಿಂಗಳ್‌ಶೋಯು ಮಾಡ ನಾಂಗೂರ್ ತಿರುಮಣಿ**
**ಕ್ಕೂಡತ್ತಾನೈ**
**ಮುಂಗೈಯರ್ ತಲೈವನ್ ವಣ್‌ಶಾರ್ ಕಲಿಯನ್**
**ವಾಯೊಲಿಹಳ್‌ವಲ್ಲಾರ್**
**ಪೊಂಗುನೀರುಲಹಂ ಆಣ್ಡು ಪೊನ್‌ಉಲಹಾಣ್ಡು ಪಿನ್ನುಂ**
**ವೆಂಗದಿರ್ ಪರಿದಿವಟ್ಟತ್ತೂಡುಪೋಯ್ ವಿಳಂಗುವಾರೇ ॥೧೦॥**

(ತಿಂಗಳ್‌ತೋಯಂ) ಚಂದ್ರಮಂಡಲವನ್ನು ಹೋಗಿ ಮುಟ್ಟಿರುವ (ಮಾಡಂ) ಮಹಾಳಿಗೆ ಮನೆಗಳನ್ನುಳ್ಳ (ನಾಂಗೂರ್ ತಿರುಮಣಿಕ್ಕೂಡತ್ತಾನೈ) ನಾಂಗೂರಿ ನಲ್ಲಿರುವ ತಿರುಮಣಿಕ್ಕೂಡವೆನ್ನುವ ಕ್ಷೇತ್ರದಲ್ಲಿ ದಯಮಾಡಿರುವ ಸ್ವಾಮಿಯ ವಿಷಯವಾಗಿ (ಮಂಗೈಯರ್‌ತಲೈವನ್) ತಿರುಮಂಗೈಯಲ್ಲಿರುವವರಿಗೆ ನಿರ್ವಾಹಕರೂ, (ವಣ್‌ತಾರ್) ಸುಂದರವಾದ ಮಾಲೆಯನ್ನು ಧರಿಸಿರುವವರೂ ಆದ (ಕಲಿಯನ್‌ವಾಯ್) ತಿರುಮಂಗೈ ಆಳ್ವಾರ್ರವರು ಹಾಡಿ ಅನುಗ್ರಹಿಸಿದ (ಒಲಿಹಳ್‌ವಲ್ಲಾರ್) ಈ ಪಾಶುರಗಳನ್ನು ಓದಬಲ್ಲವರು (ಪೊಂಗುನೀರ್ ಉಲಹಂ) ಸಮುದ್ರದಿಂದ ಸುತ್ತುವರಿಯಲ್ಪಟ್ಟ ಈ ಲೋಕವನ್ನು (ಅಣ್ಡು) ಆಳಿ ಆದರನಂತರ (ಪೊನ್‌ಉಲಹುಆಣ್ಡು) ಸ್ವರ್ಗಲೋಕವನ್ನು ಅನುಭವಿಸಿ (ಪಿನ್ನುಂ) ಅದಕ್ಕೂಮೇಲೆ (ವೆಮ್‌ಕದಿರ್‌ಪರದಿವಟ್ಟತ್ತೂಡುಪೋಯ್) ಸುಡುವ ಕಿರಣಗಳನ್ನುಳ್ಳ ಸೂರ್ಯನ ಮಂಡಲವನ್ನು ಭೇದಿಸಿ ಆ ಮಾರ್ಗದಲ್ಲಿ ಹೋಗಿ (ವಿಳಂಗುವಾರ್) ಪರಮಪದದಲ್ಲಿ ಬಾಳುವವರಾಗುತ್ತಾರೆ.

ತಿರನಾಂಗೂರಿನಲ್ಲಿರುವ ತಿರುಮಣಿಕ್ಕೂಡವೆಂಬ ಕ್ಷೇತ್ರದಲ್ಲಿರುವ ಸ್ವಾಮಿ ಯನ್ನು ಕುರಿತು ತಿರುಮಂಗೈಯಲ್ಲಿರುವವರಿಗೆ ನಿರ್ವಾಹಕರೂ, ತಮ್ಮನ್ನು ಆಶ್ರಯಿಸಿದವರ ಪಾಪಗಳನ್ನು ಹೋಗಲಾಡಿಸುವ ಪಾವನತಮವಾದ ಪಾದ ಗಳನ್ನುಳ್ಳವರೂ, 'ಕಲಿಕನ್ರಿ' ಎಂದು ಪ್ರಸಿದ್ಧಿಯನ್ನುಳ್ಳವರೂ ಆದ ಆಳ್ವಾ ರ್‌ರವರು ಹಾಡಿದ ಈ ವಾಙ್ಮಯ ಶಬ್ದಸಂದರ್ಭಗಳನ್ನು ಅರಿಯಬಲ್ಲವರು ಈ ಲೋಕವನ್ನಾಳಿ, ಸ್ವರ್ಗವನ್ನು ನಿರ್ವಹಿಸಿ ಅದಕ್ಕೂಮೇಲೆ ಆದಿತ್ಯಮಂಡಲ ವನ್ನು ಭೇದಿಸಿಕೊಂಡು ಅರ್ಚಿರಾದಿ ಮಾರ್ಗದಲ್ಲಿ ಹೋಗಿ ಪರಮಪದವನ್ನು ಸೇರಿ ಸ್ವಸ್ವರೂಪಾವಿರ್ಭಾವ ಹೊಂದಿ ಉಜ್ವಲರಾಗುತ್ತಾರೆ. ಭಗವಂತನು ಸರ್ವನಿರ್ವಾಹಕ, ಸರ್ವಾಪೇಕ್ಷಿತಪ್ರದ ಎಂದ ಹೇಳಿರುವುದಕ್ಕನುಸಾರವಾಗಿ ಆಯಾ ಅಧಿಕಾರಿಗಳಿಗೆ ವಿರೋಧಿ ನಿವೃತ್ತಿ ಪೂರ್ವಕವಾಗಿ ಆಯಾ ಫಲಗಳನ್ನು ಅವನು ಕೊಡುವವನಾಗಿರುವುದರಿಂದ ಅಧಿಕಾರಿಭೇದವನ್ನು ಸೂಚಿಸಿ ಬೇರೆಬೇರೆ ಫಲಗಳನ್ನು ಉಲ್ಲೇಖಿಸಿದ್ದಾರೆ.

## ನಾಲ್ಕನೆಯ ಪತ್ತು—ಆರನೆಯ ತಿರುವೊೞಿ

# ತಾವಳನ್ದ

## ಪ್ರವೇಶ

ಭಗವಂತನ ವಿರಹವನ್ನು ಸಹಿಸಲಾರದವರಾಗಿಯೂ ಸಂಸಾರದಲ್ಲಿರಲು ಶಕ್ಯವಾಗದವರಾಗಿಯೂ ಆ ಭಗವಂತನನ್ನು ಪಡೆಯಲು ಒಂದು ಉಪಾಯವನ್ನು ಆಶ್ರಯಿಸಲು ಆೞ್ವಾರ್ ಅವರು ನಿಶ್ಚಯಿಸಿದರು. ಬೇಗ ಫಲಿಸುವ ಉಪಾಯವನ್ನು ತಾನೇ ಆಶ್ರಯಿಸಬೇಕು ? ಅದಾದರೂ ಅವನನ್ನೇ ಉಪಾಯವಾಗಬೇಕೆಂದು ಬೇಡುವುದೇ ತಾನೇ ? 'ತ್ವಮೇವ ಉಪಾಯಂ ಭೂತೋ ಮೇ ಭವ' ಎಂದು ಬೇಡಬೇಕು ಅವನಲ್ಲಿ, 'ಅಹಮಸ್ಮ್ಯಪರಾಧಾನಾಮಾಲಯಃ ಅಕಿಂಚನಃ ಅಗತಿಃ' ಎಂದು ತನ್ನ ರಕ್ಷಣೆಗೆ ತಾನೇ ಉಪಾಯ ನಲ್ಲವೆಂದೂ ತನಗೆ ಬೇರೆ ಯಾರೂ ರಕ್ಷಕರಾಗಲಾರರೆಂದೂ ನಿವೇದಿಸಲಾಗುವುದು. 'ನನಗೆ ನಾನೂ ರಕ್ಷಕನಲ್ಲ. ಬೇರೆಯವರೂ ನನಗೆ ರಕ್ಷಕರಿಲ್ಲ, ನೀನೇ ನನಗೆ ರಕ್ಷಕ' ಎಂದು ತಿರುಕ್ಕಾವಳಂಬಾಡಿಯಲ್ಲಿರುವ ಸ್ವಾಮಿಯ ಪಾದಾರವಿಂದಗಳಲ್ಲಿ ಆೞ್ವಾರ್ ಅವರು ಶರಣಾಗತಿಯನ್ನು ಮಾಡುತ್ತಾರೆ. 'ನಮ್ಮ ದಿವ್ಯಚೇಷ್ಟಿತಗಳಿಂದ ನಾವು ಹೇಗೆ ಉಪಾಯವಾಗಿದ್ದೇವೆ ಎಂಬುದನ್ನು ನಮಗೆ ತೋರಿಸಿಕೊಡಿ'—ಎಂದು ಸ್ವಾಮಿ ಕೇಳಿದ ಹಾಗೆ ಭಾವಿಸಿಕೊಂಡು ಅವನ ಅನುಗ್ರಹ ನಮ್ಮಮೇಲೆ ಉಂಟಾಗುವಂತೆಯೂ ಲೋಕದ ಜನರಿಗೆ ಅವನ ಉಪಾಯಭಾವದಲ್ಲಿ ಅರಿವು ಉಂಟಾಗುವಂತೆಯೂ ಅವನನ್ನೇ ಉದ್ದೇಶಿಸಿ ಈ ದಶಕದಲ್ಲಿ ಆೞ್ವಾರ್‌ರವರು ನಿರೂಪಿಸುತ್ತಾರೆ. ಭಗವಂತನ ಉಪಾಯ ಭಾವವನ್ನು ಸ್ಥಿರೀಕರಿಸುತ್ತಾರೆ.

**ತಾವಳನ್ದ ಉಲಹಂ ಮುತ್ತವತ್ ತಡಮಲರ್**
**ಪ್ಪೊಯ್‌ಹೈ ಪ್ಪುಕ್ಕು**
**ನಾವಳಂ ಪನಿನ್ದು ಅಂಗು ಏತ್ತ ನಾಹತ್ತಿನ್**
**ಪಡುಕ್ಕಂ ತೀರ್‌ತ್ತಾಯ್**

**ಮಾವಳಂ ಶೆರುಹಿಮುನ್ನು ಮಣ್ಣಿಯವರ್ ವಾಟಿಯ ನಾಂಗೈ**
**ಕಾವಳಂಪಾಡಿಮೇಯ ಕಣ್ಣನ್ ಕಳೈಕಣ್ ನೀಯೇ ॥೧॥**

(ಉಲಹಂ ಮುತ್ತಂ) ಲೋಕದಲ್ಲೆಲ್ಲಿಯೂ (ತಾವಳನ್ದು) ತಾವರೆ ಹೂವನ್ನು ಸಂಪಾದಿಸುವುದಕ್ಕಾಗಿ ತಿರಿದು (ತಡಂ ಮಲರ್ ಪೊಯ್‌ಹೈ) ದೊಡ್ಡದೊಡ್ಡ ಹೂಗಳನ್ನುಳ್ಳ ತಟಾಕವೊಂದರಲ್ಲಿ (ಪುಕ್ಕು) ಇಳಿದು (ಅಂಗು) ಅಲ್ಲಿ ಮೊಸಳೆಯಿಂದ ಹಿಡಿಯಲ್ಪಟ್ಟಾಗ (ನಾವಳಂ) ನಾಲಗೆಗೆ ಭೂಷಣಗಳಾದ ಶ್ರೀನಾಮಗಳನ್ನು (ನವಿನ್ರು ಏತ್ತ) ಹೇಳಿ ಸ್ತೋತ್ರಮಾಡಲು (ನಾಹತ್ತಿನ್ ನಡುಕ್ಕಂ ತೀರ್‌ತ್ತಾಯ್–) ಆ ಗಜೇಂದ್ರನ ಭಯವನ್ನು ಹೋಗಲಾಡಿಸಿದವನೇ, (ಮಾವಳಂ ಪೆರುಹಿ) ಅಪಾರವಾದ ಸಂಪತ್ತು ಅಧಿಕವಾಗಿ (ಮುನ್ನು) ನೆಲಸಿರುವಂತಹ (ಮಣ್ಣೈಯವರ್‌ವಾಟಿಯ) ವೈದಿಕರು ಬಾಳುತ್ತಿರುವಂತಹ ಸ್ಥಾನವಾದ (ನಾಂಗೈ ಕಾವಳಂ ಪಾಡಿಮೇಯ) ತಿರುನಾಂಗೂರಿನಲ್ಲಿ ತಿರುಕ್ಕಾವಳಂಬಾಡಿ ಎನ್ನುವ ದಿವ್ಯಕ್ಷೇತ್ರದಲ್ಲಿ ನಿತ್ಯವಾಸಮಾಡುತ್ತಿರುವ (ಕಣ್ಣನೇ) ಕೃಷ್ಣನೇ (ನೀಯೇ ಕಳೈಕಣ್) ನೀನೇ ನನಗೆ ರಕ್ಷಕನಾಗಬೇಕು.

ಮೊಸಳೆಯಿಂದ ಹಿಡಿಯಲ್ಪಟ್ಟಾಗ ಆನೆ ತನ್ನನ್ನು ರಕ್ಷಿಸಿಕೊಂಡಿತೇ ? ಆ ಮೊಸಳೆ ರಕ್ಷಕನಾಯಿತೇ ? ಬಾಧಕವಾದುದು ರಕ್ಷಕವಾಗಲಾರದು. ಆ ಆನೆಯ ಸ್ಥಾನದಲ್ಲಿ ನಾನಿದ್ದೇನೆ. ಮಿಕ್ಕವರೆಲ್ಲರೂ ಮೊಸಳೆಯ ಸ್ಥಾನದಲ್ಲಿದ್ದಾರೆ. ಇಂಥ ನನಗೆ ನಿನ್ನನ್ನು ಬಿಟ್ಟರೆ ರಕ್ಷಕರಿನ್ನಾರು ?

ನಿನ್ನ ಪಾದಗಳಿಗೆ ಸಮರ್ಪಿಸಲು ಹೂಗಳನ್ನು ಸಂಪಾದಿಸಲು ಲೋಕಲೋಕವನ್ನೆಲ್ಲಾ ಆ ಗಜೇಂದ್ರ ಅಲೆದು ಕೊನೆಗೆ ಒಂದೆಡೆ ಸರೋವರದಲ್ಲಿ ಚೆನ್ನಾಗಿ ಅರಳಿದ ದೊಡ್ಡದೊಡ್ಡ ಹೂಗಳನ್ನು ಕಂಡು, ಅಲ್ಲಿ ಮೊಸಳೆ ಇದೆ ಎಂಬುದನ್ನರಿಯದೆ ಅದನ್ನು ಪ್ರವೇಶಿಸಿಬಿಟ್ಟಿತು. ಆ ಆನೆ ನೀನು ಹೇಗೆ ಭೂಮಿಯನ್ನು ಅನಾಯಾಸೇನ ಅಳೆದುಕೊಂಡೆಯೋ ಹಾಗೆಯೇ ಅಳೆದು ಬಿಟ್ಟಿತು ! ಆಗ ಬೇರೆ ಗತಿಯನ್ನು ಕಾಣದ ಆನೆ ಪೂರ್ವಜನ್ಮವಾಸನೆಯ ಕಾರಣ ಜಿಹ್ವೆಗೆ ಭೂಷಣಪ್ರಾಯವಾದ ಶ್ರೀನಾಮಗಳನ್ನು ಹೇಳುತ್ತಾ 'ನಾರಾಯಣಾಖಿಲ ಗುರೋ ಭಗವನ್ನಮಸ್ತೇ', 'ನಾರಾಯಣಾವೋ' ಎಂದು ಆಕ್ರಂದಿಸಿ ನಿನ್ನಲ್ಲಿ ಶರಣುಹೋಯಿತು. ಆ ಗಜೇಂದ್ರನ ದುಃಖವನ್ನು ಪರಿಹರಿಸಿದವನು ನೀನೇ ತಾನೇ !

ತಿರುನಾಂಗೂರಿನ ತಿರುಕ್ಕಾವಳಂಬಾಡಿಯಲ್ಲಿರುವ ವೈದಿಕರು ಕಣ್ಣಿನಿಂದ ಕಂಡು ನಲಿಯುವಂತೆ ವೇದೈಕ ಸಮಧಿಗಮ್ಯನಾದ ಆ ಸ್ವಾಮಿ ಈ ಕ್ಷೇತ್ರದಲ್ಲಿ ನಿತ್ಯ ವಾಸಮಾಡುತ್ತಿದ್ದಾನೆ. ನಿನ್ನನ್ನು ಪ್ರೀತಿಸುವವರನ್ನು ಬಿಡಲಾರದೆ ಇರುವ ನೀನೇ ನನಗೆ ರಕ್ಷಕನಾಗಬೇಕು. 'ಮಾಮೇಕಂ' ಎಂದು ಹೇಳಿದವನು ನೀನೇ ತಾನೇ!

ಮಣ್ಣಿಡನ್ದು ಏನಮಾಹಿ ಮಾವಲಿವಲಿತೊಲೈಪ್ಪಾನ್
ವಿಣ್ಣವರ್ ವೇಣ್ಡಚ್ಚೆನ್ರು ವೇಳ್ವಿಯಿಲ್ ಕುರ್ರೈಇರನ್ದಾಯ್
ತುಣ್ಣೆನ ಮಾತ್ತಾರ್‌ತಮ್ಮೈ ತೊಲೈತ್ತವರ್ ನಾಂಗೈ ಮೇಯ
ಕಣ್ಣನೇ ಕಾವಳನ್ ತಣ್‌ಪಾಡಿಯಾಯ್ ಕಳೈಕಣ್ ನೀಯೇ
॥೨॥

(ಏನಂ ಆಹಿ) ಆದಿವರಾಹನಾಗಿ (ಮಣ್ ಇಡನ್ದು) ಅಂಡಭಿತ್ತಿಯಿಂದ ಭೂಮಿಯನ್ನು ಮೇಲೆತ್ತಿತಂದವನೂ, (ಮಾವಲಿ ವಲಿ) ಮಹಾಬಲಿಯ ಗರ್ವವನ್ನು (ತೊಲೈಪ್ಪಾನ್) ಹೋಗಲಾಡಿಸುವಂತೆ (ವಿಣ್ಣವರ್‌ವೇಣ್ಡ) ದೇವತೆಗಳು ಯಾಚಿಸಲು ಅದಕ್ಕನುಸಾರವಾಗಿ (ವೇಳ್‌ವಿಯಿಲ್ ಶೆನ್ರು) ಆ ಮಹಾಬಲಿಯ ಯಾಗಭೂಮಿಗೆ ಹೋಗಿ (ಕುರ್ರೈ ಇರಂದಾಯ್) ತನಗೆ ಬೇಕಾದುದನ್ನು ಯಾಚಿಸಿ ಪಡೆದವನೂ ಆದ ಸ್ವಾಮಿಯೇ, (ಮಾತ್ತಾರ್‌ತಮ್ಮೈ) ಶತ್ರುಗಳನ್ನು (ತುಣ್ಣೆನ) ಶೀಘ್ರವಾಗಿ (ತೊಲೈತ್ತವರ್) ಜಯಿಸಿ ನಾಶಗೊಳಿಸಿದವರು ಬಾಳುತ್ತಿರುವ (ನಾಂಗೈಮೇಯ) ತಿರುನಾಂಗೂರಿನಲ್ಲಿ ನೆಲಸಿರುವ (ಕಾವಳನ್‌ತಣ್ ಪಾಡಿಯಾಯ್ ಕಣ್ಣನೇ) ಕಾವಳಂಬಾಡಿಕ್ಷೇತ್ರದ ಸ್ವಾಮಿಯೇ, ಕಣ್ಣನೇ, (ನೀಯೇಕಳೈಕಣ್) ನೀನೇ ನನಗೆ ರಕ್ಷಕನಾಗಬೇಕು.

ಹಿಂದಿನ ಪಾಶುರದಲ್ಲಿ ಗಜೇಂದ್ರ ರಕ್ಷಣವನ್ನು ಮಾಡುವಾಗ ಸ್ವಾಮಿ ಗರುಡಾರೂಢನಾಗಿ ಶಂಖಚಕ್ರಾದಿ ದಿವ್ಯಾಯುಧಗಳನ್ನು ಧರಿಸಿ ತನ್ನ ನಿಜ ರೂಪದಲ್ಲಿ ರಕ್ಷಿಸಿದನೆಂದರು. ತನ್ನ ರೂಪವನ್ನು ಮರೆಸಿಕೊಂಡು ವಾಮನನಾಗಿ ಬಂದು ಆಪದ್ರಕ್ಷಣ ಮಾಡಿದುದನ್ನು ಅನುಸಂಧಾನಮಾಡಿ ಶರಣಾಗುತ್ತಾರೆ ಈ ಪಾಶುರದಲ್ಲಿ.

ಕಾವಲಿಗೆ ಇಟ್ಟ ಸಾಗರವೇ ಬಾಧಕವಾಗಿಹೋದಾಗ ನೀರಿಗೂ ಕೆಸರಿಗೂ ಕುಂದದ ರೂಪವನ್ನು ಧರಿಸಿ ಭೂಮಿಯನ್ನು ಅಂಡಭಿತ್ತಿಯಿಂದ ಬಿಡಿಸಿ ಮೇಲೆತ್ತಿ ತಂದು ರಕ್ಷಿಸಿದ ಆ ಸರ್ವೇಶ್ವರ. ಮಹಾಬಲಿಯಲ್ಲಿ ಔದಾರ್ಯವೆಂಬ ಗುಣ ವಿದ್ದುದರಿಂದ ಅವನನ್ನು ಆ ಲೋಕನಾಥ ರಾವಣಾದಿಗಳನ್ನು ಹೇಗೋ ಹಾಗೆ ವಧಿಸಲಿಲ್ಲ. ದೇವತೆಗಳನ್ನು ಬಲಿ ನುಚ್ಚುನೂರು ಮಾಡಿದ ಕಾರಣ ರಾವಣನ ಕೃತ್ಯವನ್ನು ಅವನು ಮಾಡಿದ್ದ. ಅವನನ್ನು ನಾಶಪಡಿಸಲಾರದೆ ಸ್ವಾಮಿ ತನ್ನನ್ನೇ ಕೊರೆಮಾಡಿಕೊಂಡ. ಕೊಟ್ಟುಕೊಟ್ಟು ಬೆಳೆದ ಕೈಯನ್ನು ಅವನ ಮುಂದೆ ಚಾಚಿ ಯಾಚಿಸಿದ. ಅವಾಪ್ತ ಸಮಸ್ತ ಕಾಮನಾದ ಅವನು ತನಗೆ ಕೊರೆಯಾಗಿದೆ ಎಂದು ಭಾವಿಸಿ ಬೇಡಿದ.

ಆ ಊರಿನಲ್ಲಿರುವವರು ಇಂದ್ರಾದಿಗಳಂತೆ ಅಲ್ಲ. ಭಗವಂತನನ್ನು ಅಪಾಯಕ್ಕೆ ಗುರಿಮಾಡಿ ಆ ಇಂದ್ರಾದಿಗಳು ಹೊಟ್ಟೆಹೊರೆಯುವರಷ್ಟೇ ? ಆ ಊರಿನವರು ತಮ್ಮನ್ನೇ ಅವನಿಗಾಗಿ ಅಪಾಯಕ್ಕೊಳಪಡಿಸಿಕೊಳ್ಳುವರು ಸುಗ್ರೀವಮಹಾರಾಜನ ಹಾಗೆ, 'ಆ ಊರಿನಲ್ಲಿರುವವರಲ್ಲಿ ಒಬ್ಬನಾದ ನೀನೇ ನನಗೆ ರಕ್ಷಕನಾಗಬೇಕು' ಎಂದು ಸ್ವಾಮಿಯಲ್ಲಿ ಇಲ್ಲಿ ಬೇಡಿದ್ದಾರೆ.

> ಉರುತ್ತು ಎೞುವಾಲಿ ಮಾರ್ಪಿಲ್ ಒರುಕಣೈ ಉರುವ ಓಟ್ಟಿ
> ಕರುತ್ತುಡೈ ತಂಬಿಕ್ಕು ಇನ್‌ಬಕ್ಕದಿರ್‌ಮುಡಿ ಅರಶಳಿತ್ತಾಯ್
> ಪರುತ್ತೋೞು ಪಲವುಂಮಾವುಂ ಪೞಂ ವಿೞುನ್ದೊೞುಹುನಾಂಗೈ
> ಕರುತ್ತನೇ ಕಾವಳನ್ದಣ್‌ಪಾಡಿಯಾಯ್ ಕಳೈಕಣ್‌ನೀಯೇ
> ॥ ೩ ॥

(ಉರುತ್ತು) ಕೋಪಗೊಂಡು (ಎೞು) ಎದ್ದು ಬಂದ (ವಾಲಿಮಾರ್ಪಿಲ್) ವಾಲಿಯ ವಕ್ಷಃಸ್ಥಲದಲ್ಲಿ (ಉರುವ) ನಾಟುವಂತೆ (ಒರುಕಣೈ) ಒಂದು ಬಾಣವನ್ನು (ಓಟ್ಟಿ) ಪ್ರಯೋಗಿಸಿ ಅವನನ್ನುವಧಿಸಿ (ಕರುತ್ತುಡೈತಂಬಿಕ್ಕು) ತನ್ನ ಇಷ್ಟಕ್ಕೆ ಹೊಂದಿಕೊಂಡಿರುವವನಾದ ಸುಗ್ರೀವನಿಗೆ (ಇನ್ಬಮ್) ಆನಂದ ಕರವಾದ (ಕದಿರ್‌ಮುಡಿ) ಪ್ರಕಾಶಯುಕ್ತವಾದ ಕಿರೀಟವನ್ನೂ (ಅರಶು) ರಾಜ್ಯವನ್ನೂ (ಅಳಿತ್ತಾಯ್) ಅನುಗ್ರಹಿಸಿದವನೇ, (ಪರುತ್ತೋೞು ಪಲವುಂ ಮಾವುಂ) ಸ್ಥೂಲವಾಗಿ ಅಂಕುರಿಸುವ ಹಲಸು ಮತ್ತು ಮಾವಿನ ಮರಗಳ (ಪೞಮ್) ಹಣ್ಣುಗಳು (ವಿೞುನ್ದು ಒೞುಹು) ಕೆಳಗೆ ಬಿದ್ದು ಮಧು ಪ್ರವಾಹ

ಪ್ರವಹಿಸುವ (ನಾಂಗೈ ಕಾವಳಂ ತಣ್‌ಪಾಡಿಯಾಯ್) ನಾಂಗೂರಿನಲ್ಲಿರುವ ತಣ್‌ಪಾಡಿಯಲ್ಲಿರುವ (ಕರುತ್ತನೇ) ಸಕಲ ಜಗತ್ಕರ್ತಾ ಆದವನೇ, (ನೀಯೇ ಕಳೈಕಣ್) ನೀನೇ ನನಗೆ ರಕ್ಷಕನು.

ವಾಲಿಯ ಬಲವನ್ನೂ ಶ್ರೀ ರಾಮನ ಮಾರ್ದವವನ್ನೂ ಕಂಡು 'ಈ ರಾಮನು ರಕ್ಷಕನಾಗಬಲ್ಲನೇ'—ಎಂದು ಸಂದೇಹಿಸಿದ ಸುಗ್ರೀವನಿಗೆ ಅನುಗ್ರಹ ಮಾಡಿದ ವೃತ್ತಾಂತವನ್ನು ಇಲ್ಲಿ ನಿರೂಪಿಸಿದ್ದಾರೆ. 'ಅಕಾಲದಲ್ಲಿ ಬಂದು ಕೂಗುವವರು ಯಾರು ?'—ಎಂದು ಅತಿಕೋಪದಿಂದ ಬಂದೆದುರಿಸಿದ ವಾಲಿಯನ್ನು ಕೈಗೆ ಸಿಕ್ಕಿದ ಬಾಣವೊಂದರಿಂದ ಶ್ರೀರಾಮ ವಧಿಸಿದ. ಆ ವಾಲಿಯ ರಾಜ್ಯದಲ್ಲಿ ತನಗಭಿಮತನಾದ ಸುಗ್ರೀವನನ್ನು ರಾಜನನ್ನಾಗಿ ಮಾಡಿದ ಶ್ರೀ ರಾಮ. 'ಶ್ರೀಮಂತಾ ರಾಜರಾಜೇನ ಲಂಕಾಯಾಂ ಅಭಿಷೇಚಿತಃ' ಎಂದು ಶುಕಸಾರಣರು ರಾವಣನಿಗೆ ವಿಭೀಷಣನ ಬಗೆಗೆ ತಿಳಿಸಿದರಷ್ಟೇ ? ಹಾಗೆ 'ಸುಗ್ರೀವಮೇವ ತದ್ರಾಜ್ಯೇ ರಾಘವಃ ಪ್ರತ್ಯಪಾದಯತ್'.

ಆ ಊರಿನಲ್ಲಿರುವ ಫಲವೃಕ್ಷಗಳೂ ಶ್ರೀ ರಾಮನ ರೀತಿ ಆಗಿದ್ದವಂತೆ. ಚಿಕ್ಕದಾಗಿ ತೋರುತ್ತಿದ್ದಂತೆಯೇ ಬೃಹತ್ತಾಗಿ ಬೆಳೆದು ಬಿಟ್ಟಿದ್ದವು ಅವು. ಅಶಕ್ತನು ಶಕ್ತನನ್ನು ತಾನೇ ಆಶ್ರಯಿಸುತ್ತಾನೆ ? ಹಾಗೆ ನಾನು ನಿನ್ನನ್ನು ಆಶ್ರಯಿಸಿದ್ದೇನೆ. 'ನೀನೇ ನನಗೆ ರಕ್ಷಕನಾಗಬೇಕು' ಎಂದು ಬೇಡಿದ್ದಾರೆ.

**ಮುನ್ನೈಮುಹತ್ತು ಅರಕ್ಕನ್ ಮಾಳಮುಡಿಹಳ್ ಪತ್ತರುತ್ತು**
**ವೀಟ್ತ್ತು ಅಂಗು**
**ಅನ್ನೈಯವರ್ಕ್ಕು ಇಳೈಯವರ್ಕ್ಕೇ ಅರಶಳಿತ್ತರುಳಿನಾನೇ**
**ಶುನ್ನೈಹಳಿಲ್ ಕಯಲ್‌ಹಳ್‌ಪಾಯ ಶುರುಂಬುತೇನ್**
**ನುಹರುಂನಾಂಗೈ**
**ಕನ್ನೈಕಟಲ್ ಕಾವಳನ್ ತಣ್‌ಪಾಡಿಯಾಯ್**
**ಕಳೈಕಣ್‌ನೀಯೇ ॥೪॥**

(ಅರಕ್ಕನ್) ರಾಕ್ಷಸಾಧಿಪನಾದ ರಾವಣನು (ಮುಂನೈಮುಹತ್ತುಮಾಳ) ಯುದ್ಧ ರಂಗದಲ್ಲಿ ಧ್ವಸ್ತನಾಗುವಂತೆ (ಮುಡಿಹಳ್‌ಪತ್ತು ಅರುತ್ತುವೀಟ್ತ್ತು) ಅವನ ಹತ್ತು ತಲೆಗಳನ್ನೂ ಕತ್ತರಿಸಿ ತಳ್ಳಿಹಾಕಿ(ಅಂಗು)ಆ ಲಂಕಾಪುರಿಯಲ್ಲಿ (ಅನ್ನೈಯ

ವಕರ್ಕ್ಕ್ಯ ಇಳ್ಳೈಯವರ್ಕ್ಕ್ಯ) ಆ ರಾವಣನ ತಮ್ಮನಾದ ವಿಭೀಷಣನಿಗೇ (ಅರಶು ಅಳಿತ್ತರುಳಿ ನಾನೇ) ಸಾಮ್ರಾಜ್ಯವನ್ನು ಅನುಗ್ರಹಿಸಿದವನೇ, (ಶುನ್ನೈಹಳಿಲ್ ಕೆಯಲ್‌ಹಳ್‌ಪಾಯ) ಜಲಾಶಯಗಳಲ್ಲಿ ಮತ್ಸ್ಯಗಳು ಭಯಗೊಂಡು ಚಿಮ್ಮಿ ಹೋಗುವಂತೆ (ಶುರುಂಬು ತೇನ್ ನುಹರು) ಭ್ರಮರಗಳು ಝೇಂಕರಿಸುತ್ತಾ ಸಂಭ್ರಮದಿಂದ ಮಧುಪಾನ ಮಾಡುವ ಜಾಗವಾದ (ನಾಂಗೈ) ತಿರುನಾಂಗೂರಿ ನಲ್ಲಿ (ಕನ್ನೈಕಟಿಲ್) ಆಭರಣಗಳಿಂದ ಅಲಂಕೃತನಾದ (ಕಾವಳಂ ತಣ್‌ಪಾಡಿ ಯಡಾಯ್) ತಿರುಕ್ಕಾವಳಂಬಾಡಿಯಲ್ಲಿರುವ ಸ್ವಾಮಿಯೇ (ನೀಯೇ ಕಳೈಕಣ್) ನೀನೇ ನನಗೆ ಶರಣ್ಯನು.

ವಾಲಿಯನ್ನು ವಧಿಸಿದಂತೆ ಅಲ್ಲದೆ ಯುದ್ಧರಂಗದಲ್ಲಿ ಭಯಂಕರವಾದ ಹೋರಾಟಮಾಡಿ ರಾವಣನನ್ನು ನಿರಸನ ಮಾಡಿದ್ದುದನ್ನು ಅನುಸಂಧಾನ ಮಾಡುತ್ತಾರೆ. 'ಪ್ರಾಣೇಭ್ಯೋಽಪಿ ಗರೀಯಸೀಂ' ಎಂಬಂತೆ ಇದ್ದ ಸೀತಾ ದೇವಿಯನ್ನೂ ತಮ್ಮನ್ನೂ ಅಗಲಿಸಿ ಮಹಾಪರಾಧ ಮಾಡಿದ ಆ ರಾವಣನ ತಮ್ಮನಿಗೆ ಆ ಲಂಕಾರಾಜ್ಯವನ್ನು ಸ್ವಾಮಿ ಅನುಗ್ರಹಿಸಿದನು. 'ವಿಭೀಷಣಸ್ತು ಧರ್ಮಾತ್ಮಾ' ಎಂದಲ್ಲವೇ ವಿಭೀಷಣನ ಗುಣಗಳನ್ನು ಕೊಂಡಾಡಿರುವುದು. ಅವನಲ್ಲಿ ದೋಷವನ್ನು ಹೇಗೆ ಹೇಳುವುದು ಎಂದರೆ—'ತಾವು ಇಲ್ಲಿ ಶರಣಾಗತಿ ಮಾಡುತ್ತಿರುವುದರಿಂದ ತಮಗೆ ದೃಷ್ಟಾಂತವಾಗಿರುವವರ ಬಗೆಗೆ ಗುಣ ಹೇಳುವವರಲ್ಲ. ದೋಷಾನುಸಂಧಾನವನ್ನು ತಾನೇ ಮಾಡಬೇಕಾಗಿದೆ?'- ಎಂದು ಸಮಾಧಾನ ಕಂಡುಕೊಳ್ಳಬೇಕು. 'ತಸ್ಯಾಹಮನುಜೋಭ್ರಾತಾ'-ಎಂದು ತಾನೇ ಅವನೇ ಹೇಳಿಕೊಂಡದ್ದು.

ದುಂಬಿಗಳು ಝೇಂಕರಿಸುತ್ತಾ ಮಧುಪಾನ ಮಾಡುವ ಸಮಯದಲ್ಲಿ ತಮ್ಮ ಮೇಲೆ ಎಲ್ಲಿ ಬಿದ್ದು ಬಿಡುವುವೋ ಎಂದು ಹೆದರಿ ಮತ್ಸ್ಯಗಳು ಗಾಬರಿ ಗೊಂಡು ಚಿಮ್ಮುತ್ತವಂತೆ ಆ ನಾಂಗೂರಿನಲ್ಲಿ. 'ಏತದ್ವ್ರತಂಮಮ' ಎಂಬುವಂತೆ ರಕ್ಷಿಸುವುದಕ್ಕಾಗಿಯೇ ವೀರಕಡಗವನ್ನು ತೊಟ್ಟು ಸನ್ನಿಹಿತನಾಗಿ ಇರುವ ನಿನ್ನನ್ನು ಬಿಟ್ಟು ನನಗೆ ಬೇರೆ ರಕ್ಷಕರಿಲ್ಲ.

ಪಡವರವು ಉಚ್ಚಿತನ್ಮೇಲ್ ಪಾಯ್‌ನ್ದು ಪಲ್‌ನಡಂಗಳ್ ಶೆಯ್‌ದು
ಮಡವರಲ್‌ಮಂಗೈ ತನ್ನೈಮಾರ್ವಹತ್ತು ಇರುತ್ತಿನಾನೇ
ತಡವರೈ ತಂಗು ಮಾಡ ತಹುಪುಹಟ್ ನಾಂಗೈಮೇಯು
ಕಡವುಳೇ ಕಾವಳನ್‌ತಣ್‌ಪಾಡಿಯಾಯ್ ಕಳೈಕಣ್‌ನೀಯೇ ॥೫॥

(ಪಡವರವು ಉಚ್ಚಿತನ್ಮೇಲ್) ಹರಡಿದ ಹೆಡೆಗಳನ್ನುಳ್ಳ ಕಾಳಿಂಗನ ತಲೆಯ ಮೇಲೆ (ಪಾಯ್‌ನ್ದು) ಕುದಿದು (ಪಲ್‌ನಡಂಗಳ್ ಶೆಯ್‌ದು) ಅನೇಕ ಬಗೆಯಾದ ನರ್ತನಗಳನ್ನು ಮಾಡಿದವನೂ (ಮಡವರಲ್ ಮಂಗೈತನ್ನೈ) ಶ್ರೀ ಮಹಾಲಕ್ಷ್ಮಿಯನ್ನು (ಮಾರ್ವಹತ್ತುಇರುತ್ತಿನಾನೇ) ವಕ್ಷಃಸ್ಥಲದಲ್ಲಿ ಧರಿಸಿದವನೂ ಆದ ಸ್ವಾಮಿಯೇ, (ತಡವರೈ ಮಾಡಂ ತಂಗು) ಮಹಾ ಪರ್ವತವನ್ನು ಹೋಲುವ ಪ್ರಾಸಾದಗಳು ತುಂಬಿರುವ (ತಹುಪುಹಟ್ ನಾಂಗೈ ಮೇಯುಕಡವುಳೇ) ಅತ್ಯಧಿಕವಾದ ಯಶಸ್ಸನ್ನು ಹೊಂದಿರುವ ತಿರುನಾಂಗೂರಿನ ದಿವ್ಯ ದೇಶದಲ್ಲಿ ವಸಿಸುತ್ತಿರುವ ದೇವನೇ, (ಕಾವಳನ್‌ತಣ್‌ಪಾಡಿಯಾಯ್) ಕಾವಳನ್‌ತಣ್‌ಪಾಡಿಯಲ್ಲಿರುವ ಸ್ವಾಮಿಯೇ, (ನೀಯೇಕಳೈಕಣ್) ನೀನೇ ನನಗೆ ರಕ್ಷಕನಾಗಿದ್ದೀಯೆ.

ಇದುವರೆಗೆ ಆಶ್ರಿತರ ವಿರೋಧಿಗಳನ್ನು ಹೋಗಲಾಡಿಸಿ ಆಶ್ರಿತರಕ್ಷಣ ಮಾಡಿದುದನ್ನು ಹೇಳಿದರು. ಇಲ್ಲಿಯಾದರೋ ತನ್ನನ್ನೆದುರಿಸಿದ ವಿರೋಧಿಯೇ ತನ್ನಲ್ಲಿ ಶರಣಾಗುವಂತೆ ಮಾಡಿ ಅವನನ್ನೂ ರಕ್ಷಿಸಿದ ಬಗೆಯನ್ನು ನಿರೂಪಿಸಿದ್ದಾರೆ. ಸ್ವಾಮಿ ಕಾಳಿಂಗನ ಹೆಡೆಗಳ ಮೇಲೆ ಆಡಿದ ನರ್ತನವನ್ನು ಕುರಿತೇ ಭರತಶಾಸ್ತ್ರದಲ್ಲಿ ಅನೇಕ ಬಗೆಯ ನರ್ತನಗಳನ್ನು ವಿವರಿಸಿದೆಯೋ ಎಂಬಂತೆ ಅನೇಕ ಬಗೆಯ ನರ್ತನಗಳನ್ನು ಸ್ವಾಮಿ ಆಡಿದನು. ಆಶ್ರಿತ ಸಂರಕ್ಷಣಕ್ಕೂ ಅನಾಶ್ರಿತರ ಸಂಹಾರಕ್ಕೂ ಕಾರಣವಾಗುವಂತೆ ಶ್ರೀ ಮಹಾಲಕ್ಷ್ಮಿಯೊಡನೆ ಭಗವಂತನು ನಿತ್ಯಸಂಶ್ಲೇಷ ಹೊಂದಿದ್ದಾನೆ. ಆ ಊರಿನಲ್ಲಿರುವ ಭವನಗಳನ್ನು ಕಂಡರೆ ಪರ್ವತಗಳೇ ನೆನಪಾಗುವಂತೆ ಇರುವುದಂತೆ. ಏನೇನು ಹಿರಿಮೆಯನ್ನು ಆ ಊರಿಗೆ ಹೇಳಿದರೂ ಅಷ್ಟೂ ತಕ್ಕುದಾಗಿ ಇರುವಂತೆ ಆ ದಿವ್ಯಕ್ಷೇತ್ರ

ಶೋಭಿಸಿದೆ. 'ಕಡವುಳ್' ಎಂದರೆ ಪರದೇವತೆಯೇ ಎಂಬ ಭಾವ. ಸರ್ವಾಧಿಕನಾದ ಸರ್ವೇಶ್ವರನೇ, ನೀನೇ ಸನ್ನಿಹಿತನೂ ಆಗಿರುವಾಗ ನಾನು ಬೇರೊಬ್ಬನನ್ನು ಹುಡುಕಿಕೊಂಡು ಹೋಗುವೆನೇ ?

ಮಲ್ಲರೈಅಟ್ಟುಮಾಳ ಕಂಜನೈಮಲೈನ್ದು ಕೊನ್ರು
ಪಲ್‌ಅರಶು ಅವಿನ್ದುವೀಟ ಪಾರದಪ್ಪೋರ್ ಮುಡಿತ್ತಾಯ್
ನಲ್ಲರಣ್‌ಕಾವಿನ್ ನೀಟಲ್ ನರೈಕಮಟ್‌ನಾಂಗೈಮೇಯ
ಕಲ್ಲರಣ್ ಕಾವಳನ್ದಣ್‌ಪಾಡಿಯಾಯ್ ಕಳೈಕಣ್‌ನೀಯೇ
॥೬॥

(ಮಲ್ಲರೈಮಾಳಅಟ್ಟು) ಮಲ್ಲರುಗಳನ್ನು ಧ್ವಂಸಮಾಡಿ (ಕಂಜನೈಮಲೈನ್ದು ಕೊನ್ರು) ಕಂಸನನ್ನು ಎದುರಿಸಿ ವಧೆಮಾಡಿ (ಪಲ್‌ಅರಶು ಅವಿನ್ದುವೀಟ) ಅನೇಕ ರಾಜರುಗಳು ನಾಶವಾಗುವಂತೆ (ಪಾರದಪ್ಪೋರ್ ಮುಡಿತ್ತಾಯ್) ಮಹಾಭಾರತ ಯುದ್ಧವನ್ನು ನಿರ್ವಾಹ ಮಾಡಿದವನೇ ! (ನಲ್ಲರಣನ್ ಕಾವಿನ್ ನೀಟಲ್) ಒಳ್ಳೆಯ ರಕ್ಷಕವಾದ ಆರಾಮಗಳ ಛಾಯೆಯಲ್ಲಿ (ನರೈಕಮಟ್) ಪರಿಮಳ ಬೀಸುತ್ತಿರುವ ಜಾಗವಾದ (ನಾಂಗೈಮೇಯ) ತಿರುನಾಂಗೂರಿನಲ್ಲಿರುವ (ಕಲ್ ಅರಣ್ ಕಾವಳಮ್ ತಣ್‌ಪಾಡಿಯಾಯ್) ಕಲ್ಲಿನ ಕೋಟೆಯುಳ್ಳ ಕಾವಳಂತಣ್‌ಪಾಡಿಕ್ಷೇತ್ರದಲ್ಲಿರುವ ಸರ್ವೇಶ್ವರನೇ, (ಕಳೈಕಣ್‌ನೀಯೇ) ನೀನೇ ನನಗೆ ರಕ್ಷಕನಾಗಿದ್ದೀಯೆ.

'ಸರ್ವಂಸಹಾ' ಎಂದು ಪ್ರಸಿದ್ಧಳಾದ ಭೂದೇವಿಯೂ ಸಹಿಸುವುದಕ್ಕಾಗದಂತೆ ಕ್ರೂರ ಕರ್ಮಗಳನ್ನು ಮಾಡುವವರಿಂದುಂಟಾದ ಭೂ ಭಾರವನ್ನು ಇಳಿಸಿದ ಪ್ರಕಾರವನ್ನು ಅನುಸಂಧಾನ ಮಾಡುತ್ತಾ 'ಕೃಷ್ಣಾ, ನೀನೇ ನನಗೆ ರಕ್ಷಕ' ಎಂದು ಅವನಲ್ಲಿ ಮರೆ ಹೋಗುತ್ತಾರೆ. ಇನ್ನು ಪ್ರಾಯವು ತುಂಬುವುದಕ್ಕೂ ಮೊದಲೇ ಕೃಷ್ಣ ಅಬ್ಬರದಿಂದ ತನ್ನ ಮೇಲೆ ಆಕ್ರಮಿಸಿದ ಚಾಣೂರ ಮುಷ್ಟಿಕರನ್ನೂ, 'ಮಲ್ಲರು ಮುಗಿದು ಹೋದರು' ಎಂದು ಕೇಳಿದ ಕೂಡಲೇ ಅತ್ಯಂತ ಕ್ರೋಧದಿಂದ ತೋರಿದ ಕಂಸನನ್ನೂ ಆಕ್ರಮಿಸಿ ವಧಿಸಿದ. ಪ್ರಾಯ ತುಂಬಿದ ಮೇಲೆ ಅವನು ಮಾಡಿದ ಕೆಲಸವನ್ನು ಮುಂದೆ ಹೇಳಿದೆ. ದುರ್ಯೋಧನನೊಡನೆ ಸೇರಿಕೊಂಡು ಬಂದ ದುರ್ವರ್ಗವೆಲ್ಲವೂ ನಾಶವಾಗುವಂತೆ ಮಹಾಭಾರತ

ಸಮರವನ್ನು ನಡೆಸಿದ, ಅಂಥ ಸ್ವಾಮಿ ನೆಲಸಿರುವ ದಿವ್ಯಕ್ಷೇತ್ರ ಇದೇ. 'ಸರ್ವಗಂಧ:' ಎಂದು ಹೇಳಲ್ಪಡುವ ವಸ್ತು ನಿತ್ಯವಾಸ ಮಾಡುತ್ತಿರುವ ದೇಶ ಇದು ಎಂದು ತೋರುವಂತೆ ಪರಿಮಳಭರಿತವಾಗಿದೆಯೆಂತೆ ಆ ದಿವ್ಯದೇಶ. ಇವನ ಉಪಾಯತ್ವ ಸುರಕ್ಷಿತವಾಗಿದೆಯೆಂಬುದನ್ನು ಕಲ್ಲಿನ ಪ್ರಾಕಾರ ತೋರಿಸುತ್ತದೆ. ಸುರಕ್ಷಿತವಾದ ಈ ಉಪಾಯವನ್ನು ಬಿಟ್ಟು ಬೇರೆಯೊಂದನ್ನು ಹುಡುಕಿಕೊಂಡು ನಾನು ಹೋಗುವೆನೇ ?

> ಮೂತ್ತವರ್‍ಕ್ಕು ಅರಶುವೇಣ್ಡಿ ಮುನ್ಪುತೂತು ಎಟುನ್ದರುಳಿ
> ಮಾತ್ತಮರ್ ಪಾಹನ್ ವೀಟ ಮದಕರಿ ಮರುಪ್ಪೊಶಿತ್ತಾಯ್
> ಪೂತ್ತಮರ್ ಶೋಲೈ ಓಂಗಿಪುನಲ್‍ಪರನ್ದು ಒಟುಹುಂನಾಂಗೈ
> ಕಾತ್ತನೈ ಕಾವಳಂ ತಣ್‍ಪಾಡಿಯಾಯ್ ಕಳ್ಳೈಕಣ್‍ನೀಯೇ
> ॥ ೭ ॥

(ಮುನ್ಪು) ಹಿಂದೊಂದು ಕಾಲದಲ್ಲಿ (ಮೂತ್ತವರ್‍ಕ್ಕು) ಪಾಂಡವರುಗಳಲ್ಲಿ ಜ್ಯೇಷ್ಠನಾದ ಧರ್ಮಪುತ್ರನಿಗೆ (ಅರಶುವೇಣ್ಡಿ) ರಾಜ್ಯವನ್ನು ಕೊಡಬೇಕೆಂದು ಬಯಸಿ (ತೂತು ಎಟುನ್ದರುಳಿ) ದೂತಕೃತ್ಯ ಮಾಡಿದವನಾಗಿಯೂ (ಮಾತ್ತು ಅಮರ್‍ಪಾಹನ್‍ವೀಟ) ಆನೆಯು ಮೇಲೆ ಇದ್ದ ಮಾವಟಿಗನು ಸತ್ತು ಕೆಳಗೆ ಬೀಳುವ ಹಾಗೆ (ಮದಕರಿ ಮರುಪ್ಪು ಒಶಿತ್ತಾಯ್) ಕುವಲಯಾಪೀಡವೆಂಬ ಆನೆಯ ದಂತಗಳನ್ನು ಮುರಿದವನೇ ! (ಪೂತ್ತು ಅಮರ್ ಶೋಲೈ ಓಂಗಿ) ಹೂಗಳು ಅರಳಿ ಇರುತ್ತಿರುವ ಆರಾಮಗಳು ಉನ್ನತವಾಗಿರಲು (ಪುನಲ್ ಪರನ್ದು ಒಟುಹುಂ) ತೀರ್ಥಗಳು ವ್ಯಾಪಿಸಿ ಪ್ರವಹಿಸುತ್ತಿರುವ ಜಾಗವಾದ (ನಾಂಗೈಕಾತ್ತನೇ) ತಿರುನಾಂಗೂರ್ ರಕ್ಷಕನೇ (ಕಾವಳಂ ತಣ್‍ಪಾಡಿಯಾಯ್) ಕಾವಳಂತಣ್‍ಪಾಡಿ ಕ್ಷೇತ್ರದಲ್ಲಿರುವವನೇ, (ಕಳ್ಳೈಕಣ್‍ನೀಯೇ) ನನಗೆ ನೀನೇ ರಕ್ಷಕನಾಗಬೇಕು.

ಭಾರತ ಯುದ್ಧವನ್ನು ಮಾಡಿಸುವುದಕ್ಕೆ ಮೊದಲು ತೋರಿದ 'ಆಶ್ರಿತ ಪಾರತಂತ್ರ್ಯ'ವನ್ನೂ, ಮಲ್ಲರನ್ನು ವಧಿಸುವುದಕ್ಕೆ ಮೊದಲು ಮಾಡಿದ ಕುವಲಯಾಪೀಡದ ನಿರಸನವನ್ನೂ ಅನುಸಂಧಾನ ಮಾಡಿ ಅವನಲ್ಲಿ ಶರಣಾಗಿದ್ದಾರೆ. 'ಪ್ರಾಪ್ತನಾದವನಿರುವಾಗ ಅಪ್ರಾಪ್ತನ ತಲೆಯಲ್ಲಿ ಕಿರೀಟವಿಡ ಬಾರದು. ಜ್ಯೇಷ್ಠನಿಗೆ ರಾಜ್ಯಬರಬೇಕು'– ಎಂದು ಅದಕ್ಕಾಗಿ ದೂತನಾಗಿ

ಸ್ವಾಮಿ ಹೋದ ಕೌರವರ ಬಳಿ. ಆನೆ ಮುಂಗಿದು ಹೋದರೆ ಅದರ ಕುತ್ತಿಗೆಯ ಮೇಲೆ ಕುಳಿತ ಮಾವಟಿಗ ಹೊಂದಿಕೊಂಡೇ ಇದ್ದನಂತೆ. ಅಂಥವನು ಸತ್ತು ಉರುಳುವಂತೆ ಆನೆಯ ಕೊಂಬನ್ನು ಅನಾಯಾಸವಾಗಿ ಕಿತ್ತವನು ಈ ಪ್ರಭು. 'ಏತದ್ ವ್ರತಂ ಮಮ' ಎಂಬುವಂತೆ ತಿರುನಾಂಗೂರನ್ನು ಸೇರಿ ಕಾವಲಾಗಿರುವವನೇ! ಸನ್ನಿಹಿತನೂ ಆಗಿ ಇಲ್ಲಿ ಇರುತ್ತಿರುವ ನೀನೇ ನನಗೆ ರಕ್ಷಕ.

> ಏವಿಳಂ ಕನ್ನಿಕ್ಕಾಹಿ ಇಮೈಯವರ್ ಕೋನೈಚೆತ್ತು
> ಕಾವಳಂ ಕಡಿದು ಇರುತ್ತು ಕಲ್ಪಹಂ ಕೊಂಡು ಪೋನ್ದಾಯ್
> ಪೂವಳಂ ಪೊಟಿಲ್‌ಹಳ್‌ಶೂಟ್‌ನ್ದ ಪುರಂದರನ್‌ಶೆಯ್ದನಾಂಗೈ
> ಕಾವಳಂಪಾಡಿಮೇಯ ಕಣ್ಣನೇ ಕಳೈಕಣ್‌ನೀಯೇ
>
> ॥೮॥

(ಏವಿಳಂ ಕನ್ನಿಕ್ಕಾಹಿ) ಯುವತಿಯಾದ ಸತ್ಯಭಾಮೆಗಾಗಿ (ಇಮೈಯವರ್ ಕೋನೈಶೆತ್ತು) ದೇವೇಂದ್ರನನ್ನು ಭಂಗಪಡಿಸಿ (ಕಾವಳಂ ಕಡಿದು ಇರುತ್ತು) ನಂದನವನ ಸೌಂದರ್ಯವನ್ನು ಶೀಘ್ರವಾಗಿ ಅಳಿಸಿ (ಕಲ್ಪಕಂಕೊಂಡು ಪೋನ್ದಾಯ್) ಕಲ್ಪವೃಕ್ಷವನ್ನು ದ್ವಾರಕೆಗೆ ತೆಗೆದುಕೊಂಡು ಬಂದವನೇ! (ಪೂವಳಂ ಪೊಟಿಲ್‌ಹಳ್‌ಶೂಟ್‌ನ್ದ) ಪುಷ್ಪಸಮೃದ್ಧಿ ಪುಷ್ಕಲವಾಗಿರುವ ತೋಟಗಳಿಂದ ಸುತ್ತುವರಿಯಲ್ಪಟ್ಟ (ಪುರಂದರನ್ ಶೆಯ್‌ದನಾಂಗೈ) ದೇವೇಂದ್ರ ನಿರ್ಮಿತವಾದ ತಿರುನಾಂಗೂರಿನಲ್ಲಿ (ಕಾವಳಂಪಾಡಿಮೇಯ ಕಣ್ಣನೇ ನೀಯೇ ಕಳೈಕಣ್) ತಿರುಕ್ಕಾವಳಂಬಾಡಿಯಲ್ಲಿ ನೆಲಸಿರುವ ಶ್ರೀಕೃಷ್ಣನೇ, ನೀನೇ ನನಗೆ ರಕ್ಷಕನಾಗಬೇಕು.

ಭೂದೇವಿಯ ಭಾರನಿರಸನಕ್ಕಾಗಿ ದುಷ್ಟರಾಜರುಗಳನ್ನೆಲ್ಲಾ ಮುಗಿಸಿದ ಹಾಗೆಯೇ, ಭೂದೇವಿಯ ಪುತ್ರಿಯಾದ ಸತ್ಯಭಾಮೆಗಾಗಿ ದೇವತೆಗಳ ದುರ್ಮಾನವನ್ನು ಕಳೆದು ಹಾಕಿದುದನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಏನನ್ನು ಬೇಕಾದರೂ ಮಾಡಿ ಅಪೇಕ್ಷಿತವನ್ನು ನಡೆಸಿಯೇ ಕೊಡಬೇಕಾದ ಹಾಗೆ ಇರುತ್ತಿದ್ದ ಸತ್ಯಭಾಮಾದೇವಿಯ ಆಶೆಯನ್ನು ಪೂರೈಸಿಕೊಟ್ಟ ಸ್ವಾಮಿ. ಶಚಿಯೂ ಸತ್ಯಭಾಮೆಯೂ ಒಟ್ಟಿಗೆ ಇದ್ದಾಗ ಬಂದ ಕಲ್ಪವೃಕ್ಷದ ಹೂವನ್ನು ಶಚಿ ತೆಗೆದುಕೊಂಡು ದೇವಸ್ತ್ರೀ ಎಂಬ ಅಭಿಮಾನ ತೋರಿದಳಂತೆ. 'ಈ ಹೂ

ಮನುಷ್ಯರಿಗೆ ಸಲ್ಲದು. ಅವರಿಗೆ ತಲೆನೋಯುವುದು'—ಎಂದು ಅನಾದರ ವಾಕ್ಯಗಳನ್ನಾಡಿದಳಂತೆ, ಸತ್ಯಭಾಮೆ ಆ ವೃಕ್ಷವನ್ನೇ ಬಯಸಿದಳು. ದೇವೇಂದ್ರ ತನಗೆ ಉಪಕಾರ ಮಾಡಿದ ಸ್ವಾಮಿಯ ಮೇಲೆಯೇ ಆಕ್ರಮಿಸಿದ. ಅವನನ್ನು ಭಂಗಗೊಳಿಸಿ ಆ ಪಾರಿಜಾತ ವೃಕ್ಷವನ್ನು ಸ್ವಾಮಿ ದ್ವಾರಕೆಗೆ ತಂದು ಬಿಟ್ಟ. ದರ್ಶನೀಯವಾದ ಹೂಗಳಿಂದ ಕೂಡಿದ ತೋಟಗಳು ತುಂಬಿರುವ ತಿರು ನಾಂಗೂರನ್ನು ಇಂದ್ರನೇ ನಿರ್ಮಾಣ ಮಾಡಿದನಂತೆ. ಸತ್ಯಭಾಮೆಗೆ ಪಾರಿಜಾತ ಕೊಟ್ಟ ಹಾಗೆ ಆಶ್ರಿತರಿಗೇ 'ಆಶ್ರಿತಪಾರಿಜಾತ'ವನ್ನು ಕೊಡಲು ಬಂದವನಾಗಿ ದ್ದಾನೆ ಈ ದೇವ. ಇಂಥ ನೀನಲ್ಲದೆ ನನಗೆ ರಕ್ಷಕರಿನ್ನಾರು ?

ಶನ್ದಮಾಯ್ ಸಮಯಮಾಹಿ ಶಮಯುನ್ವೈಮ್ಬೂದಮಾಹಿ
ಅನ್ದಮಾಯ್ ಆದಿಯಾಹಿ ಅರುಮರೈ ಅವೈಯುಂ ಆನಾಯ್
ಮಂದಂ ಆರ್ ಪೊಟಿಲ್‌ಹಳ್ ತೋರುಂ ಮಡಯಿಲ್
ಆಲುಂನಾಂಗೈ
ಕೆಂದಂಆರ್ ಕಾವಳಂತಣ್‌ಪಾಡಿಯಾಯ್ ಕಳೈಕಣ್‌ನೀಯೇ
॥೯॥

(ಶಂದಮಾಯ್ ಶಮಯಮಾಹಿ) ಛಂದಸ್ಸ್ವರೂಪಿಯಾಗಿ ಗಾಯತ್ರೀ ಮೊದಲಾದ ಛಂದಸ್ಸುಗಳಿಗೆ ವ್ಯವಸ್ಥಾಪಕನಾಗಿ, (ಶಮಯುವ್ವೈಮ್ಬೂದಮಾಹಿ) ವ್ಯವಸ್ಥಿತವಾದ ಗುಣಗಳನ್ನುಳ್ಳ ಪಂಚಭೂತಗಳಿಗೂ ನಿಯಾಮಕನಾಗಿ, (ಅಂದಮಾಯ್ ಆದಿಯಾಹಿ) ಜಗತ್ತಿನ ಉಪಸಂಹಾರಕ್ಕೂ ಪುನಃ ಸೃಷ್ಟಿಗೂ ಕಾರಣಭೂತನಾಗಿ. (ಅರುಮರೈ ಅವೈಯುಂ ಆನಾಯ್) ಶ್ರೇಷ್ಠವಾದ ವೇದಗಳಿಗೆ ನಿರ್ವಾಹಕನೂ ಆಗಿರುವ ಸರ್ವೇಶ್ವರನೇ ! (ಮಂದಂ ಆರ್ ಪೊಟಿಲ್‌ಹಳ್‌ತೋರುಂ) ಪಾರಿಜಾತ ವೃಕ್ಷಗಳು ತುಂಬಿರುವ ತೋಟ ಗಳೆಲ್ಲೆಲ್ಲಾ (ಮಡಮಯಿಲ್ ಆಲುಂ) ಸುಂದರವಾದ ನವಿಲುಗಳು ನರ್ತಿಸುತ್ತಿರು ವಂತಹ (ನಾಂಗೈ) ತಿರುನಾಂಗೂರಿನಲ್ಲಿ (ಕಂದಂ ಆರ್ ಕಾವಳಂ ತಣ್‌ಪಾಡಿ ಯಾಯ್ ಕಳೈಕಣ್‌ನೀಯೇ) ಸುಗಂಧಭರಿತವಾದ ಕಾವಳಂತಣಪಾಡಿಯಲ್ಲಿ ನಿತ್ಯವಾಸ ಮಾಡುವ ಕೃಷ್ಣನೇ, ನನಗೆ ನೀನೇ ರಕ್ಷಕನಾಗಬೇಕು.

ಶರಣ್ಯನ ಪರತ್ವವನ್ನೂ ವಿರೋಧಿ ನಿರಸನ ಶೀಲತ್ವವನ್ನೂ, ಹೇಳಿ ಅವನ ಸೌಲಭ್ಯವನ್ನೂನಿರೂಪಿಸಿ, ಅವನು ಸರ್ವಾಂತರ್ಯಾಮಿಯಾಗಿ

ಸರ್ವರಲ್ಲಿಯೂ ವಾತ್ಸಲ್ಯಯುಕ್ತನಾಗಿದ್ದಾನೆಂದು ಅನುಸಂಧಾನ ಮಾಡುತ್ತಾರೆ. ಲೋಕದಲ್ಲಿರುವ ಸಮಸ್ತ ಪದಾರ್ಥಗಳನ್ನೂ ವ್ಯವಸ್ಥಿತಗೊಳಿಸಿದ ಸರ್ವ ಜಗತ್ಕಾರಣನೂ, ಸರ್ವನಿಯಾಮಕನೂ ಅದವನು ಇವನು. ಕಾರ್ಯಾವಸ್ಥೆಯಲ್ಲಿಯೂ ಸಕಲಚೇತನಾಚೇತನಗಳನ್ನು ಶರೀರವನ್ನಾಗಿ ಉಳ್ಳ ಈ ಪ್ರಭು 'ಸದೇವ' ಎಂಬುವ ನಿರೂಪಣೆಗೆ ತಕ್ಕವನಾಗಿದ್ದಾನೆ. ಸರ್ವರನ್ನೂ ರಕ್ಷಿಸುವುದಕ್ಕಾಗಿ ಸರ್ವರಲ್ಲಿಯೂ ಅಂತರ್ಯಾಮಿಯಾಗಿ ಸರ್ವದಾ ಸನ್ನಿಹಿತನಾಗಿದ್ದಾನೆ. ಇಂಥ ಸ್ವಾಮಿ ತನ್ನ ಸೌಲಭ್ಯದ ಪರಾಕಾಷ್ಠೆಯನ್ನು ತೋರಿ ಸರ್ವ ಸುಲಭನಾಗಿ ಸರ್ವದಾ ಸರ್ವರಿಗೂ ಶರಣ್ಯನಾಗಿ ಈ ದಿವ್ಯ ಕ್ಷೇತ್ರದಲ್ಲಿ ನೆಲಸಿದ್ದಾನೆ. ಆ ಸ್ವಾಮಿಯು ನಿತ್ಯವಾಸ ಮಾಡುವ ಕ್ಷೇತ್ರ ಇದು ಎಂಬುದನ್ನು ಅಲ್ಲಿರುವ ಸುಗಂಧ ಪೂರ್ಣವಾದ ಆರಾಮಗಳೂ ಸಂತೋಷದಿಂದ ನರ್ತಿಸುವ ನವಿಲುಗಳೂ ತೋರಿಕೊಡುತ್ತಾ ಇವೆ. ನಿರತಿಶಯ ಭೋಗ್ಯನಾದ ನೀನೇ ನನಗೆ ರಕ್ಷಕನಾಗಬೇಕು.

ಮಾವಳಂ ಪೆರುಹಿಮುಸ್ಸು ಮರೈಯವರ್ ವಾಜುಂನಾಂಗೈ
ಕಾವಳಂ ಪಾಡಿಮೇಯ ಕಣ್ಣನೈ ಕಲಿಯನ್ ಶೊನ್ನ
ಪಾವಳಂ ಪತ್ತುಂ ವಲ್ಲಾರ್ ಪಾರ್ ಮಿಶೈ ಅರಶರಾಹಿ
ಕೋವಿಳ ಮನ್ನರ್ ತಾಟ ಕುಡೈನಿಟಲ್
ಪೊಲಿವರ್ ತಾಮೇ ॥೧೦॥

(ಮಾವಳಂಪೆರುಹಿಮುನ್ನು) ಮಹತ್ತಮವಾದ ಸಂಪತ್ತಿನಿಂದ ಸಮೃದ್ಧರಾದ (ಮರೈಯವರ್ ವಾಟುಂ) ವೈದಿಕರು ಬಾಳುವಂತಹ ಜಾಗವಾದ (ನಾಂಗೈ) ತಿರುನಾಂಗೂರಿನಲ್ಲಿ (ಕಾವಳಂಪಾಡಿಮೇಯಕಣ್ಣನೈ) ಕಾವಳಂಪಾಡಿ ದಿವ್ಯದೇಶ ನಿಲಯನಾದ ಭಗವಂತನನ್ನು ಕುರಿತು (ಕಲಿಯನ್ ಶೊನ್ನ) ತಿರುಮಂಗೈ ಆಳ್ವಾರವರು ಹಾಡಿದ (ಪಾವಳಂ ಪತ್ತುಂ ವಲ್ಲಾರ್ ತಾವರ್) ಪರಮ ಭೋಗ್ಯವಾದ ಈ ದಶಕವನ್ನು ಅಧಿಕರಿಸುವವರು (ಪಾರ್ ಮಿಶೈ ಅರಶರ್ ಆಹಿ) ಭೂಮಂಡಲದಲ್ಲಿ ಚಕ್ರವರ್ತಿಗಳಾಗಿ ಬಾಳಿ (ಕೋಇಳಮನ್ನರ್ ತಾಟ) ಇತರ ರಾಜರುಗಳೂ ರಾಜಕುಮಾರರೂ ನಮಿಸುವಂತೆ (ಕುಡೈನಿಟಲ್ ಪೊಲಿವರ್) ಏಕಾತಪತ್ರದ ನೆರಳಿನಲ್ಲಿ ಬೆಳಗುವವರಾಗುತ್ತಾರೆ.

ವೇದಾರ್ಥಭೂತನಾದ ಸರ್ವೇಶ್ವರನನ್ನು ಕಣ್ಣಿಂದ ಕಂಡು ಧನ್ಯರಾದ ಬ್ರಾಹ್ಮಣರು ಬಾಳುತ್ತಿರುವ ನಾಂಗೂರಿನ ತಿರುಕ್ಕಾವಳಂಪಾಡಿಯಲ್ಲಿ ನಿತ್ಯವಾಸ ಮಾಡುತ್ತಿರುವ ಶ್ರೀಕೃಷ್ಣನನ್ನು ಕುರಿತು ತಿರುಮಂಗೈ ಆಳ್ವಾರ್‌ರವರು ಹಾಡಿದ ಈ ದಶಕವನ್ನು ಬಾಯಿಂದ ಉಚ್ಚರಿಸಿದರೇನೇ ಪರಮ ಪ್ರಯೋಜಕವಾಗುವುದು. ಒಳ್ಳೆಯ ಛಂದಸ್ಸನ್ನುಳ್ಳ ಈ ಪಾಶುರಗಳನ್ನು ಅಧಿಕರಿಸುವವರು ಭೂಮಿಯಲ್ಲಿ ಅರಸರಾಗಿ ಗೌರವವನ್ನು ಪಡೆಯುವರು. ಮೋಕ್ಷವನ್ನು ಫಲವಾಗಿ ಏಕೆ ಹೇಳಲಿಲ್ಲ ಇಲ್ಲಿ ? 'ಮೋಕ್ಷ ಫಲವನ್ನು ಹೇಳಿದರೆ ಅಧಿಕಾರಿಗಳು ದೊರಕುವುದಿಲ್ಲ'—ಎಂದು 'ಇದು ನಿರ್ಮಗಭಿಮಾತವಾದುದನ್ನು ಸಾಧಿಸಿಕೊಡುವುದು'– ಎಂದರೆ ಇದನ್ನು ಕಲಿಯುವರು. ಮುಂದೆ ಮೋಕ್ಷದಲ್ಲಿ ತೆಗೆದು ಕೊಂಡು ಹೋಗಿ ಅವರನ್ನು ಸೇರಿಸಬಹುದು. ಈ ಭಾವದಿಂದ ಐಶ್ವರ್ಯವನ್ನು ಇಲ್ಲಿ ಫಲವಾಗಿ ಹೇಳಿದೆ. 'ಮದ್ಭಕ್ತಾ ಯಾಂತಿ ಮಾಮಪಿ' ಎಂದು ಗೀತಾಚಾರ್ಯ ಹೇಳಿದುದಕ್ಕೆ ಇದು ಸಂವಾದಿಯಾಗಿದೆ.

---

## ನಾಲ್ಕನೆಯ ಪತ್ತು—ಏಳನೆಯ ತಿರುಮೊಳಿ

# 'ಕಣ್ಣಾರ್ ಕಡಲ್'

## ಪ್ರವೇಶ

ಕಾವಳಂಬಾಡಿಯಲ್ಲಿ ನೆಲಸಿರುವ ಪರಮಾತ್ಮನಲ್ಲಿ ಶರಣಾಗತಿಯನ್ನು ಆಳ್ವಾರ್ ಮಾಡಿದರು. ಆದರೂ ಸಂಸಾರದಲ್ಲಿ ಶಬ್ದಾದಿವಿಷಯಗಳು ತುಂಬಿರುವ ಸ್ಥಳದಲ್ಲಿ ಇರುತ್ತಾ ಅವುಗಳಿಗೆ ವಶವಾಗಿರುವ ಸ್ಥಿತಿಯನ್ನು ನೆನೆದು ತಾವು ನಿತ್ಯಸೂರಿಗಳೊಡನೆ ಇರಬೇಕಾದ ಸ್ಥಿತಿಯನ್ನೂ ಸ್ಮರಿಸಿದಾಗ ತಮ್ಮ ಅಸಹಾಯ ಸ್ಥಿತಿಗೆ ಶೋಚಿಸಿದರು. 'ಪ್ರಿಯಂಜನಮಪಶ್ಯಂತೀಂ ಪಶ್ಯಂತೀಂ ರಾಕ್ಷಸೀಗಣಂ । ಸ್ವಗಣೇನ ಮೃಗೀಂ ಹೀನಾಂ ಶ್ವಗಣೈರಾವೃತಾಮಿವ॥' ಎನ್ನುವಂತೆ ಆಯಿತು ಇವರ ಸ್ಥಿತಿ. 'ನೀನು ಶಕ್ತನಾಗಿದ್ದೂ ನಾನು ಈ

ಸ್ಥಿತಿಯಲ್ಲಿರುವುದೇ ?' ಎಂದು ಆಳ್ವಾರ್ ಭಗವಂತನನ್ನು ಕೇಳಲು ಅವನು ಇವರನ್ನು ಕೇಳಿದನಂತೆ—'ನಿಮಗೆ ಅಭಿಮತವಾದುದು /ಯಾವುದು ?' ಎಂದು. 'ನಿನ್ನ ಪ್ರಾಪ್ತಿಗೆ ವಿರೋಧಿಯಾಗಿರುವ ಪ್ರಕೃತಿ ಸಂಬಂಧವನ್ನು ಹೋಗಲಾಡಿಸಬೇಕು'—ಎಂದು ಆಳ್ವಾರ್ ಇಲ್ಲಿ ಬೇಡುತ್ತಾರೆ.

**ಕಣ್ಣಾರ್ ಕಡಲ್ ಪೋಲ್ ತಿರುಮೇನಿ ಕರಿಯಾಯ್**
**ನಣ್ಣಾರ್ ಮುನೈ ವೆನ್ರಿಕೊಳ್ ವಾರ್ ಮನ್ನುನಾಂಗೂರ್**
**ತಿಣ್ಣಾರ್ ಮದಿಳ್ ಶೂಟ್ ತಿರುವೆಳ್ಳಕ್ಕುಳತ್ತುಳ್**
**ಅಣ್ಣಾ ಅಡಿಯೇ ನಿಡರ್ಕೈ ಕಳೈಯಾಯೇ**

॥೧॥

(ಕಣ್ಣಾರ್ ಕಡಲ್ ಪೋಲ್) ವಿಶಾಲವಾದ ಸಮುದ್ರದಂತೆ (ತಿರುಮೇನಿಕರಿಯಾಯ್) ಶ್ಯಾಮಲವಾದ ದಿವ್ಯದೇಹವನ್ನುಳ್ಳವನೇ, (ನಣ್ಣಾರ್ ಮುನೈ) ಶತ್ರುಗಳ ಯುದ್ಧದಲ್ಲಿ (ವೆನ್ರಿಕೊಳ್ ವಾರ್) ಜಯವನ್ನು ಹೊಂದಿದ ಬ್ರಾಹ್ಮಣರುಗಳು (ಮನ್ನುನಾಂಗೂರ್) ನಿತ್ಯವಾಸಮಾಡುವ ತಿರುನಾಂಗೂರಿನಲ್ಲಿ (ತಿಣ್ಣಾರ್ ಮದಿಳ್ ಶೂಟ್) ದೃಢತರವಾದ ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟ (ತಿರುವೆಳ್ಳಕ್ಕುಳತ್ತುಳ್) ತಿರುವೆಳ್ಳಕ್ಕುಳವೆಂಬುವ ದಿವ್ಯದೇಶದಲ್ಲಿ ಇರುತ್ತಿರುವ (ಅಣ್ಣಾ) ಸ್ವಾಮಿಯೇ, (ಅಡಿಯೇನ್ ಇಡರೈಕಳೈಯಾಯೇ) ನನ್ನ ದುಃಖಗಳನ್ನು ನೀನು ಹೋಗಲಾಡಿಸಿ ಅನುಗ್ರಹಿಸಬೇಕು.

ಆ ಪರಮಾತ್ಮನ ದಿವ್ಯಮಂಗಳ ವಿಗ್ರಹವನ್ನು ಈಕ್ಷಿಸಿದ ಕಣ್ಣನ್ನು ಅಲ್ಲಿಂದ ಬೇರ್ಪಡಿಸುವುದಕ್ಕಾಗದಂತಹ ಸೌಂದರ್ಯ ಅವನದು. ಗಾಂಭೀರ್ಯದಲ್ಲಿಯೂ, ಸೌಂದರ್ಯದಲ್ಲಿಯೂ ಅನುಪಮವಾದುದು ಆ ರೂಪ. 'ನೀನೇ ರಕ್ಷಕನಾಗಬೇಕು' ಎಂದು ನಾನು ಹೇಳುತ್ತಿದ್ದರೂ ನೀನು ಗಂಭೀರನಾಗಿ ಇರುತ್ತಿರುವುದರಿಂದ ನಿನ್ನ ಮನಸ್ಸನ್ನು ನಾನು ಅರಿಯಲಾರದವನಾಗಿದ್ದೇನೆ. ಭಯ ಪ್ರಸಂಗವೇ ಇಲ್ಲದ ಪ್ರದೇಶದಲ್ಲಿರುವ ನಿರುಪಾಧಿಕಬಂಧುವೇ, ಬೇರೆ ರಕ್ಷಕರಿರುವರೆಂದು ನಾನು ತಿಳಿದಿದ್ದರೆ ತಾನೇ ನೀನು ಮೌನವಾಗಿರಬಹುದು ? ನಾನು ಅನನ್ಯಗತಿ. ನನ್ನ ದುಃಖವನ್ನು ನೀನು ಕಳೆದು ಹಾಕಬೇಕು.

ಕೊನ್ದಾರ್ ತುಳವಮಲರ್ ಕೊಂಡು ಅಣಿವಾನೇ
ನನ್ದಾದ ಪೆರುಂಪುಹಟ್ಬೇದಿಯರ್ ನಾಂಗೂರ್
ಶೆನ್ದಾಮರೈನೀರ್ ತಿರುವೆಳ್ಳಕ್ಕುಳತ್ತುಳ್
ಎನ್ದಾಯ್ ಅಡಿಯೇನಿಡರ್ಕ್ಕಳೈಯಾಯೇ ॥೨॥

(ಕೊಂದಾರ್ ತುಳವಮಲರ್‌ಕೊಂಡು ಅಣಿವಾನೇ) ಗೊಂಚಲು ಗೊಂಚಲಾಗಿ ರುವ ತುಳಸಿಯ ಚಿಗುರುಗಳನ್ನು ತೆಗೆದುಕೊಂಡು ಧರಿಸಿಕೊಂಡಿರುವವನೇ (ನಂದಾದ ಪೆರುಂಪುಹಟ್) ಯಾವತ್ತೂ ಕುಂದದ ಯಶಸ್ಸನ್ನುಳ್ಳ (ವೇದಿಯರ್ ನಾಂಗೂರ್) ವೈದಿಕರುಗಳು ಇರುತ್ತಿರುವ ತಿರುನಾಂಗೂರಿನಲ್ಲಿ (ಶೆಂದಾಮರೈನೀರ್) ಕೆಂದಾವರೆ ಪುಷ್ಪಗಳು ತುಂಬಿರುವ ಜಲಾಶಯಗಳನ್ನುಳ್ಳ (ತಿರುವೆಳ್ಳಕುಳತ್ತುಳ್ ಎಂದಾಯ್) ತಿರುವೆಳ್ಳಕ್ಕುಳ ದಿವ್ಯ ದೇಶದಲ್ಲಿರುವ ನನ್ನ ಸ್ವಾಮಿಯೇ, (ಅಡಿಯೇನಿಡರ್ಕ್ಕಳೈಯಾಯ್) ನನ್ನ ದುಃಖವನ್ನು ನೀನು ಹೋಗಲಾಡಿಸಬೇಕು.

ಆಳ್ವಾರರ ಮಾತನ್ನು ಇನ್ನೂ ಕೇಳಬೇಕೆಂದು ಸ್ವಾಮಿ ಸುಮ್ಮನೆ ಇದ್ದನಂತೆ. ಆಗ ಆಳ್ವಾರ್ ಹೀಗೆ ಹೇಳುತ್ತಾರೆ. ರಕ್ಷಣವನ್ನು ನೀಡುವುದಕ್ಕಾಗಿ ನೀನು ವಿಶೇಷವಾದ ಮಾಲೆಯನ್ನು ಧರಿಸಿದ್ದೀಯೆ. ನಿನ್ನ ಮೈ ಸ್ಪರ್ಶದಿಂದ ಆ ತುಲಸಿಯೂ ಚಿಗುರುತ್ತಿದೆ. ಆಶ್ರಿತರಕ್ಷಣದಿಂದ ಕೀರ್ತಿ ಪಡೆದವರ ನಡುವೆ ನೀನಿರುತ್ತಿದ್ದೀಯೇ। ನಿನ್ನ ದಿವ್ಯ ಮಂಗಳ ವಿಗ್ರಹಕ್ಕೂ ಅವಯುವ ಶೋಭೆಗೂ ಹೋಲುವಂತೆ ಇದೆಯಂತೆ ಆ ಊರಿನ ಜಲಾಶಯಲ್ಲಿರುವ ಜಲವೂ ಮತ್ತು ತಾವರೆಯೂ. 'ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ' ಎಂದು ನೀನು ಹೇಳಿದ ಅರ್ಥವನ್ನು ನಡೆಸಿಕೊಡಬೇಕು.

ಕುನ್ರಾಲ್ ಕುಳಿರ್ ಮಾರಿ ತಡುತ್ತು ಉಹಂದಾನೇ
ಕನ್ರಾಯ ಪೆರುಂಪುಹಟ್ ವೇದಿಯರ್ ನಾಂಗೂರ್
ಶೆನ್ರಾರ್ ವಣಂಗುಂ ತಿರುವೆಳ್ಳಕ್ಕುಳತ್ತುಳ್
ನಿನ್ರಾಯ್ ನೆಡಿಯಾಯ್ ಅಡಿಯೇನಿಡರ್ ನೀಕ್ಕೇ ॥೩॥

(ಕುಳಿರ್ ಮಾರಿ) ಗೋಕುಲವನ್ನು ಬಾಧಿಸಲು ಬಂದ ಮಹಾವೃಷ್ಟಿಯನ್ನು (ಕುನ್ರಾಲ್ ತಡುತ್ತುಉಹನ್ದಾನೇ) ಗೋವರ್ಧನ ಪರ್ವತದಿಂದ ತಡೆದು

ಸಂತೋಷಿಸಿದವನೇ, (ನನ್ರಾಯಂಪೆರುಂ ಪುಹಟ್) ಒಳ್ಳೆಯ ಯಶಸ್ಸನ್ನು ಹೆಚ್ಚಾಗಿ ಹೊಂದಿದ (ವೇದಿಯರ್‌ನಾಂಗೂರ್) ವೈದಿಕರು ಇರುತ್ತಿರುವ ನಾಂಗೂರಿನಲ್ಲಿ (ಶೆನ್ರಾರ್‌ವಣಂಗುಂ) ಹೋಗುವವರೂ ಬರುವವರೂ ತಲೆ ಬಾಗುವ (ತಿರುವೆಳ್ಳಕ್ಕುಳತ್ತುಳ್ ನಿನ್ರಾಯ್) ತಿರುವಳ್ಳಕ್ಕುಳ ಕ್ಷೇತ್ರದಲ್ಲಿ ನೆಲಸಿದವನೇ, (ನೆಡಿಯಶಾಯ್) ಸರ್ವೇಶ್ವರನೇ (ಅಡಿಯೋ ನಿಡರ್‌ನೀಕ್ಕು) ನನ್ನ ದುಃಖವನ್ನು ಹೋಗಲಾಡಿಸು.

'ಆಶ್ರಿತರನ್ನು ರಕ್ಷಿಸುವುದಕ್ಕಾಗಿ ನಾನು ಪಡಾಲೆ ತೊಟ್ಟಿದ್ದೇನೆಂದು ನೀವು ಹೇಗೆ ಹೇಳುತ್ತೀರಿ ?'—ಎಂದು ಸ್ವಾಮಿ ಹೇಳಿದರೆ ಅದಕ್ಕೆ ಉತ್ತರ ಇಲ್ಲಿ ಹೇಳುತ್ತಾರೆ. ನಿನಗೆ ಇಂಥದನ್ನು ಬಳಸಿ ಇಂಥದನ್ನು ಕಾಯಬೇಕೆಂಬ ನಿಯಮವಿಲ್ಲ. ಬೆಟ್ಟವನ್ನೇ ಕೊಡೆಯನ್ನಾಗಿ ಮಾಡಿ ಮಳೆಯನ್ನು ತಡೆದೆ. ಆ ಗೋಪಾಲರಿಗೆ ಬಂದ ದುಃಖಕ್ಕೂ ನನಗೊದಗಿರುವ ದುಃಖಕ್ಕೂ ವ್ಯತ್ಯಾಸವನ್ನು ನೀನೇ ಕಾಣಬೇಕು. ಹೇಗೆ ಸರ್ವೇಶ್ವರನಿಗೆ ಹೇಯ ಪ್ರತ್ಯನೀಕವೂ ಕಲ್ಯಾಣೈಕತಾನವೂ ಆದ ಯಶಸ್ಸಿದೆಯೋ ಹಾಗೆಯೇ ಆ ಊರಿನಲ್ಲಿರುವ ಬ್ರಾಹ್ಮಣರ ಯಶಸ್ಸೂ ಇರುವುದು. ಶ್ರೀಕೃಷ್ಣನು ದುರ್ಯೋಧನನ ಸಭೆಗೆ ಪಾಂಡವದೂತನಾಗಿ ಬಂದಾಗ ದುರ್ಯೋಧನನ ಕಟ್ಟಳೆಯನ್ನೂ ಮರೆತು ಹೇಗೆ ಎಲ್ಲರೂ ಎದ್ದು ನಿಂತು ಗೌರವಿಸಿದರೋ ಹಾಗೆ 'ದೇವರಿಗೆ ತಲೆ ಬಾಗೆವು' ಎಂಬುವವರೂ ಸಹ ಈ ಕ್ಷೇತ್ರದಲ್ಲಿ ಭಗವನ್ಮಹಿಮೆಯ ಕಾರಣ ತಲೆ ಬಾಗುವರು. ಅಂಥ ದಿವ್ಯಕ್ಷೇತ್ರ ಇದು.

> ಕಾನಾರ್ ಕರಿ ಕೊಂಬದು ಒಶಿತ್ತ ಕಳಿರೇ
> ನಾನಾವಹೈ ನೆಲ್ಲವರ್ ಮನ್ನಿಯ ನಾಂಗೂರ್
> ತೇನಾರ್ ಪೊಟಿ‌ಲ್ ಶೂಟ್ ತಿರುವಳ್ಳಕ್ಕುಳತ್ತುಳ್
> ಆನಾಯ್ ಅಡಿಯೇನುಕ್ಕರುಳ್ ಪುರಿಯಾಯೇ ॥೪॥

(ಕಾನಾರ್‌ಕರಿ) ಕಾಡಿನಲ್ಲಿ ಬೆಳೆದ ಮದಮುಂದಿತವಾದ ಕಂಸನ ಆನೆಯ (ಕೊಂಬದು ಒಶಿತ್ತ ಕಳಿರೇ) ದಂತಗಳನ್ನು ಮುರಿದ ಮರಿ ಆನೆಯೇ, (ನಾನಾವಹೈ ನಲ್ಲವರ್) ವಿದ್ಯೆ, ಧನ, ಕುಲ ಮೊದಲಾದ ಅನೇಕ ಪ್ರಕಾರಗಳಿಂದ ಶ್ಲಾಘನೀಯರಾದವರು (ಮನ್ನಿಯ ನಾಂಗೂರ್) ನಿತ್ಯವಾಸ ಮಾಡುವ ತಿರುನಾಂಗೂರಿನಲ್ಲಿ (ತೇನಾರ್ ಪೊಟಿಲ್‌ಶೂಟ್) ಜೇನು ಹರಿಯುವ ತೋಟಗಳಿಂದ

ಪರಿವೃತವಾದ (ತಿರುವೆಳ್ಳಕ್ಕುಳತ್ತುಳ್) ತಿರುವೆಳ್ಳಕ್ಕುಳ ದಿವ್ಯದೇಶದಲ್ಲಿ (ಆನಾಯ್) ಗಜರಾಜನಂತೆ ಪ್ರಕಾಶಿಸುವವನೇ, (ಅಡಿಯೇನುಕ್ಕು ಅರುಳ್ ಪುರಿಯಾಯೇ) ದಾಸನಾದ ನನ್ನ ಮೇಲೆ ಕೃಪೆಮಾಡಬೇಕು.

ಗೋಪಾಲಕರ ಆಪತ್ತನ್ನು ಪರಿಹರಿಸಿದುದು ಮಾತ್ರವಲ್ಲ, ಮದಿಸಿದ ಆನೆಯನ್ನು ಮರ್ದಿಸಿದ ಶಕ್ತಿವಂತನೂ ನೀನು ಆಗಿದ್ದೀಯೇ. ನನ್ನ ಮೇಲೆ ಕೃಪೆತೋರುವುದರಲ್ಲಿ ತಟಸ್ಥನಾಗಿರಬಾರದು. ಕಾಡಿನಲ್ಲೇ ಆಯುಸ್ಸನೆಲ್ಲಾ ಕಳೆದು ಮನುಷ್ಯರ ಮುಖಪರಿಚಯವೂ ಇಲ್ಲದಿರುವ ಆನೆಯ ಕೊಂಬನ್ನು ಕಿತ್ತು ಹಾಕಿದ ಮರಿ ಆನೆಯೇ. ಒಂದು ಮತ್ತಗಜ ಮತ್ತೊಂದು ಆನೆಯ ಕೊಂಬನ್ನು ಮುರಿದು ಹಾಕಿತು. ಆ ಊರಿನಲ್ಲಿರುವವರು ಅನೇಕ ಬಗೆಯ ನಲ್ಮೆಯನ್ನು ಹೊಂದಿದವರಾಗಿದ್ದಾರೆ. ಜನ್ಮದಿಂದ, ನಡತೆಯಿಂದ, ಜ್ಞಾನ ದಿಂದ, ಪರಾಕ್ರಮದಿಂದ ಅವರು ಪ್ರಸಿದ್ಧರು. ಸ್ವಾಮಿಯನ್ನು 'ಆನಾಯ್' ಎಂದು ಮತ್ತೆ ಹೇಳಿರುವುದರ ಭಾವ ಇದು–ಆನೆಯ ಗಮನಾಗಮನಗಳ ಆಕರ್ಷಕತ್ವ, ಹೇಗೋಹಾಗೆ ಈ ಸ್ವಾಮಿಯ ಆಕರ್ಷಕತ್ವ ಇದೆ. ಮದಿಸಿದ ಆನೆ ಹೇಗೆ ಯಾವುದನ್ನೂ ತಿಳಿಯುವುದಿಲ್ಲವೋ ಹಾಗೆ ಸ್ವಾಮಿ ತನ್ನಲ್ಲಿ ಶರಣಾದವರ ದೋಷವೊಂದನ್ನೂ ಕಾಣುವುದಿಲ್ಲ. ಇಂಥ ನೀನೇ ನನಗೆ ರಕ್ಷಕ ನಾಗಿ ನನ್ನ ದುಃಖವನ್ನು ಕಳೆಯಬೇಕು.

**ವೇಡಾರ್ ತಿರುವೇಂಗಡಂ ಮೇಯ ವಿಳಕ್ಕೇ**
**ನಾಡಾರ್ ಪುಹಟ್ ವೇದಿಯರ್ ಮನ್ನಿಯ ನಾಂಗೂರ್**
**ಶೇಡಾರ್ ಪೊಟಿಲ್‌ಶೂಟ್ ತಿರುವೆಳ್ಳಕ್ಕುಳತ್ತಾಯ್**
**ಪಾಡಾ ವರುವೇನ್ ವಿನೈಯಾಯಿನ ಪಾತ್ತೇ ॥೫॥**

(ವೇಡಾಲ್) ಬೇಡರುಗಳಿಂದ ತುಂಬಿರುವ (ತಿರುವೇಂಗಡಮೇಯವಿಳಕ್ಕೇ) ಶ್ರೀವೆಂಕಟಾದ್ರಿಯಲ್ಲಿ ನಿತ್ಯ ವಾಸಮಾಡುತ್ತಿರುವ ಮಂಗಳ ದೀಪನೇ, (ನಾಡಾರ್ ಪುಹಟ್) ನಾಡಿನಲ್ಲೆಲ್ಲಾ ವ್ಯಾಪ್ತವಾದ ಯಶಸ್ಸನ್ನುಳ್ಳ (ವೇದಿಯರ್‌ಮನ್ನಿಯ ನಾಂಗೂರ್) ವೈದಿಕರುಗಳು ನೆಲಸಿರುವ ತಿರುನಾಂಗೂರಿನಲ್ಲಿ (ಶೇಡಾರ್ ಪೊಟಿಲ್‌ಶೂಟ್) ಎಳೆಯ ಗಿಡಗಳ ಸಮೂಹವನ್ನುಳ್ಳ ಆರಾಮ ಗಳಿಂದ ಸುತ್ತುವರಿಯಲ್ಪಟ್ಟ (ತಿರುವೆಳ್ಳಕ್ಕುಳತ್ತಾಯ್) ತಿರುವೆಳ್ಳಕ್ಕುಳಕ್ಷೇತ್ರದ

ನಾಯಕನೇ, (ಪಾಡಾವರುವೇನ್) ನಿನ್ನನ್ನು ಸ್ತುತಿಸುತ್ತಲೇ ಬರುತ್ತಿರುವ ನನ್ನ (ವಿನೈಯಾಯಿನ ಪಾತ್ತೇ) ಪಾಪಗಳೆಲ್ಲವನ್ನೂ ನಾಶಮಾಡಿ ರಕ್ಷಿಸಬೇಕು.

'ವಿಭವಾವತಾರವೃತ್ತಾಂತವನ್ನು ನೀವು ಏಕೆ ಕೊಂಡಾಡುವಿರಿ ? ತಿರುವೆಳ್ಳಕ್ಕುಳದಲ್ಲಿ ಜನ್ಮವೃತ್ತಾದಿಗಳಿಂದ ಉತ್ಕೃಷ್ಟರಾಗಿರುವವರಿಗೆ ನಾನು ಮೈದೋರಿರುವವನಲ್ಲವೇ ? ನೀವೂ ಅವರಂತೆ ಕೆಲವು ಧರ್ಮಗಳನ್ನು ಮಾಡಿ ವಿರೋಧಿಯನ್ನು ಕಳೆದುಕೊಳ್ಳಬಾರದೋ ?'—ಎಂದು ಸ್ವಾಮಿಯ ಆಶಯವಾದರೆ ಅದಕ್ಕೆ ಉತ್ತರವನ್ನು ಇಲ್ಲಿ—'ಕಾಡು, ವಾನರ, ಬೇಡರು ಇವರುಗಳಿಗೆಲ್ಲ ನೀನು ವೇಂಕಟಾದ್ರಿಯಲ್ಲಿ ಪ್ರತ್ಯಕ್ಷವಾಗಿಲ್ಲವೇ ? ಅಂಥ ನೀನೇ ನನ್ನ ವಿರೋಧಿಗಳನ್ನು ಹೋಗಲಾಡಿಸಬೇಕು'—ಎಂದು ಹೇಳುತ್ತಾರೆ. ನೀನೇ ನಿನ್ನ ಸ್ವರೂಪಗುಣಗಳಿಗೆ ಪ್ರಕಾಶಕನಾಗಿದ್ದೀಯೆ ! ನನ್ನ ಪಾಪಗಳನ್ನು ಧೂಳೀಪಟ ಮಾಡಿಬಿಡಬೇಕು ನೀನೇ.

ಕಲ್ಲಾಲ್ ಕಡಲೈ ಅಣ್ಯೆಕಟ್ಟಿ ಉಹಂದಾಯ್
ನಲ್ಲಾರ್ ಪಲರ್ ವೇದಿಯರ್ ಮನ್ನಿಯ ನಾಂಗೂರ್
ಶೆಲ್ವಾ ತಿರುವೆಳ್ಳಕ್ಕುಳತ್ತು ಉರೈವಾನೇ
ಎಲ್ಲಾ ಇಡರುಮ್ ಕೆಡುಮಾರು ಅರುಳಾಯೇ ॥೬॥

(ಕಲ್ಲಾಲ್ ಕಡಲೈ) ಕಂಡ ಕಂಡ ಕಲ್ಲುಗಳಿಂದ ಸಮುದ್ರದಲ್ಲಿ (ಅಣ್ಯೆಕಟ್ಟಿಉಹಂದಾಯ್) ಸೇತುವೆಯನ್ನು ಕಟ್ಟಿ ಸಂತೋಷಿಸಿದವನೇ, (ನಲ್ಲಾರ್ ಪಲರ್ ವೇದಿಯರ್) ವಿಲಕ್ಷಣರುಗಳಾದ ಅನೇಕ ವೈದಿಕರುಗಳು (ಮನ್ನಿಯ ನಾಂಗೂರ್) ನಿತ್ಯವಾಸ ಮಾಡುವ ನಾಂಗೂರಿನಲ್ಲಿ (ತಿರುವೆಳ್ಳಕ್ಕುಳತ್ತು ಉರೈವಾನೇ) ತಿರುವೆಳ್ಳಕ್ಕುಳಂ ಕ್ಷೇತ್ರದಲ್ಲಿ ನೆಲಸಿರುವವನೇ, (ಶೆಲ್ವಾ) ಸಂಪನ್ನಿಧಿಯೇ (ಎಲ್ಲಾ ಇಡರುಂ ಕೆಡುಮಾರು ಅರುಳಾಯ್) ಸಮಸ್ತ ದುಃಖಗಳೂ ತೊಲೆಯುವಂತೆ ಕೃಪೆಮಾಡಬೇಕು ನೀನೇ.

'ತಿರುವೇಂಗಡದಲ್ಲಿ ಇರುವ ಬೇಡರೇ ಮೊದಲಾದವರು 'ಪಾಪವಿನಾಶಂ' ಮೊದಲಾದ ಪುಣ್ಯತೀರ್ಥಗಳಿಂದ ಪಾಪಪರಿಹಾರ ಹೊಂದಿರುವುದರಿಂದ ಅವರಿಗೆ, ನಾನು ಮುಖವನ್ನು ತೋರಿದೆ. ನಿಮ್ಮ ವಿರೋಧಿಗಳನ್ನು ಕಳೆಯುವುದು ಕಷ್ಟವಲ್ಲವೇ ?'—ಎಂದು ಸ್ವಾಮಿ ಹೇಳಿದರೆ ಇವರು ಹೇಳುತ್ತಾರೆ—

'ನೀರಿನಲ್ಲಿ ಕಲ್ಲು ತೇಲುವಂತೆ ಮಾಡಿದ ನಿನಗೆ ಕಷ್ಟವಾದುದು ಯಾವುದು ? ಸಮಸ್ತ ಪ್ರತಿಬಂಧಕಗಳನ್ನೂ ನೀನು ಕಳೆದು ಹಾಕಬೇಕು'—ಎಂದು ಇಲ್ಲಿ ಬೇಡುತ್ತಾರೆ. ಸಮುದ್ರದಲ್ಲಿ ಸೇತು ಕಟ್ಟಿದ ಸ್ವಾಮಿ—'ಸಂಸಾರಿಗಳು ಇದರಿಂದ ಉದ್ಧಾರವಾಗುವಂತೆ ಮಾಡಿದೆ'—ಎಂದು ಸಂತೋಷಿಸಿದನಂತೆ. ಎಲ್ಲಾ ಪಾಪಗಳನ್ನೂ ಎಂದರೆ ಅವಿದ್ಯೆ, ಕರ್ಮವಾಸನೆ, ರುಚಿ, ಭಗವದಪಚಾರಾದಿಗಳು, ಪ್ರಾರಬ್ಧಕರ್ಮ—ಇವೆಲ್ಲವನ್ನೂ ತೊಡೆದು ಹಾಕುವಂತೆ ಅನುಗ್ರಹಿಸಬೇಕು.

**ಕೋಲಾಲ್ ನಿರೈ ಮೆಯ್‌ತ್ತ ಎಮ್ ಕೋವಲರ್‌ಕೋವೇ**
**ನಾಲಾಹಿಯ ವೇದಿಯರ್ ಮನ್ನಿಯ ನಾಂಗೂರ್**
**ಶೇಲಾರ್ ವಯಲ್‌ಶೂಟ್ ತಿರುವೆಳ್ಳಕ್ಕುಳತ್ತುಳ್**
**ಮಾಲೇ ಎನ ವಲ್‌ವಿನೈ ತೀರ್ತರ್ ಅರುಳಾಯೇ** ॥೭॥

(ಕೋಲಾಲ್ ನಿರೈಮೆಯ್‌ತ್ತ) ಕೈಯ್ಯಲ್ಲಿ ಕೋಲನ್ನು ಹಿಡಿದುಕೊಂಡು ಹಸು ಗಳನ್ನು ಮೇಯಿಸಿದ (ಎಮ್ ಕೋವಲರ್‌ಕೋವೇ) ನಮ್ಮ ಗೋಪಾಲ ಕೃಷ್ಣನೇ, (ನಾಲಾಹಿಯ ವೇದಿಯರ್) ಚತುರ್ವೇದ ವಿಶಾರದರಾದವರು (ಮನ್ನಿಯನಾಂಗೂರ್) ನೆಲಸಿರುವ ತಿರುನಾಂಗೂರಿನಲ್ಲಿ (ಶೇಲ್ ಆರ್ ವಯಲ್ ಶೂಟ್) ಮೀನುಗಳಿಂದ ತುಂಬಿದ ಗದ್ದೆಗಳಿಂದ ಸುತ್ತುವರಿಯಲ್ಪಟ್ಟ (ತಿರುವೆಳ್ಳಕ್ಕುಳತುಳ್‌ಮಾಲೇ) ತಿರುವೆಳ್ಳಕ್ಕುಳಂ ಕ್ಷೇತ್ರದಲ್ಲಿರುವ ವ್ಯಾಮೋಹಕನೇ (ಎನ್‌ವಲ್‌ವಿನೈ ತೀರ್ತರ್ ಅರುಳಾಯ್) ನನ್ನ ಕ್ರೂರಪಾಪಗಳನ್ನು ನಿರಸನಮಾಡಿ ಅನುಗ್ರಹಿಸು.

ಸೃಷ್ಟಿ ಸಂಹಾರಾದಿಗಳನ್ನು ಸಂಕಲ್ಪದಿಂದ ಮಾಡುವ ನೀನು ಕೈಯಲ್ಲಿ ಕೋಲನ್ನು ಹಿಡಿದು ಜಾತ್ಯುಚಿತವಾದ ವೃತ್ತಿಯನ್ನು ಮಾಡಿದೆ ಗೋಪಾಲ ಬಾಲನಾಗಿ. ಆ ದಿವ್ಯಲೀಲೆಯಿಂದ ನನ್ನನ್ನು ಅನನ್ಯಾರ್ಹನಾಗಿ ಮಾಡಿದೆ. ನಾಲ್ಕು ಬಗೆಯ ವೇದಗಳಲ್ಲಿಯೂ ಪಾರಂಗತರಾದವರು ಇರುವ ದಿವ್ಯಕ್ಷೇತ್ರ ನಾಂಗೂರು. ಯಾವಾಗಲೂ ಜಲಸಮೃದ್ಧಿಯಿರುವುದರಿಂದ ಮತ್ಸ್ಯಗಳು ಅಲ್ಲಿ ಯಾವಾಗಲೂ ಆನಂದದಿಂದಿರುತ್ತವೆಯಂತೆ. ನನ್ನಿಂದ ಸಹಿಸಲಾಗದ ಪಾಪ ಗಳನ್ನು ಕಳೆದು ಕಾಪಾಡಬೇಕು.

ವಾರಾಹಮಂದಾಹಿ ಇಮ್ಮಣ್ಣೈ ಇಡಂದಾಯ್
ನಾರಾಯಣನೇ, ನಲ್ಲವೇದಿಯರ್ ನಾಂಗೂರ್
ಶೀರಾರ್ ಪೊಟಿಲ್‌ಶೂಟ್ ತಿರುವೆಳ್ಳಕ್ಕುಳತ್ತುಳ್
ಆರಾವಮುದೇ ಅಡಿಯೇರ್ಕ್ಕು ಅರುಳಾಯೇ ॥೮॥

(ವಾರಾಹಮಂದಾಹಿ) ದಿವ್ಯವರಾಹರೂಪಿಯಾಗಿ ಅವತರಿಸಿ (ಇಮ್ಮಣ್ಣೈ ಇಡಂದಾಯ್) ಈ ಭೂಮಿಯನ್ನು ಅಂಡಭಿತ್ತಿಯಿಂದ ಬಿಡಿಸಿ ಉದ್ಧರಿಸಿದೆ. (ನಾರಾಯಣನೇ) ಸರ್ವ ಸ್ವಾಮಿಯೇ, (ನಲ್ಲವೇದಿಯರ್‌ನಾಂಗೂರ್) ವಿಲಕ್ಷಣ ರಾದ ವೈದಿಕರು ಇರುತ್ತಿರುವ ತಿರುನಾಂಗೂರಿನಲ್ಲಿ (ಶೀರಾರ್‌ಪೊಟಿಲ್‌ಶೂಟ್) ರಮಣೀಯವಾದ ಉದ್ಯಾನಗಳಿಂದ ಪರಿವೃತವಾದ (ತಿರುವೆಳ್ಳಕ್ಕುಳತ್ತುಳ್) ತಿರುವೆಳ್ಳಕ್ಕುಳಂ ಕ್ಷೇತ್ರದಲ್ಲಿ ನೆಲಸಿರುವ (ಆರಾವಮುದೇ) ಎಲ್ಲೂ ಇಲ್ಲದ ಅಮೃತವೇ (ಅಡಿಯೇರ್ಕ್ಕು ಅರುಳಾಯ್) ದಾಸನಾದ ನನ್ನ ಮೇಲೆ ಕೃಪೆ ಮಾಡು.

'ಭೂಮಿಯನ್ನು ಪ್ರಳಯವು ಮುಳುಗಿಸಿದಂತೆ ನನ್ನನ್ನು ಸಂಸಾರ ಪ್ರಳಯ ಮುಳುಗಿಸಿದೆ. ವತ್ಸಲನಾದ ನೀನು ನನ್ನನ್ನು ಈ ಸಂಸಾರ ಸಾಗರ ದಿಂದ ಉದ್ಧರಿಸಬೇಕು'—ಎಂದು ಬೇಡುತ್ತಾರೆ. ಮಗುವಿಗೆ 'ಇವಳು ತಾಯಿ' ಎಂದು ತಿಳಿಯದೆ ಇದ್ದಾಗ್ಗೂ ತಾಯಿ ಆಮಗುವನ್ನು ಕಟ್ಟಿಕೊಂಡು ಇರುವಂತೆ ಸಂಸಾರಿಗಳು ನಿನ್ನನ್ನು ಅರಿಯದೇ ಇದ್ದರೂ ಎಲ್ಲರಲ್ಲಿಯೂ ವಾತ್ಸಲ್ಯ ತೋರುವ ನಿರುಪಾಧಿಕ ಬಂಧುವಾದ ನಾರಾಯಣ ನೀನಾಗಿದ್ದಿಯೆ. ಅಪೂರ್ವ ವದ್ಭೋಗ್ಯನಾದ ನೀನು ಇರುತ್ತಿರುವ ಆ ಕ್ಷೇತ್ರವೂ ಸಂಪತ್ಸಮೃದ್ಧಿಯನ್ನೇ ತೋರುತ್ತಿದೆ.

ಪೂವಾರ್ ತಿರುಮಾಮಹಳ್ ಪುಲ್ಗಿಯ ಮಾರ್ಪಾ
ನಾವಾರ್ ಪುಹಟಿ್‌ವೇದಿಯರ್ ಮನ್ನಿಯ ನಾಂಗೂರ್
ತೇವಾ ತಿರುವೆಳ್ಳಕ್ಕುಳತ್ತುರೈವಾನೇ
ಆವಾ ಅಡಿಯಾನ್ ಇವನ್ ಎನ್ರು ಅರುಳಾಯೇ ॥೯॥

(ಪೂಆರ್‌ತಿರುಮಾಮಹಳ್) ಅರವಿಂದವಾಸಿನಿಯಾದ ಶ್ರೀಮಹಾಲಕ್ಷ್ಮಿಯು (ಪುಲ್ಗಿಯಮಾರ್ಪಾ) ನೆಲಸಿರುವ ವಕ್ಷಃ ಸ್ಥಳವನ್ನುಳ್ಳವನೇ, (ನಾವಾರ್

ಪುಹಟ್) ನಾಲಿಗೆಯಿಂದ ಕೊಂಡಾಡಲು ತಕ್ಕುದಾದ ಕೀರ್ತಿಯುನ್ನುಳ್ಳ (ವೇದಿಯರ್ ಮನ್ನಿಯುನಾಂಗೂರ್) ವೈದಿಕರು ನೆಲಸಿರುವ ತಿರುನಾಂಗೂರಿನಲ್ಲಿ (ತಿರುವೆಳ್ಳಕ್ಕುಳತ್ತು ಉರೈವಾನೇ) ತಿರುವೆಳ್ಳಕ್ಕುಳ್ಳ ಕ್ಷೇತ್ರದಲ್ಲಿರುವವನೇ (ದೇವಾ) ದೇವಾಧಿದೇವನೇ, (ಅಡಿಯಾನ್ ಇವನ್) ದಾಸ ಭೂತನಾದ ಇವನು (ಆವಾವೆನ್ರು ಅರುಳಾಯ್) ದಯನೀಯನೆಂದು ಭಾವಿಸಿ ಕೃಪೆ ಮಾಡಬೇಕು.

ಸಂಸಾರಪ್ರಳಯವನ್ನು ಕಳೆಯಬಲ್ಲವನೂ ವತ್ಸಲನೂ ಆದ ಸ್ವಾಮಿಯನ್ನು 'ಶ್ರೀಮಾನ್' ಆಗಿ ಅನುಸಂಧಾನ ಮಾಡಿದ್ದಾರೆ 'ಸೀತಾಮುವಾಚ' ಎಂದಂತೆ. ಶ್ರೀದೇವಿಯನ್ನು ಮುಂದಿಟ್ಟುಕೊಂಡು ರಕ್ಷಣೆಯ ಪ್ರಾರ್ಥನೆಯನ್ನು ಮಾಡಿದ್ದಾರೆ. ಹೂವಿನಲ್ಲಿ ಜನಿಸಿದ ದೇವಿ ಅಲ್ಲಿಂದ ಬಂದು ನೆಲಸಲು ತಕ್ಕುದಾದ ವೃಕ್ಷಃಸ್ಥಲವುಳ್ಳವನು ಸ್ವಾಮಿ, ಪರಮಪದದಿಂದ ಬಂದು ಸಂಸಾರಿಗಳು ಇರುತ್ತಿರುವ ಕಡೆ ಇರುತ್ತಿರುವುದರಿಂದ ಆ ಲೋಕೇಶ್ವರ ದೀಪ್ಯಮಾನನಾಗಿದ್ದಾನೆ. 'ಸಂಸಾರದಲ್ಲಿ ಬಿದ್ದಿದ್ದಾನಲ್ಲಾ! ಅಯ್ಯೋಪಾಪ!' ಎಂದು ಕನಿಕರ ತೋರಿ ರಕ್ಷಿಸಬೇಕು ನೀನು.

**ನಲ್ ಅನ್ಪುಡೈ ವೇದಿಯರ್ ಮನ್ನಿಯ ನಾಂಗೂರ್**
**ಶೆಲ್ವನ್ ತಿರುವೆಳ್ಳಕ್ಕುಳತ್ತುರೈವಾನ್ನೈ**
**ಕಲ್ಲಿನ್ ಮಲಿತೋಳ್ ಕಲಿಯನ್ ಶೊನ್ನಮಾಲೈ**
**ವಲ್ಲರೆನವಲ್ಲವರ್ ವಾನವರ್ತಾಮೇ ॥೧೦॥**

(ನಲ್ ಅನ್ಪುಡೈವೇದಿಯರ್ ಮನ್ನಿಯನಾಂಗೂರ್) ಭಕ್ತಿ ಹೊಂದಿರುವ ವೈದಿಕರುಗಳು ಹೊಂದಿಕೊಂಡು ಇರುತ್ತಿರುವ ತಿರುನಾಂಗೂರಿನಲ್ಲಿ (ತಿರುವೆಳ್ಳಕ್ಕುಳತ್ತು ಉರೈವಾನ್ನೈ) ತಿರುವೆಳ್ಳಕ್ಕುಳಕ್ಷೇತ್ರದಲ್ಲಿ ನೆಲಸಿರುವ (ಶೆಲ್ವನ್ನೈ) ನಮ್ಮ ಸ್ವಾಮಿಯನ್ನು ಉದ್ದೇಶಿಸಿ (ಕಲ್ಲಿನ್‌ಮಲಿತೋಳ್ ಕಲಿಯನ್ ಶೊನ್ನ) ಬೆಟ್ಟದಂತೆ ತೋಳ್ಬಲ ಹೊಂದಿ ಮಹಾಬಲಾಢ್ಯರಾದ ತಿರುಮಂಗೈಯಾಳ್ವಾರ್ ಅವರು ಅನುಗ್ರಹಿಸಿದ (ಮಾಲೈ) ಪರಮಭೋಗ್ಯವಾದ ಪಾಶುರಗಳನ್ನು (ವಲ್ಲರ್‌ಎನವಲ್ಲರ್) ಇವರು ಬಲ್ಲವರು ಎಂದು ಕೊಂಡಾಡುವಂತೆ ಅಧಿಕರಿಸಬಲ್ಲವರು (ವಾನವರ್‌ತಾಮ್) ನಿತ್ಯಸೂರಿ ಸಮಾನರಾಗುತ್ತಾರೆ.

ಈ ದಿವ್ಯಕ್ಷೇತ್ರದಲ್ಲಿ ಪರಮಭಕ್ತಿಯುಕ್ತರಾದ ವೈದಿಕರು ತುಂಬಿದ್ದಾರೆ. ತೋಳಿನ ಬಲದಂತೆಯೇ ಕವಿತ್ವವನ್ನು ಮಾಡುವುದರಲ್ಲಿಯೂ ಬಲವನ್ನು ಹೊಂದಿದವರು ಆಳ್ವಾರ್ ಅವರು. ತಮಗೆ ವಿಶದವಾಗಿ ಬಂದಿಲ್ಲ ಎಂಬ ಕೊರೆ ಇದ್ದರೂ ಇತರರು ಪ್ರಶಂಸೆ ಮಾಡುವಂತೆ ಬಂದಿದ್ದರೆ ಸಾಕು. ಅವರು ನಿತ್ಯಸೂರಿ ಸದೃಶರಾಗುವರು,

---

## ನಾಲ್ಕನೆಯಪತ್ತು—ಎಂಟನೆಯ ತಿರುವೊಳಿ

# 'ಕವಳೆಯಾನ್ಯೆ'

## ಪ್ರವೇಶ

'ತಿರುವೆಳ್ಳಕ್ಕುಳ' ಕ್ಷೇತ್ರದಲ್ಲಿರುವ ಪರಮಾತ್ಮನ ಪಾದಾರವಿಂದಗಳ ಮೇಲೆ ಬಿದ್ದು ಶರಣು ಹೋಗಿ 'ನನ್ನ ಪ್ರತಿಬಂಧಕಗಳನ್ನು ಕಳೆದು ಹಾಕು' ಎಂದು ಆಳ್ವಾರ್ ಬೇಡಿದರು. ಅವನೂ ಹಾಗೆಯೇ ಮಾಡಲು ಸಂಕಲ್ಪಿಸಿದ. ಆದರೆ ಪ್ರಾಪ್ಯದಲ್ಲಿ ಉಂಟಾದ ಅತಿತ್ವರೆಯ ಕಾರಣ ಆಳ್ವಾರ್ ಅವರು ತಾವಾಗಿದ್ದ ನೆಲೆಯನ್ನು ಬಿಟ್ಟು, 'ಭಗವಂತನೊಡನೆ ಸಂಶ್ಲೇಷಿಸಿ ಅಗಲಿಕೆ ಹೊಂದಿ ಆ ವಿರಹದ ಕಾರಣ ನೊಂದು ಅವನ ರೀತಿಗಳನ್ನು ಅನುಸಂಧಾನ ಮಾಡುತ್ತಾ ಮಾತಾಡಿಕೊಳ್ಳುವ ನಾಯಕಿಯೊಬ್ಬಳ ದೆಸೆಯನ್ನು ಕಂಡು ಅವಳ ತಾಯಿ ಹೇಳುವ' ಮಾತುಗಳನ್ನು ನಾಯಕೀ ಭಾವದಿಂದ ವರ್ಣಿಸುತ್ತಾರೆ.

**ಕವಳೆಯಾನ್ಯೆ ಕೊಂಬೊಶಿತ್ತಕಣ್ಣನೆನ್ರುವ್ ಕಾಮರು ಶೀರ್**
**ಕುವಳೈಮೇಹಮನ್ನ ಮೇನಿಕೊಂಡಕೋನ್ ಎನ್ನಾನ್ಯೆಎನ್ರುಂ**
**ತವಳವೂಡ ನೀಡುನಾಂಗೈ ತಾಮರೈಯಾಳ್ ಕೇಳ್ವನೆನ್ರುಂ**
**ಪವಳವಾಯಾಳ್ ಎನ್ಮಡಂದೈ ಪಾರ್ತ್ತ್ರಪಳ್ಳಿ**
**ಪಾಡುವಾಳೇ ॥೧॥**

(ಪವಳವಾಯಾಳ್) ಹವಳದಂತೆ ಚೆಂದುಟಿಯುಳ್ಳ (ಎನ್‌ಮಡಂದೈ) ನನ್ನ ಮಗಳು (ಕವಳಯಾನೈ) ಕುವಲಯಾಪೀಡವೆಂಬ ಗಜದ (ಕೊಂಬುಶಿತ್ತ ಕಣ್ಣನೆನ್ರುಂ) ದಂತಗಳನ್ನು ಮುರಿದ ಕೃಷ್ಣನೆಂದು ಹೇಳಿಕೊಂಡು, (ಕಾಮುರು ಶೀರ್) ಸ್ಪೃಹಣೀಯವಾದ (ಕುವಳೈಮೇಹಮನ್ನ) ಕುವಲಯ ಹಾಗೂ ಕಾಳಮೇಘವನ್ನು ಹೋಲುವ (ಮೇನಿಕೊಂಡ ಕೋನೆನ್ರುಂ) ದಿವ್ಯ ಶರೀರ ವನ್ನುಳ್ಳ ಸ್ವಾಮಿಯೇ ಎಂದು ಹೇಳುತ್ತಾ (ಎನ್ನಾನೈಎನ್ರುಂ) ಆನೆಯಂತೆ ನನಗೆ ಸ್ಪೃಹಣೀಯನಾದವನೇ ಎಂದು ಹೇಳಿಕೊಳ್ಳುತ್ತಾ, (ತವಳ ಮಾಡನೀಡುನಾಂಗೈ) ಧವಳ ಪ್ರಸಾದ ಪರಿವೃತವಾದ ತಿರುನಾಂಗೂರಿನಲ್ಲಿರುವ (ತಾಮರೈಯಾಳ್ ಕೇಳ್ವನೆನ್ರುಂ) ಲಕ್ಷ್ಮೀಪತಿ ಎಂದು ಹೇಳಿಕೊಂಡು (ಪಾರ್ತ್ತನ್ ಪಳ್ಳಿಪಾಡುವಾಳೇ) ಪಾರ್ತ್ತನ್‌ಪಳ್ಳಿ ದಿವ್ಯದೇಶವನ್ನು ಹಾಡಿ ಕೊಂಡಿರುತ್ತಾಳೆ.

ಅವನು ಹಂಬಲಿಸುವುದಕ್ಕೆ ತಕ್ಕುದಾದ ಅವಯವ ಶೋಭೆಯುಳ್ಳ ಈ ನನ್ನ ಮಗಳು ಅವನು ಒಲಿದ ಊರನ್ನು ಬಾಯಲ್ಲಿ ಹೇಳಿಕೊಂಡು ಚಡಪಡಿ ಸುವಂತಾಯಿತು. ಕಂಡವರ ಮೇಲೆ ಹಾಯುವ ಮದಮುದಿತವಾದ ಕುವಲ ಯಾಪೀಡದ ಕೊಂಬನ್ನು ಮುರಿದ ಕೃಷ್ಣನೇ ಎಂದು ಹೇಳುತ್ತಾಳೆ. ವಿರೋಧಿ ಯನ್ನು ಹೋಗಲಾಡಿಸದೆ ಬೆಳೆಸಿದರೂ ಕೂಡ ಬಿಡುವುದಕ್ಕಾಗದಂತೆ ಇದೆ ಅವನ ದೇಹದ ಸೌಂದರ್ಯ. ನೋಡಿದವರು ಆಶೆಪಡುವಂತಹ ಸೌಂದರ್ಯ ವನ್ನುಳ್ಳ ಕುವಲಯವೇನು, ಕಾಳಮೇಘವೇನು ಮೊದಲಾದವುಗಳ ಚೆಲುವನ್ನು ಹೊಂದಿದ ಸ್ವಾಮಿ ನಾನು ಯಾವಾಗಲೂ ನೋಡಿಕೊಂಡೇ ಇರಬೇಕಾದಂತಹ ವ್ಯಾಪಾರವನ್ನುಳ್ಳವನಾಗಿದ್ದಾನೆ. ಅವನ ದೇಹ ಕಾಂತಿಗೆ ಒಂದು ಉಪಮಾನ ವನ್ನು ಹೇಳುವುದಕ್ಕಾಗುವುದಿಲ್ಲ. ನನ್ನ ಕುವರಿಯ ಅಧರದ ಚೆಲುವನ್ನು ಕಂಡು ಅವನು ಹೀಗೆಲ್ಲಾ ಹೇಳಬೇಕಾಗಿರುವಾಗ ಇವಳೇ ಅವನಿರುವ ಊರನ್ನು ಹೇಳಿಕೊಂಡು ಹಂಬಲಿಸುತ್ತಾಳಲ್ಲಾ !

**ಕಂಜನ್‌ವಿಟ್ಟ ವೆವಾ್‌ಶಿನತ್ತ ಕಳಿರು ಅಡರ್ತ್ತ ಕಾಳೈ ಎನ್ರುಂ**
**ವೆಂಜುಮೋವಿಮಂಡ ಪೇಯಿನ್ ಉಯಿರ್ಕೈ ಉಂಡಮಾಯನ್**
**ಎನ್ರುಂ**

**ಶೆಂಶೊಲ್ ಆಳಾರ್ ನೀಡುನಾಂಗೈ ತೇವತೇವನ್ ಎನ್ರೆನ್ರೋದಿ**
**ಪೆಂಜಿಯನ್ನ ಮೆಲ್ಲಡಿಯಾಳ್ ಪಾರ್ತ ನ್‌ಪಳ್ಳಿ ಪಾಡುವಾಳೇ**
॥೨॥

(ಪಂಜಿಯನ್ನಮೆಲ್ ಅಡಿಯಾಳ್) ಪರಮಸುಕುಮಾರವಾದ ಪಾದಗಳನ್ನುಳ್ಳ ನನ್ನ ಮಗಳು (ಕಂಜನ್‌ವಿಟ್ಟವೆಮ್‌ಶಿನತ್ತಕಳಿರು) ಕಂಸನಿಂದ ಪ್ರೇರಿತವಾದ ಅತಿಕ್ರುದ್ಧವಾದ ಕುವಲಯಾಪೀಡವೆಂಬುವ ಆನೆಯನ್ನು (ಅಡರ್‌ತ್ತ ಕಾಳೈ ಎನ್ರುಂ) ನಿರಸನ ಮಾಡಿದ ಮಹಾವೀರ ಎಂದು ಹೇಳುತ್ತಾಳೆ, (ವಂಜಂಮೇವಿ ವಂದ ಪೇಯಿನ್ ಉಯಿರೈ) ವಂಚಕಿಯಾಗಿ ಬಂದ ಪೂತನಿಯ ಪ್ರಾಣವನ್ನು (ಉಂಡ ಮಾಯನ್ ಎನ್ರುಂ) ಹೀರಿಕೊಂಡ ಆಶ್ಚರ್ಯಚೇಷ್ಟಿತನೆಂದು ಹೇಳುತ್ತಾ, (ಶೆಮ್‌ಶೊಲ್ ಆಳರ್ ನೀಡುನಾಂಗೈ) ಒಳ್ಳೆಯನುಡಿಗಳನ್ನುಳ್ಳ ವಿದ್ವದ್ವಿಪ್ರರು ನಿತ್ಯ ವಾಸಮಾಡುತ್ತಿರುವ ತಿರುನಾಂಗೂರಿನಲ್ಲಿರುವ (ದೇವ ದೇವನ್ ಎನ್ರು ಎನ್ರು ಓದಿ) ದೇವಾಧಿದೇವನೆಂದು ಹಲವು ಕಾಲ ಹೇಳಿಕೊಂಡು (ಪಾರ್‌ತ್ತನ್ ಪಳ್ಳಿಪಾಡುವಾಳೇ) ಪಾರ್‌ತ್ತನ್‌ಪಳ್ಳಿ ದಿವ್ಯದೇಶವನ್ನೇ ಹಾಡಿ ಕೊಂಡಿರುತ್ತಾಳೆ.

ಕುವಲಯಾಪೀಡವನ್ನು ನಿರಸನಮಾಡಿ ಉಪಕರಿಸಿದುದರ ನೆನಪು ಮತ್ತೆ ಮೂಡಿದೆ. ಪ್ರೇರಣೆ ಮಾಡದಯೇ ಮೇಲೆ ಬೀಳುವ ಸ್ವಭಾವದ ಆನೆ ಅದು. ಪ್ರೇರಣೆ ಮಾಡುವವನ ರೀತಿಯನ್ನು ನೋಡಿದರೆ ಅದರಿಂದ ತಪ್ಪಿಸಿಕೊಳ್ಳುವುದೇ ಕಷ್ಟವಾಗುವುದು. ಇನ್ನೂ ಪ್ರಾಯ ತುಂಬದ ಕಾಲದಲ್ಲಿ ಆ ಆನೆಯನ್ನು ಶ್ರೀಕೃಷ್ಣ ನಿರಸನಮಾಡಿದ. ಪೂತನಿಯ ಪ್ರಾಣವನ್ನು ಉಂಡುದೇ ಒಂದು ಆಶ್ಚರ್ಯ. ಆ ಊರಿನಲ್ಲಿರುವವರೆಲ್ಲ ಋಜುವಾದ ವಾಕ್ಕನ್ನು ಉಳ್ಳವರು, ಆಊರಿನಲ್ಲಿರುವವರ ಹಾಗೆಯೇ ತಾನೇ ಆ ಊರಿನಲ್ಲಿ ವಾಸಮಾಡುವ ಸ್ವಾಮಿಯೂ ಇರಬೇಕಾದದ್ದು ? 'ಆಗಲುವುದಿಲ್ಲ' ಎಂದು ಹೇಳಿದಂತೆಯೇ ನಡೆದುಕೊಳ್ಳಬೇಕಲ್ಲವೇ ?

**ಅಂಡರ್‌ಕೋನ್ ಎನ್ನಾನೈ ಎನ್ರುಂ ಆಯರ್‌ಮಾದರ್**
**ಕೊಂಗೈಪುಲ್‌ಹು**
**ಶಣ್ಡ ನೆನ್ರುಂ ನಾನ್ಮರೈಹಳ್ ತೇಡಿಯೋಡುಂ ಶೆಲ್ವನೆನ್ರುಂ**

ವಣ್ಡು ಉಲವು ಪೊಟಿಲ್ ಕೊಳ್ ನಾಂಗೈಯುನ್ನ್ ಮಾಯೊನ್
ಎನ್ರು ಎನ್ರೋದಿ
ಪಣ್ಡು ಪೋಲನ್ರು ಎನ್ ಮಡನ್ದೈ ಪಾರ್ತನ್ ಪಳ್ಳಿ
ಪಾಡುವಾಳೇ ॥೩॥

(ಎನ್‌ಮಡಂದೈ) ನನ್ನ ಮಗಳು (ಪಣ್ಡು ಪೋಲನ್ರು) ಹಿಂದ ಇದ್ದ ಹಾಗೆ ಇಲ್ಲದೇ ಈಗ ಲಜ್ಜೆ, ಭಯ ಇವು ಇಲ್ಲದವಳಾಗಿ, (ಅಣ್ಣರ್ ಕೋನ್ ಎನ್ರುಂ) ನಿತ್ಯಸೂರಿನಾಥನೆಂದು ಹೇಳಿಕ್ಕೊಂಡು, (ಎನ್ನಾನೈ ಎನ್ರುಂ) ಆನೆಯಂತೆ ನನಗೆ ಸ್ಪೃಹಣೀಯನಾದವನು ಎಂದು ಹೇಳಿಕೊಂಡು, (ಆಯರ್‌ಮಾದರ್ ಕೊಂಗೈ ಪುಲ್‌ಹುಶಣ್ಣನೆನ್ರುಂ) ಗೋಪಿಕಾ ಸ್ತ್ರೀಯರ ಸ್ತನಮಂಡಲವನ್ನು ಆಲಂಗಿಸುವ ಶೀಲವನ್ನುಳ್ಳ ರಸಿಕನೆಂದು ಹೇಳಿಕೊಂಡು, (ನಾನ್ಮರೈಹಳ್ ತೇಡಿ ಓಡುಂ ಶೆಲ್ವನೆನ್ರುಂ) ನಾಲ್ಕುವೇದಗಳೂ ಹುಡುಕಿಕೊಂಡು ಓಡುವ ಸಂಪತ್ತು ಎಂದು ಹೇಳಿಕೊಂಡು, (ವಣ್ಡುಉಲವು ಪೊಟಿಲ್ ಕೊಳ್‌ನಾಂಗೈ) ಭ್ರಮರಗಳು ಸಂಚರಿಸುತ್ತಿರುವ ಉದ್ಯಾನಗಳನ್ನುಳ್ಳ ತಿರುನಾಂಗೂರಿನಲ್ಲಿ (ಮನ್ನು ಮಾಯನ್ ಎನ್ರು ಎನ್ರು) ನಿತ್ಯ ವಾಸಮಾಡುವ ಆಶ್ಚರ್ಯಭೂತನೆಂದು ಹೇಳಿಕೊಂಡು. (ಪಾರ್‌ತ್ತನ್ ಪಳ್ಳಿ ಪಾಡುವಾಳೇ) ಪಾರ್‌ತ್ತನ್ ಪಳ್ಳಿ ದಿವ್ಯ ದೇಶವನ್ನು ಹಾಡುತ್ತಿದ್ದಾಳೆ.

ಇವಳು ಆ ಭಗವಂತನ ದಿವ್ಯ ಚೇಷ್ಟಿತಗಳನ್ನು ಹೀಗೆ ಹೊತ್ತು ಕಳೆಯು ವುದಕ್ಕಾಗಿ ಹೇಳುತ್ತಿಲ್ಲ. ಅವನು ಒಂದು ವೇಳೆ ಇವಳ ಬಳಿ ಬರದೆ ಇದ್ದರೆ ತಾನೇ ಅವನಲ್ಲಿಗೆ ಹೋಗುವವಳಾಗಿದ್ದಾಳೆ ಎಂಬುದನ್ನು ಸೂಚಿಸುತ್ತಿದ್ದಾಳೆ. ಅಂಡಾಂತವರ್ತಿಗಳೆಲ್ಲರಿಗೂ ನಿಯಾಮಕನಾಗಿ ನನಗೆ ಯಥಾವಾಗಲೂ ದರ್ಶನೀಯ ವಾದ ವ್ಯಾಪಾರವನ್ನುಳ್ಳವನಾಗಿದ್ದಾನೆ ಅವನು. ತನ್ನ ಲೀಲಾ ಪರಿಕರವನ್ನು ತೋರಿ ಗೋಪಿಯರನ್ನು ವಶೀಕರಿಸಿಕೊಂಡು ಅವರೊಡನೆ ನಿತ್ಯಸಂಶ್ಲೇಷ ಮಾಡುವ ಸ್ವಭಾವದವನು ಅವನು. ಗೋಪಿಯರಿಗೆ ಹೀಗೆ ವಶವಾಗಿರುವ ಇವನು ವೇದಗಳಿಗೂ ಎಟುಕದ ಐಶ್ವರ್ಯವನ್ನುಳ್ಳವನಾಗಿದ್ದಾನೆ. ತನ್ನ ನಾಯಕನು ಇರುತ್ತಿರುವ ಊರೆಂಬುದನ್ನು ಭಾವಿಸಿ ಪಾರತ್ತನ್‌ಪಳ್ಳಿ ದಿವ್ಯ ಕ್ಷೇತ್ರವನ್ನೇ ಹಾಡುತ್ತಿದ್ದಾಳೆ ನಾಯಕಿ ಹೀಗೆ.

ಕೊಲ್ಲೈಯಾನಾಳ್ ಪರಿಶಟ್ರಿನ್ದಾಳ್ ಕೋಲ್‌ವಳೈಯಾರ್
ತವ‌ಮುಹಪ್ಪೇ
ಮಲ್ಲೈಮುನ್ನೀರ್‌ತಟ್ಟು ಇಲಂಗೈಕಟ್ಟುಅಟ್ಟಮಾಯ
ನೆಸ್ರುವ
ಶೆಲ್ವನ್ ಮಲ್‌ಹು ಮರೈಯೋರ್ ನಾಂಗೈ ದೇವ
ದೇವನೆನ್ರೆನ್ರೋದಿ
ಪಲ್‌ವಳೈಯಾಳ್ ಎನ್ ಮಡನ್ದೈ ಪಾರ್‌ತ್ತನ್‌ಪಳ್ಳಿ
ಪಾಡುವಾಳೇ ॥೪॥

(ಪಲ್‌ವಳೈಯಳಾಳ್ ಎನ್ ಮಡಂದೈ) ಅನೇಕ ಬಳೆಗಳಿಂದ ಅಲಂಕೃತವಾದ ಕೈಯುಳ್ಳ ನನ್ನ ಪುತ್ರಿಯು (ಕೋಲ್‌ವಳೈಯಾರ್ ತವ್ ಮುಹಪ್ಪೇ) ತನಗೆ ಸಮಾನ ವಯಸ್ಕರಾದ ಸ್ತ್ರೀಯರ ಮುಂದೆಯೇ (ಕೊಲ್ಲೈಯಾನಾಳ್) ಎಲ್ಲೆಯನ್ನು ಮೀರಿ ನಡೆದಳು. (ಪರಿಶು ಅಟ್ರಿನ್ದಾಳ್) ಲಜ್ಜೆಯೇ ಮೊದಲಾದ ಸ್ತ್ರೀತ್ವ ಮರ್ಯಾದೆಯನ್ನು ಬಿಟ್ಟಳು. (ಮಲ್ಲೈ ಮುನ್ನೀರ್ ತಟ್ಟು) ವಿಶಾಲವಾದ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ (ಇಲಂಗೈ ಕಟ್ಟು ಅಟ್ಟಿ) ಲಂಕಾ ಪುರಿಯನ್ನು ಧ್ವಂಸ ಮಾಡಿದ (ಮಾಯನ್ ಎನ್ರು) ಆಶ್ಚರ್ಯಚೇಷ್ಟಿತನು ಎಂದುಕೊಂಡು, (ಶೆಲ್ವಂ ಮಲ್‌ಹುಮರೈಯೋರ್ ನಾಂಗೈ) ಸಂಪದ್ಭರಿತರಾದ ವೈದಿಕರುಗಳು ಬಾಳುತ್ತಿರುವ ತಿರುನಾಂಗೂರಿನಲ್ಲಿರುವ (ದೇವ ದೇವನ್ ಎನ್ರು ಎನ್ರು) ದೇವಾಧಿದೇವನು ಎಂದು ಮತ್ತೆ ಮತ್ತೆ ಹೇಳಿಕೊಂಡು (ಪಾರ್‌ತ್ತನ್ ಪಳ್ಳಿ ಪಾಡುವಾಳೇ) ಪಾರ್‌ತ್ತನ್‌ಪಳ್ಳಿ ದಿವ್ಯದೇಶವನ್ನು ಹಾಡುತ್ತಿದ್ದಾಳೆ.

'ತನ್ನ ಮನಸ್ಸಿಗೆ ಪ್ರಿಯನಾದವನನ್ನು ಇವಳು ಹಾಡತೊಡಗಿದಳು. ಎಲ್ಲೆಯನ್ನು ದಾಟಿ ಹೊರಟು ಹೋದಳು' ಎಂದು ತಾಯಿ ಹೇಳುತ್ತಾಳೆ. ಗಾಂಭೀರ್ಯ, ಲಜ್ಜೆ ಮೊದಲಾದ ಸ್ತ್ರೀತ್ವ ಮರ್ಯಾದೆಯನ್ನು ಮೀರಿ ಹೋದಳು.ಅದೂ ತನ್ನ ಓರಗೆಯವರ ಮುಂದೆಯೇ ಹೀಗಾದಳು. ಸಮೃದ್ಧವಾಗಿ ಅಕ್ಷೋಭ್ಯವಾಗಿದ್ದ ಸಾಗರವನ್ನು ಸೇತುವೆಯಿಂದ ಬಂಧಿಸಿ ಅಪ್ರಧೃಷ್ಯವಾದ ಲಂಕೆಯನ್ನು ಧ್ವಂಸಮಾಡಿದ ಪರಮಪ್ರಣಯಿ ಅವನು ಎನ್ನುತ್ತಾಳೆ. 'ತನ್ನ ಕೈಯಲ್ಲಿ ಒಂದು ಬಳೆ ಇರುವುದನ್ನು ಕಂಡು ಅವನು ಪಡಬೇಕಾದ

ಪಾಡನ್ನೆಲ್ಲಾ ಇವಳು ಅಂಥ ಅನೇಕ ಬಳೆಗಳನ್ನು ತೊಟ್ಟುಕೊಂಡೂ ಪಡುತ್ತಾ ದುಃಖಿಸುತ್ತಿದ್ದಾಳಲ್ಲಾ ;' ಎನ್ನುತ್ತಾಳೆ. ತಾಯಿ.

ಅರಕ್ಕರ್ ಆವಿಮಾಳ ಅನ್ರು ಆೞಿಕಡಲ್‌ಶೂೞ್ ಇಲಂಗೈಶೆತ್ತ
ಕುರಕ್ಕರಶನೆನ್ರುಂ ಕೋಲ ವಿಲ್ಲಿ ಎನ್ರುಂ ಮಾಮದಿಯೈ
ನೆರುಕ್ಕುಂ ಮಾಡನೀಡು ನಾಂಗೈ ನಿನ್ಮಲನ್ ಎನ್ರೆನ್ರೋದಿ
ಪರಕ್ಕೞಿನ್ದಾಳ್ ಎನ್‌ಮಡಂದೈ ಪಾರ್‌ತ್ತನ್‌ಪಳ್ಳಿ
ಪಾಡುವಾಳೇ ॥೫॥

(ಎನ್‌ಮಡಂದೈ) ನನ್ನ ಮಗಳು (ಅನ್ರು ಅರಕ್ಕರ್ ಆವಿಮಾಳ) ಅಂದು ರಾಕ್ಷಸರ ಪ್ರಾಣಗಳು ನಾಶವಾಗುವಂತೆ (ಆೞಿಕಡಲ್ ಶೂೞ್ ಇಲಂಗೈ ಶೆತ್ತ) ಮಹಾಸಮುದ್ರದಿಂದ ಪರಿವೇಷ್ಟಿತವಾದ ಲಂಕೆಯನ್ನು ಧ್ವಂಸಮಾಡಿದ (ಕುರಕ್ಕರಶನ್ ಎನ್ರುಂ) ವಾನರವೀರರುಗಳಿಗೆ ಸ್ವಾಮಿಯಾದವನೇ ಎಂದು ಹೇಳಿಕೊಂಡು (ಕೋಲವಿಲ್ಲಿಎನ್ರುಂ) ಸುಂದರನಾದ ಬಿಲ್ಲಾಗ್ರನೆಂದು ಹೇಳಿಕೊಂಡು, (ಮಾಮದಿಯೈನೆರುಕ್ಕುಂ) ಚಂದ್ರಮಂಡಲವನ್ನು ಒತ್ತುವ (ಮಾಡಂ ನೀಡು ನಾಂಗೈ) ಪ್ರಾಸಾದಗಳಿರುವ ತಿರುನಾಂಗೂರಿನಲ್ಲಿರುವ (ನಿನ್ಮಲನ್ ಎನ್ರೆನ್ರು ಓದಿ) ಅಖಿಲ ಹೇಯ ಪ್ರತ್ಯನೀಕನು ಎಂದೆಂದು ಮತ್ತೆಮತ್ತೆ ಹೇಳಿಕೊಂಡು (ಪರಕ್ಕೞಿನ್ದಾಳ್) ದೋಷಶಾಲಿನಿಯಾಗಿ (ಪಾರ್‌ತ್ತನ್ ಪಳ್ಳಿ ಪಾಡುವಾಳೇ) ಪಾರ್ತನ್‌ಪಳ್ಳಿ ದಿವ್ಯಕ್ಷೇತ್ರವನ್ನು ಕುರಿತು ಹಾಡುತ್ತಾಳೆ.

ದೇವಿಯೊಡನೆ ಅಗಲಿಕೆಯನ್ನುಂಟುಮಾಡಿದ ಅವನನ್ನೊಬ್ಬನನ್ನಲ್ಲದೆ ಆ ರಾಕ್ಷಸಕುಲವನ್ನೇ ನಾಶಮಾಡಿದ ಆ ಸರ್ವೇಶ್ವರ. ಬಹಳ ಆಳವಾದ ಸಮುದ್ರವನ್ನೇ ಕಂದಕವನ್ನಾಗಿ ಹೊಂದಿದ್ದ ಆ ಲಂಕೆಯನ್ನು ಧ್ವಂಸಮಾಡಿದ ವಾನರ ಸಮೂಹಕ್ಕೆ ನಿರ್ವಾಹಕನಾಗಿದ್ದನವನು. ಬ್ರಹ್ಮಾದಿಗಳನ್ನು ಒಕ್ಕಲೆಬ್ಬಿಸಿದ ರಾವಣನ ಒಕ್ಕಲನ್ನೆಬ್ಬಿಸಿದವನು ಈ ಮಹಾವೀರ. ವೀರಾಧಿವೀರರು ಕಂಪಿಸುವಂತೆ ದರ್ಶನೀಯವಾದ ಬಿಲ್ಲನ್ನು ಕೈಯ್ಯಲ್ಲಿ ಹಿಡಿದಿರುವವನವನು. ಅತ್ತಲಿತ್ತ ಸಂಚರಿಸುತ್ತಲೇ ಇರುವ ಚಂದ್ರನನ್ನು ಸಂಚರಿಸುವುದಕ್ಕಾಗದಂತೆ ತಡೆದು ನಿಲ್ಲಿಸುವುವಂತೆ ತಿರುನಾಂಗೂರಿನಲ್ಲುಳ್ಳ ಉನ್ನತವಾದ ಪ್ರಾಸಾದಗಳು. ಇವಳು ಈಗ ಅಪವಾದಕ್ಕೂ ಹೆದರದವಳಾಗಿ ಬಿಟ್ಟಳು ! ಅವನಿರುವ

ಊರನ್ನು ನಾನೂ ಕೇಳುವಂತೆ ಬಾಯಿಬಿಟ್ಟು ಇವಳು ಹಾಡುತ್ತಿದ್ದಾಳೆ. 'ತೇನ ದುಃಖೇನ ರುದತೀ ನೈವ ಮಾ ಕಿಂಚಿದಬ್ರವೀತ್' ಎನ್ನುವ ದೆಶೆಯನ್ನು ಇವಳು ಮುಟ್ಟಿದ್ದಾಳೆ. ಹೀಗೆ ತಾಯಿ ಮಗಳ ಸ್ಥಿತಿಯನ್ನು ವರ್ಣಿಸುತ್ತಾಳೆ.

ಞಾಲಂ ಮುಂತ್ತುಂ ಉಂಡುಮಿಟ್‌ನ್ದ ನಾತನೆನ್ರುಂ
ನಾನಿಲಂಶೂಟ್
ವೇಲೈ ಅನ್ನ ಕೋಲಮೇನಿವಣ್ಣನ್‌ಎನ್ರುಂ ಮೇಲೆಟುನ್ದು
ಶೇಲುಹಳುಂ ವಯಲ್‌ಕೊಳ್‌ನಾಂಗೈ ದೇವದೇವನ್
ಎನ್ರೆನ್ರೋದಿ
ಪಾಲಿನ್ನಲ್ಲ ಮೆಲ್‌ಮೊಟಿಯಾಳ್ ಪಾರ್‌ತ್ತನ್‌ಪಳ್ಳಿ
ಪಾಡುವಾಳೇ ॥೬॥

(ಪಾಲಿನ್ ನಲ್ಲಮೆಲ್‌ಮೊಟಿಯಾಳ್) ಪರಮ ಭೋಗ್ಯವಾದ ಮಾತನ್ನಾಡುವ ಸ್ವಭಾವದವಳಾದ ನನ್ನ ಮಗಳು (ಞಾಲಂಮುಂತ್ತುಂ) ಭೂಮಂಡಲಗಳೆಲ್ಲ ವನ್ನೂ (ಉಣ್ಡುಉಮಿಟ್‌ನ್ದ) ಉಂಡು ಹೊರಗೆ ಉಗಿದ (ನಾದನೆನ್ರುಂ) ನಾಥನೆಂದು ಹೇಳಿಕೊಂಡೂ, (ನಾನಿಲಂಶೂಟ್) ಭೂಮಿಯನ್ನು ಸುತ್ತು ವರಿದುಕೊಂಡಿರುವ (ವೇಲೈ ಅನ್ನ) ಸಾಗರದೋಪಾದಿಯಲ್ಲಿ (ಕೋಲಮೇನಿ ವಣ್ಣನ್ ಎನ್ರುಂ) ಅತಿಸುಂದರವಾದ ದಿವ್ಯಮಂಗಳವಿಗ್ರಹವಿಶಿಷ್ಟನೆಂದು ಹೇಳಿಕೊಂಡೂ, (ಶೇಲ್ ಮೇಲೆಟುನ್ದುಉಹಳುಂ) ಮತ್ಸ್ಯಗಳು ಮೇಲಕ್ಕೆ ಚಿಮ್ಮಿನಲಿಯುವಂತಹ ಸ್ಥಳವಾದುದೂ, (ವಯಲ್‌ಕೊಳ್) ಗದ್ದೆಗಳಿಂದ ಕೂಡಿರುವುದೂ ಆದ (ನಾಂಗೈ ದೇವದೇವನ್ ಎನ್ರುಎನ್ರು ಓದಿ) ತಿರು ನಾಂಗೂರಿನಲ್ಲಿರುವ ದೇವಾಧಿದೇವನೆಂದು ಹೇಳಿಕೊಂಡು (ಪಾರ್‌ತ್ತನ್‌ಪಳ್ಳಿ ಪಾಡುವಾಳೇ) ಪಾರ್‌ತ್ತನ್‌ಪಳ್ಳಿ ದಿವ್ಯದೇಶವನ್ನು ಕುರಿತು ಹಾಡುತ್ತಾಳೆ.

ಜಗತ್ತಿಗೆ ಬಂದ ಪ್ರಲಯಾಪತ್ತನ್ನು ನೀಗಿದ ಮಹಾನುಭಾವನವನು. ಸರ್ವವಿಧವಾದ ರಕ್ಷಣೆಗಳನ್ನೂ ಮಾಡುವವನು ಅವನು. ನಿರುಪಾಧಿಕ ಶೇಷಿ ಯಾಗಿರುವ ಅವನು ಆಪತ್ಸಖನಾಗಿದ್ದಾನೆ. ನೆಯ್‌ದಲ್, ಮರುದಂ, ಮುಲ್ಲೈ, ಕುರಂಜಿ–ಎಂದು ಹೇಳುವಂತಿರುವ ಭೂಮಿಯನ್ನೆಲ್ಲಾ ಬಳಸಿರುತ್ತಿ ರುವ ಸಮುದ್ರದಂತೆ ದರ್ಶನೀಯವಾದ ವರ್ಣವನ್ನು ಹೊಂದಿರುವನವನು.

ಜಲಚರಸತ್ವಗಳೂ ಸಹ ಆನಂದದಿಂದಿರುವಂತಹ ಕ್ಷೇತ್ರ, ಆ ಸ್ವಾಮಿ ಇರುವ ದೇಶ. 'ಮಧುರಾ ಮಧುರಾಲಾಪಾ' ಎಂದಂತೆ ಇವಳ ಮಾತನ್ನು ಕೇಳಿ ಅವನು ಮನಸೋತು ಬಾಯಿಬಾಯಿ ಬಿಡಬೇಕಾಗಿರುವಲ್ಲಿ ಇವಳೇ ಅವನಿಗಾಗಿ ಹೀಗೆ ಹಂಬಲಿಸುತ್ತಾ ಇರಬೇಕಾಗಿದೆಯಲ್ಲಾ' ಎಂದು ತಾಯಿ ಹೇಳುತ್ತಾಳೆ.

ನಾಡಿ ಎನ್ದನ್‌ಉಳ್ಳಂ ಕೊಂಡ ನಾತನೆನ್ರುಂ ನಾನ್ಮರೈಹಳ್
ತೇಡಿ ಎನ್ರುಂ ಕಾಣಮಾಟ್ಟಾ ಶೆಲ್ವನೆನ್ರುಂ, ಶಿರೈಕೊಳ್‌ವಣ್ಡು
ಶೇಡು ಉಲವು ಪೊಳಿಲ್ ಕೊಳ್ ನಾಂಗೈ ತೇವತೇವ
ನೆನ್ರೆನ್ರೋದಿ
ಪಾಡಕಂಶೇರ್ ಮೆಲ್ಲಡಿಯಾಳ್ ಪಾರ್ತ್ತನ್‌ಪಳ್ಳಿ
ಪಾಡುವಾಳೇ ॥೭॥

(ಪಾಡಕಂಶೇರ್ ಮೆಲ್ಲಡಿಯಾಳ್) ನೂಪುರದಿಂದಲಂಕೃತವಾದ ಮೃದುವಾದ ಪಾದವನ್ನುಳ್ಳ ನನ್ನ ಮಗಳು (ನಾಡಿ ಎನ್ದನ್‌ಉಳ್ಳಂ ಕೊಂಡನಾದನೆನ್ರುಂ) ಹುಡುಕಿ ಬಂದು ನನ್ನ ಹೃದಯವನ್ನು ವಾಸಸ್ಥಾನವನ್ನಾಗಿ ಮಾಡಿಕೊಂಡ ಸ್ವಾಮಿ ಎಂದೂ, (ನಾಲ್‌ಮರೈಹಳ್) ನಾಲ್ಕು ವೇದಗಳು (ತೇಡಿಎನ್ರುಂ ಕಾಣಮಾಟ್ಟಾ ಶೆಲ್ವನೆನ್ರುಂ) ಎಷ್ಟು ಕಾಲ ಹುಡುಕಿದರೂ ಕಾಣಲಾರದಂತಹ ಶ್ರೀಮಾನ್ ಎಂದೂ, (ಶಿರೈಕೊಳ್‌ವಂಡು) ಗರಿಗಳನ್ನುಳ್ಳ ಭ್ರಮರಗಳು (ಶೇಡು ಉಲವು ಪೊಳಿಲ್‌ಕೊಳ್ ನಾಂಗೈ) ಗುಂಪುಗುಂಪಾಗಿ ಸಂಚರಿಸುತ್ತಿರುವ ಉದ್ಯಾನಗಳನ್ನುಳ್ಳ ತಿರುನಾಂಗೂರಿನಲ್ಲಿರುವ (ದೇವದೇವನೆನ್ರು ಎನ್ರು ಓದಿ) ದೇವಾಧಿದೇವನೆಂದೂ ಹೇಳಿಕೊಂಡು (ಪಾರ್ತ್ತನ್‌ಪಳ್ಳಿಪಾಡುವಾಳೇ) ಪಾರ್ತ್ತನ್‌ಪಳ್ಳಿ ದಿವ್ಯದೇಶವನ್ನು ಕುರಿತು ಹಾಡುತ್ತಾಳೆ.

ನನ್ನನ್ನು ಹುಡುಕಿಕೊಂಡು ಬಂದು ನನ್ನ ಮನಸ್ಸನ್ನು ತನ್ನದನ್ನಾಗಿ ಮಾಡಿಕೊಂಡುಬಿಟ್ಟ ಶೇಷಿಯವನು. ನನ್ನನ್ನು ಹೀಗೆ ತನಗಾಗಿ ಮಾಡಿಕೊಂಡ ಅವನನ್ನು ವೇದಗಳು ಇನ್ನೂ ಕಾಣುವುದಕ್ಕಾಗದೆ ಹುಡುಕುತ್ತಲೇ ಇವೆ. ಮನೋಹರವಾದ ಉದ್ಯಾನಗಳಲ್ಲಿ ದುಂಬಿಗಳ ಹಿಂಡು ಸಂಚರಿಸುತ್ತಾ ಇರುವಂಥ ತಿರುನಾಂಗೂರಿನಲ್ಲಿರುವ ಆ ದೇವದೇವನನ್ನು ಇವಳು ಹಾಡುತ್ತಾ ಇದ್ದಾಳೆ.

**ಉಲಹಂ ಏತ್ತುಂ ಒರುವನೆನ್ರುಂ ಒಣ್ ಶುಡರೋಡು**
**ಉಂಬರ್ ಎಯ್‌ದಾ**
**ನಿಲವುಂ ಆಟಿಪ್ಪಡೈಯೆನೆನ್ರುಂ ನೇಶನೆನ್ರುಂ ತೆನ್ ತಿಶೈಕ್ಕು**
**ತಿಲದಮನ್ನ ಮಱೈಯೋರ್ ನಾಂಗೈ ದೇವದೇವನೆನ್ರೆನ್ರೋದಿ**
**ಪಲರುಂ ಏಶ ಎನ್ ಮಡಂದೈ ಪಾರ್‌ತ್ತನ್ ಪಳ್ಳಿ**
**ಪಾಡುವಾಳೇ ॥೮॥**

(ಎನ್‌ಮಡಂದೈ) ನನ್ನ ಮಗಳಾದ ಇವಳು (ಉಲಹಂಏತ್ತುಂಒರುವನ್ ಎನ್ರುಂ) ಲೋಕವೆಲ್ಲಾ ಸ್ತುತಿಸುವ ಅದ್ವಿತೀಯನು ಎಂದು ಹೇಳುತ್ತಾ (ಒಣ್‌ಶುಡರೋಡು ಉಂಬರ್) ಚಂದ್ರಸೂರ್ಯರುಗಳಿಂದಲೂ ಮತ್ತು ದೇವತೆಗಳಿಂದಲೂ (ಎಯ್‌ದಾ ನಿಲವುಮ್) ಸಮೀಪಿಸುವುದಕ್ಕಾಗದಂತೆ ಜ್ವಲಿಸುವ (ಆಟಿಪಡೈಯೆನೆನ್ರುಂ) ಶ್ರೀಸುದರ್ಶನವನ್ನು ಆಯುಧವನ್ನಾಗಿ ಹೊಂದಿದವನು ಎಂದು ಹೇಳುತ್ತಾ, (ನೇಶನೆನ್ರುಂ) ಭಕ್ತವತ್ಸಲನೆಂದು ಹೇಳುತ್ತಾ, (ತೆನ್ ದಿಶೈಕ್ಕು ತಿಲದಮನ್ನ) ದಕ್ಷಿಣ ದಿಕ್ಕಿಗೆ ತಿಲಕಪ್ರಾಯವಾಗಿ (ಮಱೈಯೋರ್ ನಾಂಗೈ) ವೈದಿಕರು ತುಂಬಿರುವ ತಿರುನಾಂಗೂರಿನಲ್ಲಿರುವ (ದೇವದೇವನ್ ಎನ್ರು ಎನ್ರು ಓದಿ) ದೇವಾಧಿದೇವನೆಂದು ಹೇಳಿಕೊಂಡು (ಪಲರುಂಏಶ) ಲೋಕದವರೆಲ್ಲರೂ ಆಡಿಕೊಳ್ಳುವಂತೆ (ಪಾರ್‌ತ್ತನ್‌ಪಳ್ಳಿ ಪಾಡುವಾಳೇ) ಪಾರ್‌ತ್ತನ್‌ಪಳ್ಳಿ ದಿವ್ಯಕ್ಷೇತ್ರವನ್ನು ಹಾಡುತ್ತಾಳೆ.

'ಅವನು ನಿನ್ನ ಮನಸ್ಸನ್ನು ಅಪಹರಿಸಿದನೆಂದು ನೀನು ಅವನಿಗಾಗಿ ಹಂಬಲಿಸಿದರೆ ಲೋಕದವರು ನಿನ್ನನ್ನು ನಿಂದಿಸುವುದಿಲ್ಲವೇ ?'—ಎಂದು ಕೇಳಿದರೆ ಅವಳು ಹೇಳುತ್ತಾಳೆ—'ನಾನೊಬ್ಬಳೇ ಹೀಗೆ ಅವನಿಗಾಗಿ ಹಾತೊರೆಯುವೆನೋ ? ಲೋಕವೆಲ್ಲಾ ಅವನನ್ನು ಸ್ತುತಿಸುವುದಿಲ್ಲವೇ ? ಅವನು ಸರ್ವಸಮಾಶ್ರಯಣೀಯನಲ್ಲವೇ ? ಬ್ರಹ್ಮಾದಿದೇವತೆಗಳೂ ಹತ್ತಿರ ಬರುವುದಕ್ಕಾಗದಂತೆ ಜ್ವಲಿಸುವ ಸುದರ್ಶನ ಚಕ್ರವನ್ನು ಆ ಸ್ವಾಮಿ ಆಯುಧವನ್ನಾಗಿ ತನ್ನ ಹಸ್ತದಲ್ಲಿ ಧರಿಸಿಲ್ಲವೋ ? ಭಕ್ತರ ಒಗೆಗೆ ಅವನಿಗೆ ಇರುವ ಪ್ರೇಮವೇ ರೂಪಗೊಂಡಂತೆ ಅವನಿರುವನಲ್ಲವೇ ?'—ಎಂದು. ದಕ್ಷಿಣದಿಕ್ಕಿಗೇ ತಿಲಕಪ್ರಾಯರಾದ ಬ್ರಾಹ್ಮಣರು ಇರುವ ತಿರುನಾಂಗೈಯಲ್ಲಿ ಅವನು ನೆಲಸಿದ್ದಾನಷ್ಟೇ ? ಹೀಗೆ ಆ ನಾಯಕಿ ಅವನನ್ನು ಕುರಿತು ಆಡುತ್ತಾಳೆ.

ಕಣ್ಣನೆನ್ರುಂ ವಾನವರ್‌ಹಳ್‌ಕಾದಲಿತ್ತು ಮಲರ್‌ಹಳ್‌ತೂವುಂ
ಎಣ್ಣನೆನ್ರುಂ ಇನ್ಬನೆನ್ರುಂ ಏೞುಲಹಕ್ಕಾದಿ ಎನ್ರುಂ
ತಿಣ್ಣಮಾಡ ನೀಡುನಾಂಗೈ ದೇವದೇವನ್ ಎನ್ರೆನ್ರು ಓದಿ
ಪಣ್ಣೆನನ್ನ ಮೆಲ್‌ಮೊೞಿಯಾಳ್ ಪಾರ್‌ತ್ತನ್‌ಪಳ್ಳಿ
ಪಾಡುವಾಳೇ ॥೯॥

(ಪಣ್ಣೆನನ್ನಮೆಲ್ ಮೊೞಿಯಾಳ್) ಪರಮಭೋಗ್ಯವಾದ ಮೃದುವಚನ ಗಳನ್ನಾಡುವ ನನ್ನ ಪುತ್ರಿಯು (ಕಣ್ಣನೆನ್ರುಂ) ಶ್ರೀಕೃಷ್ಣನೇ ಎಂದು ಹೇಳಿ ಕೊಂಡು, (ವಾನವರ್‌ಹಳ್) ದೇವತೆಗಳು (ಕಾದಲಿತ್ತು) ಭಕ್ತಿಪೂರ್ವಕವಾಗಿ (ಮಲರ್‌ಹಳ್ ತೂವುಂ ಎಣ್ಣನೆನ್ರುಂ) ಪುಷ್ಪಗಳನ್ನು ಸಮರ್ಪಿಸುವಂತೆ ಅವರ ಮನಸ್ಸಿನಲ್ಲಿರುವವನೇ ಎಂದು ಹೇಳಿಕೊಂಡು, (ಇನ್ಬನೆನ್ರುಂ) ಆನಂದದಾಯಕ ನೆಂದು ಹೇಳಿಕೊಂಡು, (ಏೞುಲಹುಕ್ಕು ಆದಿ ಎನ್ರುಂ) ಸಪ್ತಲೋಕಗಳಿಗೂ ಕಾರಣಭೂತನೆಂದು ಹೇಳಿಕೊಂಡು, (ತಿಣ್ಣಮಾಡ ನೀಡು ನಾಂಗೈ) ಸುದೃಢ ಪ್ರಾಕಾರ ಪರಿವೇಷ್ಟಿತವಾದ ತಿರುನಾಂಗೂರಿನಲ್ಲಿರುವ (ದೇವದೇವನ್ ಎನ್ರು ಓದಿ) ದೇವಾಧಿದೇವನೆಂದು ಹೇಳಿಕೊಂಡು (ಪಾರ್‌ತ್ತನ್‌ಪಳ್ಳಿಪಾಡುವಾಳೇ) ಪಾರ್‌ತ್ತನ್‌ಪಳ್ಳಿ ದಿವ್ಯಕ್ಷೇತ್ರವನ್ನು ಕುರಿತು ಹಾಡುತ್ತಾಳೆ.

'ಇವನು ಆಶ್ರಿತರಲ್ಲಿ ವ್ಯಾಮೋಹವುಳ್ಳವನು ಎಂಬುದು ನಿನಗೆ ಹೇಗೆ ತಿಳಿಯಿತು? ಲೋಕದವರು ಇವನನ್ನು ಆಶ್ರಯಿಸಿದರೋ? ಹಾಗೆ ಆಶ್ರಯಿಸಲು ಕಾರಣ ಯಾವುದು?'—ಎಂದು ಇವಳನ್ನು ದೂಷಿಸಲು ಬಂದ ಕೆಲವರು ಕೇಳಲು ಅವರಿಗೂ ತಿಳಿಯುವಂತೆ 'ಪೆಣ್‌ಪಿತ್ತನ್' ಎಂದು ಪ್ರಸಿದ್ಧ ನಾದ ಕೃಷ್ಣನನ್ನು ಹೇಳುತ್ತಾಳೆ. 'ಕೃಷ್ಣ ಏವ ಹಿ ಲೋಕಾನಾಂ ಉತ್ಪತ್ತಿರಪಿ ಚಾಪ್ಯಯಃ' ಎಂದು ಹೇಳಿಲ್ಲವೋ? ಭಕ್ತರ ಮನೋರಥದಲ್ಲಿ ನಿಂತವನು ಅವನೇ ಅಲ್ಲವೋ? ಅವನೇ ಆನಂದಾವಹನು. ಅವನೇ ಅಲ್ಲವೇ ತಿರು ನಾಂಗೂರಿನಲ್ಲಿರುವ ದೇವಾಧಿ ದೇವನು? ಹೀಗೆ ಹೇಳಿ ಆ ಸ್ವಾಮಿಯು ಇರುವ ಊರನ್ನು ಎಲ್ಲರಿಗೂ ತಿಳಿಯುವಂತೆ ಹಾಡುತ್ತಾಳೆ ಈ ನಾಯಕಿ.

ಪಾರುಳ್ ನೆಲ್ಲ ಮರೈಯೋರ್ ನಾಂಗೈ ಪಾರ್ತ್ತನ್ ಪಳ್ಳಿ
ಶೆಂಗಣ್ ಮಾಲೈ
ವಾರ್ ಕೊಳ್ ನೆಲ್ಲಮುಲೈ ಮಡವಾಳ್ ಪಾಡಲೈ
ತಾಯ್ ಮೊಟಿಂದ ಮಾತ್ತಂ
ಕೂರ್ ಕೊಳ್ ನೆಲ್ಲವೇಲ್ ಕಲಿಯನ್ ಕೂರು
ತಮಿಳ್ ಪತ್ತುಂ ವಲ್ಲಾರ್
ಏರ್ ಕೊಳ್ ನೆಲ್ಲವೈಕುಂದತ್ತುಳ್ ಇನ್ಬಂ ನಾಳುಂ
ಎಯ್ ದುವಾರೇ ॥೧೦॥

(ಪಾರುಳ್‌ನೆಲ್ಲ) ಭೂಮಂಡಲದಲ್ಲಿ ವಿಲಕ್ಷಣವಾಗಿರುವ (ಮರೈಯೋರ್‌ನಾಂಗೈ) ವೈದಿಕ ಜನರಿಂದ ಅಲಂಕೃತವಾದ ತಿರುನಾಂಗೂರಿನಲ್ಲಿ (ಪಾರ್ತ್ತನ್‌ಪಳ್ಳಿ) ಪಾರ್ತ್ತನ್‌ಪಳ್ಳಿ ಎನ್ನುವ ದಿವ್ಯಕ್ಷೇತ್ರದಲ್ಲಿರುವ (ಶೆಂಗಣ್‌ಮಾಲೈ) ಪುಂಡರೀಕಾಕ್ಷನಾದ ಭಗವಂತನನ್ನು ಕುರಿತು (ವಾರ್‌ಕೊಳ್‌ನೆಲ್ಲಮುಲೈಮಡವಾಳ್) ಕಂಚುಕವನ್ನು ವಕ್ಷಃ ಸ್ಥಲದಲ್ಲಿ ಧರಿಸಿದ ಪರಕಾಲ ನಾಯಕಿಯು (ಪಾಡಲೈ) ಈ ಹಾಡಂಗಳನ್ನು ಮನಸ್ಸಿಗೆ ತಂದುಕೊಂಡು (ತಾಯ್ ಮೊಟಿನ್ದ ಮಾತ್ತಂ) ತಾಯಿಯುಂ ಹೇಳಿದ ಮಾತುಗಳಾಗಿ (ಕೂರ್‌ಕೊಳ್ ನೆಲ್ಲವೇಲ್ ಕಲಿಯನ್) ಹರಿತವಾದ ವೇಲಾಯುಧವನ್ನು ಹಿಡಿದ ತಿರುಮಂಗೈ ಆಳ್ವಾರವರು (ಕೂರು) ಅನುಗ್ರಹಿಸಿದ (ತಮಿಳ್‌ಪತ್ತುಂವಲ್ಲಾರ್) ಈ ಹತ್ತು ಪಾಶುರಗಳನ್ನು ಬಲ್ಲವರು (ಏರ್‌ಕೊಳ್‌ನೆಲ್ಲವೈಕುಂದತ್ತುಳ್) ಪರಮಶ್ರೇಷ್ಠವಾದ ಪರಮಪದದಲ್ಲಿ (ನಾಳುಂ) ಸದಾಕಾಲವೂ (ಇನ್ಬಂಎಯ್‌ದುವಾರ್) ಆನಂದವನ್ನು ಹೊಂದುವವರಾಗುತ್ತಾರೆ.

ವಾತ್ಸಲ್ಯವನ್ನೂ ವ್ಯಾಮೋಹವನ್ನೂ ಉಳ್ಳವರಾಗಿ ಪಾರ್ತ್ತನ್ ಪಳ್ಳಿಯಲ್ಲಿ ನೆಲಸಿರುವ ಪರಮಾತ್ಮನನ್ನು ಕುರಿತು ನಾಯಿಕಾಭಾವವನ್ನು ಹೊಂದಿದ ಆಳ್ವಾರ್ ಅವರು ಹಾಡಿದ ಈ ಹತ್ತು ಪಾಶುರಗಳನ್ನು ಅನುಸಂಧಾನ ಮಾಡುವವರು ಎಂದೂ ಅಗಲಿಕೆಯೇ ಉಂಟಾಗದಂತಹ ಪರಮ ಪದದಲ್ಲಿ ಇರುವವರಾಗಿ ಆನಂದ ನಿರ್ಭರರಾಗುವರು.

## ನಾಲ್ಕನೆಯ ಪತ್ತು—ಒಂಭತ್ತನೆಯ ತಿರುವೊೞಿ

# 'ನುಮ್ಮೈತೊೞುದೋಮ್'

## ಪ್ರವೇಶ

ಭಗವಂತನನ್ನು ಪಡೆಯಬೇಕೆಂಬ ಉತ್ಕಟವಾದ ಆಶೆಯನ್ನು ಆಳ್ವಾರ್ ಹೊಂದಿದ್ದರು. ಹಿಂದಿನ ದಶಕದಲ್ಲಿ ಆ ಆಶೆಯ ತೀವ್ರತೆ ಅಭಿವ್ಯಕ್ತವಾಯಿತು. ಪ್ರಕೃತಿಸಂಬಂಧವನ್ನು ಬಿಡಿಸಬೇಕೆಂದು ಬೇಡಿದ ಆಳ್ವಾರರಿಗೆ ಭಗವಂತನು ಒಲಿದು ಬಂದು ನೆಲಸಿರುವ ಕ್ಷೇತ್ರಗಳಲ್ಲಿ ಪ್ರಾವಣ್ಯ ಉಂಟಾಯಿತು. ಆ ಭಗವಂತನೂ ಸಹ ಶರೀರಾಂತದಲ್ಲಿ ಪ್ರಕೃತಿ ಸಂಬಂಧವನ್ನು ಕಳೆಯಲು ಸಂಕಲ್ಪಿಸಿ, ದಿವ್ಯ ದೇಶಗಳಲ್ಲಿ ತನ್ನ ರೂಪವನ್ನು ತೋರಿಸಿಕೊಟ್ಟನು. ಅರ್ಚಾವತಾರಾವಸ್ಥೆಯಲ್ಲಿ ಇವನು ಮಾತಾಡುವುದಿಲ್ಲವೆಂಬುದನ್ನು ಇವರು ಎಣಿಸಲಿಲ್ಲ. ಸರ್ವಾಪೇಕ್ಷಿತಪ್ರದನಾದ ಸ್ವಾಮಿ ನನ್ನ ಆಶೆಯನ್ನು ಪೂರ್ತಿಗೊಳಿಸುವನೆಂಬ ಆಶೆಯಿಂದ, 'ಪುಂಡರೀಕ', 'ಅಕ್ರೂರ' ಮೊದಲಾದವರ ಮೇಲೆ ವಿಶೇಷ ಕಟಾಕ್ಷ ಬೀರಿದಂತೆ ತಮ್ಮ ಮೇಲೆಯೂ ಕಟಾಕ್ಷಗಳನ್ನು ಬೀರುವನೆಂದೂ, ಅವನಿಗೆ ನಿತ್ಯಕೈಂಕರ್ಯವನ್ನು ತಾವು ಮಾಡಬೇಕೆಂಬ ಆಶೆ ಕೈಗೂಡುವುದೆಂದೂ ಹಂಬಲಿಸಿದರು. ಹಾಗೆ ಆದುದನ್ನು ಅವರು ಕಾಣಲಿಲ್ಲ. ಅದರಿಂದ ಬಹಳ ಅವಸನ್ನರಾದರು. ನಾಯಕನೊಡನೆ ಪ್ರಣಯ ಕಲಹ ಮಾಡಿದ ನಾಯಕಿ ಕೋಪದಿಂದ ಆಡುವ ಹಾಗೆ ಆಳ್ವಾರ್ ಅವರು ತಮ್ಮ ನಿಲುವಿನಲ್ಲಿ ಹೇಳುವ ಭಾವದಿಂದ ಪ್ರೇರಿತರಾಗಿ ಆಕ್ಷೇಪ ಗರ್ಭವಾದ ಮಾತುಗಳನ್ನು ಇಲ್ಲಿ ಹೇಳುತ್ತಾರೆ.

**ನುಮ್ಮೈ ತೊೞುದೋಂ ನುನ್ದನ್ ಪಣಿಶೆಯ್ದಿರುಕ್ಕುಂ**
**ನುಮ್ಮಡಿಯೋಂ**
**ಇಮ್ಮೈಕ್ಕು ಇನ್ಬಂ ಪೆಱ್ಱೋಂ ಎಂದಾಯ್ ಇಂದಳೂರೀರೇ**
**ಎಮ್ಮೈ ಕಡಿದಾಳರುಮಂ ಅರುಳಿ ಆವಾನೆನ್ರು ಇರಂಗಿ**
**ನುಮ್ಮೈ ಒರುಕಾಲ್ ಕಾಟ್ಟಿನಡನ್ದಾಲ್ ನಾಂಗಳ್**
**ಉಯ್ಯೋಮೋ ॥೧॥**

(ಇಂದಳೂರೀರ್ ಎನ್ದಾಯ್) ತಿರುವಿಂದಳೂರಿನಲ್ಲಿರುವ ಭಗವಂತನೇ, (ನುಮ್ಮೈತೊಟುದೋಂ) ನಿಮ್ಮನ್ನು ಆಶ್ರಯಿಸಿದೆವು, (ನುಂದಂಪಣಿಶೆಯ್‌ದು) ನಿಮಗೆ ಕೈಂಕರ್ಯವನ್ನು ಮಾಡಿ (ಇರುಕ್ಕುಂ ನುಮ್ಮಡಿಯೋಂ) ಸತ್ತೆಹೊಂದಿ ಇರುತ್ತಿರುವ ನಿಮ್ಮ ಕೈಂಕರ್ಯಪರರಾಗಿದ್ದೇವೆ. (ಇಮ್ಮೈಕ್ಕು ಇನ್ಬಂ ಪೆತ್ತೋಂ) ಈ ಜನ್ಮದಲ್ಲಿಯೇ ನಿಮ್ಮನ್ನು ಅರಿಯುವಂತಹ ಆನಂದಭಾಗ್ಯ ಪಡೆದೆವು. (ಎಮ್ಮೈ ಆ ಆ ಎನ್ರು ಇರಂಗಿ) ಇಂಥ ನಮ್ಮ ವಿಷಯದಲ್ಲಿ 'ಅಯ್ಯೋ' ಎಂದು ಮನಸ್ಸು ಕರಗಿ (ಕಡಿದಾಕರುಮಂ ಅರುಳಿ) ಶೀಘ್ರವಾಗಿ ಒಂದು ಕೈಂಕರ್ಯದಲ್ಲಿ ನಿಯಮಿಸಿ (ನಮ್ಮೈ ಒರುಕಾಲ್ ಕಾಟ್ಟಿನಡಂದಾಲ್) ಒಂದು ಸಲವಾದರೂ ನಿಮ್ಮ ಸೇವೆಯನ್ನು ಅನುಗ್ರಹಿಸಿ ನಮ್ಮ ಕಣ್ಣಿನ ಮುಂದೆ ನಡೆದುಬಂದರೆ (ನಾಂಗಳ್ ಉಯ್ಯೋಮೋ) ನಾವು ಉಜ್ಜೀವಿಸಿ ಹೋಗ ಲಾರೆವೋ ?

'ತೇಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ' ಎಂದು ಹೇಳಿದಂತೆ ನಾವು ಭಜಿಸಲಿಲ್ಲ. ನಿನ್ನನ್ನೇ ನೇರವಾಗಿ ನಾವು ಭಜಿಸಿದೆವು. ನಿನ್ನ ಅಗಲಿಕೆಯನ್ನು ಮರೆಯುವಂತೆ ಚದುರಂಗವೇ ಮೊದಲಾದ ಯಾವುದನ್ನೂ ನಾವು ಆಶ್ರಯಿಸಿಲ್ಲ. ನಿನ್ನ ಕೈಂಕರ್ಯ ಲಭಿಸದ ಕಾರಣ ಆತ್ಮಧಾರಣ ಮಾಡಿಕೊಳ್ಳಲು ಅಶಕ್ತರಾಗಿ ಹೀಗೆ ಹೇಳುತ್ತಿದ್ದೇವೆ. 'ನ ಚ ಸೀತಾತ್ವಯಾ ಹೀನಾ ನ ಚಾಹಂ ಅಪಿ ರಾಘವ । ಮುಹೂರ್ತಮಪಿ ಜೀವಾವಃ ಜಲಾನ್ಮತ್ಸ್ಯಾವಿವೋದ್ಧೃತೌ॥' ಎಂದು ಹೇಳಿದಂತೆ ಆಗಿದೆ ನಮ್ಮ ಸ್ಥಿತಿ.

ಭಗವಂತನ ಜ್ಞಾನಲಾಭದಿಂದ ಬಂದ ಆನಂದವನ್ನು ಹೇಳುತ್ತಾರೆ. ಆ ಲಾಭವನ್ನೇ ಹೇಳುತ್ತಿರುವಾಗ ಈಗ ತೃಪ್ತಿ ಸಂಗತವಾಗುವುದೇ ಎಂದರೆ ಆ ಜ್ಞಾನಲಾಭವೇ ತಾನೇ ಹೀಗೆ ಪರಿವೇದನ ಮಾಡುವಂತೆ ಮಾಡುವುದು. ಇಲ್ಲದಿದ್ದರೆ ಇತರರಂತೆ ಉಂಡು ಉಟ್ಟು ಹೊತ್ತುಕಳೆದು ತಿರಿಯಬಹುದಾಗಿತ್ತು.

ಶ್ರೀ ವೈಕುಂಠವನ್ನು ಬಿಟ್ಟು ಬಂದು ಇಂದಳೂರಿನಲ್ಲಿ ಸ್ವಾಮಿ ಸಾನ್ನಿಧ್ಯ ಕೊಡುತ್ತಿದ್ದಾನೆ. 'ಈ ಆತ್ಮವಸ್ತು ನಿನಗೆ ಶೇಷ' ಎಂದು ನಾವು ಬೇಡುವಂತೆ ನಮಗೆ ಜ್ಞಾನವನ್ನಿತ್ತು ಕರುಣಿಸಿದ್ದಾನೆ ಅವನು. 'ಈಗ ನಿಮಗೆ ಇನ್ನೇನಾಗ ಬೇಕು ?' ಎಂದು ಅವನು ಹೇಳಿದರೆ ಇವರು ಹೇಳುತ್ತಾರೆ—'ಆ ಶೇಷತ್ವಕ್ಕೆ ಅನುರೂಪವಾದ ಕೈಂಕರ್ಯವನ್ನು ನಮ್ಮಿಂದ ನೀನು ಮಾಡಿಸಿಕೊಳ್ಳಬೇಕು'—

ಎಂದು. 'ನಿವೇದಯತ ಮಾಂ ಕ್ಷಿಪ್ರಂ' ಎಂದ ವಿಭೀಷಣ. ಏಕೆಂದರೆ ರಾವಣ ಭವನದಲ್ಲಿ ಅವನಿಗೆ ಇರುವುದಕ್ಕಾಗಲಿಲ್ಲ, ರಾಮನ ಗೋಷ್ಠಿಯಲ್ಲಿ ಸೇರಲಾಗಲಿಲ್ಲ, ಹಾಗೆ ಜ್ಞಾನಲಾಭದಿಂದ ಸಂಸಾರದಲ್ಲಿರುವುದಕ್ಕಾಗಲಿಲ್ಲ, ಪ್ರಾಪ್ತಿಫಲವಾದ ಕೈಂಕರ್ಯದಲ್ಲಿ ಅನ್ವಯಿಸಲಾಗಲಿಲ್ಲ. ಇದರಿಂದ ನೋವುಂಟಾಗಿದೆ ಇವರಿಗೆ. 'ಕೈಂಕರ್ಯವನ್ನುಂಟುಮಾಡಲು ಅವಕಾಶ ಸಿಕ್ಕದ ಕಾರಣ ಈ ಅಕಿಂಚನ ದುಃಖಿಸುತ್ತಿದ್ದಾನೆ.'—ಎಂದು ನನ್ನ ದಯನೀಯ ದೆಶೆಯನ್ನು ಮನಸ್ಸಿಗೆ ತಂದುಕೊಂಡು ಕರುಣೆ ತೋರಬೇಕು ಎಂದು ಸ್ವಾಮಿಯನ್ನು ಬೇಡುತ್ತಿದ್ದಾರೆ. 'ಅಗ್ರತಃ ಪ್ರಯಯೌ ರಾಮಃ' ಎಂದಂತೆ ನನ್ನ ಮುಂದೆ ನಾಲ್ಕು ಅಡಿ ಇಟ್ಟು ನಡೆದರೆ ಹೋದ ಪ್ರಾಣ ನಮಗೆ ಬಂದೀತು.

**ಶಿನ್ದೈ ತನ್ನುಳ್ ನೀಂಗಾದಿರುನ್ದ ತಿರುವೇ ಮರುವ ಇನಿಯ**
**ಮೈನ್ದಾ ಅನ್ತ್ ತಣ್ ಆಲಿಮಾಲೇ, ಶೋಲೈಮತ್ತಕಳಿರೇ**
**ನಂದಾವಿಳಕ್ಕಿನ್ ಶುಡರೇ ನರೈಯೂರ್ ನಿನ್ರ ನಂಬೀ ಎನ್**
**ಎಂದಾಯ್ ಇಂದಳೂರಾಯ್ ಅಡಿಯೇಱ್ಕ್ಕು**
**ಇಱೈಯುಂ ಇರಂಗಾಯೇ ॥೨॥**

(ಶಿಂದೈತನ್ನುಳ್ ನೀಂಗಾದಿರುಂದ ತಿರುವೇ) ನಮ್ಮ ಹೃದಯದಲ್ಲಿ ಕ್ಷಣಕಾಲವೂ ಅಗಲಿಕೆ ಇಲ್ಲದಂತೆ ಇರುವ ಸಂಪತ್ತೇ, (ಮರುವ ಇನಿಯ ಮೈಂದಾ) ಅನುಭವಿಸಿದಷ್ಟು ಪರಮಭೋಗ್ಯನಾಗಿರುವ ನಿತ್ಯಯುವಾ ಆದವನೇ, (ಅಮ್ ತಣ್ ಆಲಿಮಾಲೇ) ಸುಂದರವಾಗಿಯೂ ತಂಪಾಗಿಯೂ ಇರುವ ತಿರುವಾಲಿಯ ಸ್ವಾಮಿಯೇ, (ಶೋಲೈಮಂತ್ತಕಳಿರೇ) ತೋಪಿನೊಳಗೆ ಬೆಳೆದ ಆನೆಯಮರಿಯಂತಿರುವವನೇ, (ನಂದಾವಿಳಕ್ಕಿನ್ ಶುಡರೇ) ಒಂದು ದಿನವೂ ನಂದದ ದೀಪದಂತೆ ಜ್ವಲಿಸುವವನೇ, (ನರೈಯೂರ್ ನಿನ್ರನಂಬೀ) ತಿರುನರೈಯೂರಿನಲ್ಲಿ ಬಿಜಯಮಾಡಿರುವ ಪರಿಪೂರ್ಣನೇ, (ಇಂದಳೂರಾಯ್ ಎನ್ದಾಯ್) ತಿರುವಿಂದಳೂರಿನಲ್ಲಿರುವ ಭಗವಂತನೇ, (ಅಡಿಯೇಱ್ಕು ಇಱೈಯುಂ ಇರಂಗಾಯೇ) ನನ್ನ ಮೇಲೆ ಕಿಂಚಿತ್ತೂ ಕೃಪೆಯನ್ನು ಮಾಡುವುದಿಲ್ಲವಲ್ಲಾ !

'ನನ್ನ ಪ್ರಾಪ್ತಿಯನ್ನು ಹೊಂದಲು ನೀವೇನಾದರೂ ಕೃಷಿ ಮಾಡಬೇಡವೇ' ಎಂದು ಅವನು ಕೇಳಿದರೆ ಇವರು ಹೇಳುತ್ತಾರೆ—'ನಿರತಿಶಯ

ಭೋಗ್ಯನಾಗಿರುವ ಈ ಸ್ಥಿತಿಯನ್ನು ನೀನೇ ತೋರಿದ್ದೀಯೆ. ಈಗ ನನ್ನ ಕೊರೆಯನ್ನೂ ನೀನೇ ಕಳೆಯಬೇಕು'—ಎಂದು. ಸರ್ವದಾ ಹೃದಯಂದಲ್ಲಿ ಪ್ರಕಾಶಿಸುವ ಅವನೇ ತಾನೇ ಇವರ ಸಂಪತ್ತು? ಅವನನ್ನು ಅನುಭವಿಸಿದಷ್ಟೂ, ಅನುಭವಿಸಿದಷ್ಟೂ, ಅವನು ಇನ್ನೂ ಭೋಗ್ಯತಮನೇ ಆಗಿದ್ದಾನೆ. ಪರಿಪೂರ್ಣ ಸ್ವರೂಪನವನು. 'ಸಂಬಂಧ ಜ್ಞಾನವನ್ನು ಉಂಟು ಮಾಡಿದ ನಿನಗೆ ನನ್ನ ಸ್ವರೂಪಕ್ಕೆ ಅನುರೂಪವಾದ ಕೈಂಕರ್ಯವನ್ನು ನನ್ನಿಂದ ಮಾಡಿಸಿಕೊಳ್ಳುವುದು ಒಂದು ದೊಡ್ಡ ವಿಷಯವೇ' ?—ಎಂದು ಆಳ್ವಾರ್ ಕೇಳುತ್ತಾರೆ.

**ಪೇಶುಹಿನ್ರದು ಇದುವೇ ವೈಯಂ ಈರಡಿಯಾಲ್ ಅಳಂದ**
**ಮೂಶಿವಣ್ಣು ಮುರಲುಂ ಕಣ್ಣಿ ಮುಡಿಯೀರ್**
**ಉಮ್ಮೈ ಕಾಣುಮ್**
**ಆಶೈಯೆನ್ನುಂ ಕಡಲಿಲ್ ವೀಟ್ನ್ದು ಇಂಗು**
**ಅಯರ್ತ್ತೋಮ್ ಅಯಲಾರುಂ**
**ಏಶುಹಿನ್ರದು ಇದುವೇ ಕಾಣುಂ ಇಂದಳೂರೀರೇ ॥೩॥**

(ವೈಯಂ ಈರಡಿಯಾಲ್ ಅಳನ್ದ) ಲೋಕಗಳೆಲ್ಲವನ್ನೂ ಎರಡು ಪಾದಗಳಿಂದ ಅಳೆದುಕೊಂಡವರಾಗಿ (ವಣ್ಡು ಮೂಶಿ ಮುರಲುಂ ಕಣ್ಣಿ ಮುಡಿಯೀರ್) ದುಂಬಿಗಳು ಮುತ್ತಿಕೊಂಡು ಝೇಂಕರಿಸುವ ಹೂಮಾಲೆಯನ್ನು ಶಿರಸ್ಸಿನಲ್ಲಿ ಅವತಂಸವಾಗಿ ಹೊಂದಿರುವ (ಇಂದಳೂರೀರ್) ತಿರುವಿಂದಳೂರಿನಲ್ಲಿರುವ ಭಗವಂತನೇ, (ಇಂಗು) ಈ ಲೋಕದಲ್ಲಿ (ಉಮ್ಮೈ ಕಾಣುಂ ಆಶೈ ಎನ್ನುಂ) ನಿಮ್ಮನ್ನು ಸೇವಿಸಬೇಕು ಎನ್ನುವ ಆಶೆಯು (ಕಡಲಿಲ್ ವೀಟ್ನ್ದು) ಸಮುದ್ರದಲ್ಲಿ ಬಿದ್ದು (ಅಯರ್ತ್ತೋಮ್) ಬುದ್ಧಿಕೆಟ್ಟೆವು. (ಅಯಲಾರುಂ ಏಶುಹಿನ್ರದು ಇದುವೇ ಕಾಣುಂ) ಇತರರು ಪರಿಹಾಸ್ಯ ಮಾಡುವುದೂ ಈ ವಿಷಯಕ್ಕಾಗಿಯೇ. (ಪೇಶುಹಿನ್ರದು ಇದುವೇ) ನಿಮಗೆ ಯಾವ ನಿಂದೆಯೂ ಇಲ್ಲದೇ ಇರಬೇಕೆಂಬುದೇ ನಾವು ಹೇಳುತ್ತಿರುವುದು.

'ನಿಮಗೆ ಬರತಕ್ಕ ಅವದ್ಯವನ್ನು ಪರಿಹರಿಸಬೇಕೆಂದೇ ನಾನು ಈ ಮಾತುಗಳನ್ನಾಡುತ್ತಿರುವುದು'—ಎನ್ನುತ್ತಾರೆ ಆಳ್ವಾರ್ ಅವರು. ನೀವು ಗುಣಾರ್ಜನವನ್ನು ಮಾಡುವುದಕ್ಕೆ ಪಟ್ಟಪಾಡನ್ನು ತಿಳಿದೇ ಇದ್ದೀರಿ. ಈಗ

ಒಬ್ಬ ವ್ಯಕ್ತಿಯನ್ನು ಉದಾಸೀನ ಮಾಡಿ, ಆ ಹಿರಿಯ ಗುಣವನ್ನೆಲ್ಲಾ ಕಳೆದು ಕೊಳ್ಳುವ ಸ್ಥಿತಿಗೆ ಬರುತ್ತೀರಲ್ಲವೇ? ಎಲ್ಲರನ್ನೂ ಅನುಗ್ರಹಿಸಿದ ನಿಮಗೆ ಈಗ ಒಬ್ಬನನ್ನು ಕೈಬಿಟ್ಟರೆ ಗುಣಹಾನಿಯಾಗುವುದಿಲ್ಲವೋ? ನೀವು ಸರ್ವ ರಕ್ಷಕರಾಗಿ ತಾನೇ ಕಿರೀಟಧಾರಣೆ ಮಾಡಿರುವುದು? 'ನಿಮ್ಮನ್ನು ಕಾಣಲು ಆಶಿಸಿ ನಿಮ್ಮನ್ನು ಪಡೆಯದ ಕಾರಣ ಕೆಲವರು ಮುಗಿದು ಹೋದರು'— ಎಂದರೆ ಇದಕ್ಕಿಂತ ಹೆಚ್ಚಿನ ಅವದ್ಯವು ನಿಮಗುಂಟೋ? ನಿಮ್ಮನ್ನು ಕಾಣ ಬೇಕೆಂಬ ಆಶೆಯು ಕಡಲಿನಲ್ಲಿ ಬಿದ್ದು ನಾವು ಅರಿವು ಕೆಟ್ಟೆವು. 'ಆಶೆ ಪಟ್ಟರೆ ಫಲಿಸುವುದು ಹೀಗೆ ತಾನೇ?'—ಎಂದು ಇತರರು ನಿಮ್ಮನ್ನು ನಿಂದಿಸು ತ್ತಾರಷ್ಟೇ? ನಿಮ್ಮನ್ನು ಪ್ರೀತಿಸದವರು ಹೇಳುವ ಅವದ್ಯವನ್ನು ಪರಿಹರಿಸು ವುದಕ್ಕೂ, ನಿಮ್ಮನ್ನು ಒಲಿದವರು ಬಯಸಿದ ಸೇವೆಗಳನ್ನು ಅನುಗ್ರಹಿಸು ವುದಕ್ಕೂ ನೀವು ತಿರುವಿಂದಳೂರಿನಲ್ಲಿ ಬಂದು ನಿತ್ಯವಾಸ ಮಾಡುತ್ತಿರುವಿರಷ್ಟೇ?

**ಆಶೈಮೇಟುನಾದು ಏತ್ತಂ ಎಮಕ್ಕು ಇಂಗು ಇಟುಕ್ಕು**
**ಆಯಿತ್ತು ಅಡಿಯೋರ್ಕ್ಕು**
**ತೇಶಂ ಅರಿಯ ಉಮಕ್ಕೇ ಆಳಾಯ್ ತಿರಿಹಿನ್ರೋಮುಕ್ಕು**
**ಕಾಶಿನೊಳಿಯಿಲ್ ತಿಹಟುಂ ವಣ್ಣಂಕಾಟ್ಟೀರ್ ಎಂಬಿರುಮಾನ್**
**ವಾಶಿವಲ್ಲೀರ್ ಇಂದಳೂರೀರೇ ವಾಟಿನ್ದೇಪೋಮ್ ನೀರೇ**
॥೪॥

(ಇಂಗು ಆಶೈಮೇಟಿವಾದು ಏತ್ತಂ ಎಮಕ್ಕು) ಈ ಲೋಕದಲ್ಲಿ ಅಭಿನಿವೇಶಾತಿ ಶಯದೊಡನೆ ಸ್ತುತಿಸುತ್ತಿರುವ ನಮಗೆ (ಇಟುಕ್ಕು ಆಯಿತ್ತು) ಈ ಸ್ತುತಿ ಅವದ್ಯವಾಗಿ ಬಂದು ನಿಂತಿತು. (ತೇಶಂ ಅರಿಯ) ಸರ್ವ ದೇಶಗಳಿಗೂ ಸಾಕ್ಷಿಯಾಗಿರುವ (ಉಮಕ್ಕೇ ಆಳಾಯ್ ತಿರಿಹಿನ್ರೋಮುಕ್ಕು) ನಿಮಗೇ ಕಿಂಕರರಾಗಿ ದಿವ್ಯದೇಶಸಂಚಾರ ಮಾಡಿಕೊಂಡಿರುವ (ಅಡಿಯೋರ್ಕ್ಕು) ನಮಗೆ (ಕಾಶಿನ್ ಒಳಿಯಿಲ್ ತಿಹಟುಂ) ಚಿನ್ನದ ಕಾಸಿನ ಪ್ರಕಾಶಕ್ಕಿಂತಲೂ ಹೆಚ್ಚಾಗಿ ಪ್ರಕಾಶಿಸುತ್ತಿರುವ (ವಣ್ಣಂ ಕಾಟ್ಟೀರ್) ನಿಮ್ಮ ದೇಹದ ಸೌಂದರ್ಯವನ್ನು ತೋರಿಸದೆ ಇರುತ್ತಿದ್ದೀರಿ. (ಇಂದಳೂರೀರ್ ಎಂಬೆರುಮಾನ್) ತಿರುವಿಂದ ಳೂರಿನಲ್ಲಿರುವ ಭಗವಂತನೇ, (ವಾಶಿವಲ್ಲೀರ್) ತಾರತಮ್ಯವನ್ನು ತೋರಲು

ಬಲ್ಲವರಾಗಿದ್ದೀರಿ. (ನೀರೇವಾಟ್‌ನ್ದು ಪೋವಾಯ್) ನಿಮ್ಮ ದಿವ್ಯಮಂಗಳ ವಿಗ್ರಹವನ್ನು ನೀವೇ ಅನುಭವಿಸಿಕೊಂಡು ನೀವೇ ಉಜ್ಜೀವಿಸಿಹೋಗಿ,

ಒಂದೊಂದು ದಿನವು ಸಂದಂತೆಯೆಲ್ಲಾ, 'ಅಹನ್ಯಹನಿ ವರ್ಧತೇ' ಎಂದು ಹೇಳಿದಂತೆ ನಿಮ್ಮ ಬಗೆಗೆ ನಮ್ಮ ಆಶೆ ಮೇರೆಮೀರಿ ಬೆಳೆಯುತ್ತಿದೆ. ನಿಮ್ಮನ್ನು ಸ್ತುತಿಸುವುದೇ ಸ್ವಭಾವವಾದಂತೆ ಆಗಿಬಿಟ್ಟಿತು. ಇದು ನಮಗೇ ಅವದ್ಯವಾಗಿ ಪರಿಣಮಿಸಿತಲ್ಲಾ ! 'ಶೇಷಭೂತನು ಶೇಷಿಯನ್ನು ಸ್ತುತಿಸುವುದು ನ್ಯಾಯವೇ ಆದುದು' ಎಂದಲ್ಲವೇ ಇರಬೇಕು. ಇದು ಅವದ್ಯವಾಗಿ ಪರಿಣಮಿಸಿತು. ನಾಡಿನವರೆಲ್ಲರೂ 'ಪ್ರೇಮವಿಲ್ಲದವನನ್ನು ಹಿಂಬತ್ತಿ ತಿರಿಯುತ್ತಾನೆ'—ಎಂದು ನಮ್ಮನ್ನು ನಿಂದಿಸುವುದನ್ನು ನೀವು ಸಹಿಸುವುದಕ್ಕಾಗದು. ನಿಮ್ಮನ್ನು ನಾಡಿನವರು 'ಕರುಣೆ ಇಲ್ಲದವನು' ಎಂದು ಹೇಳುವುದನ್ನು ನಾವು ಸಹಿಸಲಾರೆವು. 'ಆಶ್ರಿತಪರಿಭವವನ್ನು ನಾನು ಸಹಿಸುವುದಕ್ಕಾಗುವುದಿಲ್ಲವೋ ?'—ಎಂದು ಅವನು ಕೇಳಿದರೆ ಅದು 'ನ ತೇ ಅನುರೂಪಃ' ಎಂದಂತೆ ನಿಮಗೆ ಅನುರೂಪವಾದುದಲ್ಲ ಎನ್ನುತ್ತಾರೆ. ಸರ್ವಲೋಕಗಳಿಗೂ ಸಾಕ್ಷಿಯಾಗಿರುವ ನೀವು ಅರಿಯುವಂತೆಯೋ ನಿಮಗೆ ಆಳಾಗಿ ಅಲೆಯುತ್ತಿದ್ದೇವೆ– 'ಬೇರೆ ಒಬ್ಬ ರಕ್ಷಕನ ಬಳಿ ತಮ್ಮ ಕೊರೆಯನ್ನು ನೀಗಿಸಿಕೊಳ್ಳುತ್ತಾರೆ'—ಎಂದು ಸಮಾಧಾನವಾಗಿದ್ದೀರೋ ? ನಿಮಗೇ ಅನನ್ಯಾರ್ಹರಾಗಿರುವ ನಮಗೆ ನಿಮ್ಮ ದಿವ್ಯ ರೂಪವನ್ನು ತೋರಿಸುತ್ತಿಲ್ಲ. ನಿಮ್ಮ ದಿವ್ಯ ರೂಪವನ್ನನುಭವಿಸಲು ಆಶೆಪಟ್ಟ ನಮ್ಮ ಕೀಳ್ಮೆಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಲು ಬಲ್ಲವರಾಗಿದ್ದೀರಿ ! ನೀವು ಶಿರುವಿಂದಳೂರಿನಲ್ಲಿ ಬಂದಿರುವುದಾದರೂ ಏತಕ್ಕಾಗಿ ? ನಿತ್ಯಸೂರಿಗಳು ಅನುಭವಿಸುವ ನಿಮ್ಮ ದಿವ್ಯಾನುಭವವನ್ನು ನಮಗೂ ಕೊಡುವುದಕ್ಕಲ್ಲವೇ ? ನಿಮ್ಮ ದಿವ್ಯರೂಪ ನಿಮ್ಮಲ್ಲಿ ಆಶೆಉಳ್ಳವರಿಗಾಗಿ ಎಂದಿದ್ದೆವು. ಹಾಗಿಲ್ಲವೆಂದರೆ ಅದನ್ನು ನೀವೇ ಕಟ್ಟಿಕೊಂಡು ಬಾಳುವವರಾಗಿ !

ತೀಎಂಬೆರುಮಾನ್ ನೀರೆಂಬೆರುಮಾನ್ ತಿಶೈಯುಂ
ಇರುನಿಲನುಂ
ಆಯ್ ಎಂಬೆರುಮಾನಾಹಿ ನಿನ್ರಾಲ್ ಅಡಿಯೋಂ
ಕಾಣೋವಾಲ್

**ತಾಯೆಂಬಿರುಮಾನ್ ತಂದೈತಂದೈ ಆವೀರ್ ಅಡಿಯೋಮು**
**ಕ್ಕೇ ಎಂಬಿರುಮಾನಲ್ಲೀರೋ ನೀರಿಂದಳೂರೀರೇ ॥೫॥**

(ಇಂದಳೂರೀರ್ ನೀರ್) ತಿರುವಿಂದಳೂರಿನಲ್ಲಿ ಸ್ವಾಮಿಯಾಗಿರುವ ನೀವು (ತೀಎಂಬೆರುಮಾನ್) ತೇಜಸ್ತತ್ತ್ವಕ್ಕೆ ಅಂತರ್ಯಾಮಿಯಾದ ಭಗವಾನರಾಗಿ, (ನೀರೆಂಬೆರುಮಾನ್) ಜಲತತ್ತ್ವಕ್ಕೆ ಅಂತರ್ಯಾಮಿಯಾದ ಭಗವಾನರಾಗಿ, (ತಿಶ್ಶೈಎಂಬೆರುಮಾನಾಯುಂ) ದಿಕ್ಕುಗಳಿಗೆ ಅಂತರ್ಯಾಮಿಯಾದ ಭಗವಾನರಾಗಿಯೂ, (ಇರುನಿಲಂ ಎಂಬೆರುಮಾನಾಯುಂ ನಿನ್ರಾಲ್) ವಿಶಾಲವಾದ ಭೂಮಿಗೆ ಅಂತರ್ಯಾಮಿಯಾದ ಭಗವಾನರಾಗಿಯೂ ಇರುವಿರೆಂಬುದು ವಾಸ್ತವವಾದರೂ (ಅಡಿಯೋಂ ಕಾಣೋವಾಲ್) ಆಜ್ಞರಾಗಿರುವ ನಾವುಗಳು ಆಯಾ ಅವಸ್ಥೆಗಳಲ್ಲಿ ಹಾಗೆ ಕಾಣದವರಾಗಿದ್ದೇವೆ. (ತಾಯೆಂಬೆರುಮಾನ್ ತಂದೈತಂದೈ ಆವೀರ್) ಸಕಲ ವಿಧವಾದ ಬಂಧುವಾಗಿಯೂ ಇರುವ ಭಗವಂತನೇ, (ನೀರ್ ಅಡಿಯೋಮುಕ್ಕೇ ಎಂಬೆರುಮಾನಲ್ಲೀರೊ) ನೀವು ನಮಗೇ ಅಸಾಧಾರಣರಾದ ಸ್ವಾಮಿ ಅಲ್ಲವೇ ?

'ಇಲ್ಲಿ ನಾನು ಸನ್ನಿಹಿತನಾಗದಿದ್ದರೂ, ನಾನು ಜಗದಾಕಾರವಾಗಿರುವ ಸ್ಥಿತಿಯನ್ನು ನಿಮಗೆ ತೋರಿಕೊಟ್ಟಿದ್ದೇನೆ. ನಾನು ಏನೂ ಮಾಡಲಿಲ್ಲವೆಂದು ನೀವು ಹೇಳುವುದಕ್ಕೆ ಅವಕಾಶವೆಲ್ಲಿ ?'—ಎಂದು ಸ್ವಾಮಿಯು ಆಶಯವಾದರೆ ಅದಕ್ಕೆ ಉತ್ತರವನ್ನು ಇಲ್ಲಿ—'ಕಣ್ಣಿಂದ ತಂಪಾಗಿ ಕಟಾಕ್ಷಿಸಿ, ಬಾಯಿಂದ ಎರಡು ಮಾತಾಡಿ ನನ್ನಿಂದ ಸೇವೆಯನ್ನು ನೀನು ಮಾಡಿಸಿಕೊಳ್ಳಬೇಕು'—ಎಂದು ನಾನು ಪಟ್ಟ ಆಶೆಗೆ ನೀನೇನು ಮಾಡಿದಂತಾಯಿತು ? ಎಂದು ಹೇಳುತ್ತಾರೆ.

ತೇಜಸ್ಸು, ಜಲ ಇವೆರಡನ್ನು ಹೇಳಿದುದು ಉಳಿದವಕ್ಕೂ ಉಪಲಕ್ಷಣವಾಗಿದೆ. ಪಂಚಭೂತಗಳಿಗೆ ಹೇಗೋ ಹಾಗೆ ದಿಕ್ಕು, ವಿಶಾಲವಾದ ಭೂಮಿ ಇವುಗಳಿಗೂ ಅವನು ಅಂತರ್ಯಾಮಿಯಾಗಿದ್ದಾನೆ. ನೀನು ನಿನ್ನ ಸ್ವಾಮ್ಯವನ್ನು ಹೀಗೆ ಪ್ರಕಾಶಪಡಿಸಿದರೆ ನಿನ್ನೊಡನೆ ಸಂಶ್ಲೇಷಿಸಿ ಅನುಭವಿಸಬೇಕೆಂದು ಆಶೆಪಟ್ಟ ನಾವು ಏನನ್ನು ಪಡೆದಂತಾಯಿತು ? ಅನನ್ಯಗತಿಗಳಾದ ನಮಗೆ ಪ್ರಾಪ್ಯರುಚಿ ಉಂಟಾದಾಗಲೇ ನಾವು ನೆನೆದಂತೆಲ್ಲಾ ಅನುಭವಿಸುವುದಕ್ಕಾಗಲೆಂದಲ್ಲವೇ ನೀವು ತಿರುವಿಂದಳೂರಿನಲ್ಲಿ ನೆಲಸಿರುವುದು ? ಪರತ್ವ ನಿತ್ಯಸೂರಿಗಳಿಗೆ ಅನುಭಾವ್ಯ. ಬ್ರಹ್ಮಾದಿಗಳ ಮೊರೆಯನ್ನು ಕೇಳುವುದಕ್ಕೆ ವ್ಯೂಹ.

ರಾಮಕೃಷ್ಣಾದ್ಯವತಾರಗಳು ದಶರಥವಸುದೇವಾದಿಗಳ ಭಾಗ್ಯದ ಫಲ, ತಮಗೆ ಹಿತವಾವುದೆಂದರಿಯದೆ, ಸಂಸಾರವು ತ್ಯಾಜ್ಯವೆಂದೂ ತಿಳಿಯದೇ, ಸರ್ವೇಶ್ವರನು ಪ್ರಾಪ್ಯನೆಂಬುವುದನ್ನೂ ತಿಳಿಯದೇ ಇರುವ ಸಂಸಾರಿಗಳಿಗೆ ದರ್ಶನವನ್ನೀಯು ವುದಕ್ಕೆ ತಾನೇ ಇರುವುವು ಭಗವಂತನು ಒಲಿದು ಬಂದು ನೆಲಸಿದ ದಿವ್ಯ ಕ್ಷೇತ್ರಗಳು ? ಸರ್ವವಿಧ ಬಂಧುವಾದ ನೀನು ನಮಗೇ ಅಸಾಧಾರಣವಾದ ಪ್ರಭುವಷ್ಟೇ ?

ಶೊಲ್ಲಾದೊಟಿಯಹಿಲ್ಲೇನ್ ಅರಿಂದ ಶೊಲ್ಲಿಲ್ ನೆಮತ್ ಅಡಿಯೊರ್
ಎಲ್ಲಾರೋಡುಂ ಒಕ್ಕಎಣ್ಣಿ ಇರುಂದೀರ್ ಅಡಿಯೇನೈ
ನಲ್ಲಾರರಿವೀರ್ ತೀಯಾರ್ ಅರಿವೀರ್ ನೆನುಕ್ಕು ಇವ್ವುಲಹತ್ತು
ಎಲ್ಲಾಮರಿವೀರ್ ಈದೇ ಅರಿಯೀರ್ ಇಂದಳೂರೀರೇ ॥೬॥

(ಇಂದಳೂರೀರ್) ಇಂದಳೂರಿನಲ್ಲಿರುವ ಸ್ವಾಮಿಯೇ, (ಶೊಲ್ಲಾದು ಒಟಿಯ ಹಿಲ್ಲೇನ್) ನಾನು ಹೇಳಬೇಕೆಂದು ಎಣಿಸಿದುದನ್ನು ಹೇಳದೆ ಇರುವುದಕ್ಕೆ ಆಗದಿದ್ದೇನೆ. (ಅರಿಂದ ಶೊಲ್ಲಿಲ್) ನಾನು ತಿಳಿದುದನ್ನು ಹೇಳುವುದಾದರೆ ಅದನ್ನು ಹೇಳುತ್ತೇನೆ. ಕೇಳಿ. (ಅಡಿಯೇನೈ) ನಿಮ್ಮನ್ನಗಲಿ ಇರಲಾರದ ಈ ದಾಸನನ್ನು (ನುಮ್ ಅಡಿಯಾರ್ ಎಲ್ಲಾರೋಡುಂ ಒಕ್ಕಎಣ್ಣಿ ಇರುಂದೀರ್) ನಿಮ್ಮ ಉಳಿದ ಭಕ್ತರೆಲ್ಲರೊಡನೆ ಸಮಾನವಾಗಿ ಎಣಿಸಿ ಇರುತ್ತಿದ್ದೀರಿ. (ನಲ್ಲಾರ್ ಅರಿವೀರ್) ಒಳ್ಳೆಯವರನ್ನೂ ತಿಳಿದುಕೊಂಡಿರುವವರಾಗಿದ್ದೀರಿ. (ತೀಯಾರ್ ಅರಿವೀರ್) ಕೆಟ್ಟವರನ್ನೂ ತಿಳಿದುಕೊಂಡಿದ್ದೀರಿ. (ಇವ್ವುಲಹತ್ತು ಎಲ್ಲಾಂ ಅರಿವೀರ್) ಈ ಲೋಕದ ನಡೆ ಎಲ್ಲವನ್ನೂ ತಿಳಿದುಕೊಂಡಿದ್ದೀರಿ. ನಮುಕ್ಕು ಈದೇ ಅರಿಯೀರ್) ನನ್ನ ಸ್ಥಿತಿಯೊಂದನ್ನು ಮಾತ್ರ ಅರಿಯದವ ರಾಗಿದ್ದೀರಿ.

ಶೇಷಿಯು ಸನ್ನಿಧಿಯಲ್ಲಿ ಶೇಷಭೂತನಾದವನು ಸೇವೆ ಸಲ್ಲಿಸುವ ಕ್ರಮಕ್ಕನುಸಾರ ಸೇವೆ ಸಲ್ಲಿಸಲು ಸಾಧ್ಯವಾಗದಿದ್ದೇನೆ. ಶೇಷಿಯನ್ನು ನಿರ್ಬಂಧಿಸುವುದಕ್ಕೆ ತಕ್ಕವನಾಗಿಲ್ಲ ನಾನು. ಹಾಗೆಯೇ ಸುಮ್ಮನೆ ಇರುವುದಕ್ಕೂ ಸಮರ್ಥನಾಗಿಲ್ಲ. ಹತ್ತು ತಿಂಗಳು ಅಗಲಿಕೆಯನ್ನು ಸಹಿಸಿಕೊಂಡ ಸೀತಾದೇವಿ

ಯುಂತೆ ನನ್ನನ್ನೂ ನೀವು ತಿಳಿಯುವಂತೆ ತೋರುತ್ತಿದೆ. ಅರೆಕ್ಷಣ ನಿಮ್ಮನ್ನು ಕಾಣದಿದ್ದರೂ ನಾನು ಬದುಕಲಾರದವನಾಗಿದ್ದೇನೆ. ನಿಮ್ಮನ್ನು ಅಗಲಿ ಇರಲಾರದವರನ್ನೂ ನೀವು ಬಲ್ಲಿರಿ. ನಿಮ್ಮನ್ನು ಬಿಟ್ಟುಬಿಟ್ಟು ಬದುಕುತ್ತಿರುವ ವರನ್ನೂ ನೀವು ಬಲ್ಲಿರಿ. 'ಅಜ್ಞಾತಂ ನಾಸ್ತಿತೇ ಕಿಂಚಿತ್ ತ್ರಿಷು ಲೋಕೇಷು ರಾಘವ' ಎಂದಂತೆ ನಿಮ್ಮ ಜ್ಞಾನಕ್ಕೆ ವಿಷಯವಾಗದುದು ಯಾವುದೂ ಇಲ್ಲ. ಸರ್ವಜ್ಞನಾದ ಅವನೂ ಅಜ್ಞನಾದ ಹಾಗಾಯಿತೆಂದೇ ಆಳ್ವಾರ್ ಅನುಭವಿಸು ತ್ತಾರೆ. 'ತನ್ನನ್ನು ಬಯಸುವವರಿಗೆ ಅವನು ಮುಖ ತೋರಿಸುವುದಿಲ್ಲ'— ಎಂಬ ಅಪವಾದವನ್ನು ಪರಿಹರಿಸುವುದಕ್ಕಾಗಿ ತಾನೇ ನೀವು ತಿರುವಿಂದಳೂರಿನಲ್ಲಿ ಬಂದು ನಿಂತಿರುವುದು ? ನೀವು ಬಂದ ಕೆಲಸವನ್ನು ಮರೆಯುವುದೇ ?

> ಮಾಟ್ಟೇರಾನೀರ್ ಪಣಿನೀರ್ಕೊಳ್ಳ ಎಮ್ಮೈ ಪಣಿಅರಿಯಾ
> ವೀಟ್ಟೀರ್ ಇದನ್ನೈವೇರೇ ಶೊನ್ನೋಂ ಇಂದಳೂರೀರೇ
> ಕಾಟ್ಟೀರಾನೀರ್ ನುನ್ದಮ್ ಅಡಿಕ್ಕಳ್
> ಕಾಟ್ಟಿಲ್, ಉಮಕ್ಕು ಇನ್ದ
> ನಾಟ್ಟೇ ವನ್ದು ತೊಂಡರಾನ ನಾಂಗಳ್ ಉಯ್ಯೋಮೇ ॥೭॥

(ಇಂದಳೂರೀರೇ) ಇಂದಳೂರಿನ ಭಗವಂತನೇ, (ನೀರ್‌ಪಣಿಕೊಳ್ಳಮಾಟ್ಟೇ ರಾನೀರ್) ನೀವು ನಮ್ಮ ಕೈಯ್ಯಲ್ಲಿ ಸೇವೆಯನ್ನು ಮಾಡಿಸಿಕೊಳ್ಳಲು ಇಚ್ಛೆ ಪಡದವರಾಗಿದ್ದೀರಿ. (ಎಮ್ಮೈ ಪಣಿ ಅರಿಯಾವೀಟ್ಟೀರ್) ನಮಗೆ ನಮ್ಮ ಶೇಷತ್ವವನ್ನು ತಿಳಿಯಪಡಿಸಿ ಕೈಬಿಟ್ಟುಬಿಟ್ಟಿರಿ. ಇದೆಲ್ಲಾ ಇರಲಿ. (ಇದನ್ನೈ ವೇರೇ ಶೊನ್ನೋಂ) ಮುಂದೆ ಹೇಳುವ ವಿಷಯವನ್ನು ಮುಖ್ಯವಾಗಿ ವಿಜ್ಞಾಪಿಸುತ್ತೇವೆ. (ನುನ್ದಮ್ ಅಡಿಕ್ಕಳ್‌ಕಾಟ್ಟೀರಾನೀರ್) ನಿಮ್ಮ ಶ್ರೀಪಾದ ಗಳನ್ನು ತೋರಿಸದೆ ಇರುತ್ತಿದ್ದೀರಿ. (ಕಾಟ್ಟಿಲ್) ಆ ಪಾದಗಳನ್ನು ತೋರಿ ಅನುಗ್ರಹ ತೋರಿಸುವುದಾದರೆ (ಇಂದನಾಟ್ಟೇ) ಈ ನಾಡಿನಲ್ಲಿ (ವಂದು) ನಿಮ್ಮ ಕೈಂಕರ್ಯವನ್ನು ಬಯಸಿ ಬಂದು (ಉಮಕ್ಕು ತೊಂಡರಾನ ನಾಂಗಳ್ ಉಯ್ಯೋಮೇ) ನಿಮಗೆ ಕಿಂಕರರುಗಳಾದ ನಾವು ಉಜ್ಜೀವಿಸಿ ಹೋಗ ಲಾರೆವೋ ?

" 'ಯಃ ಸರ್ವಜ್ಞ ಸರ್ವವಿತ್' ಮೊದಲಾದ ಪ್ರಮಾಣಗಳು ನಮಗೆ ಯಾವ ದೋಷವೂ ಇಲ್ಲವೆಂದು ಹೇಳುವುವಷ್ಟೇ ? 'ಸರ್ವಜ್ಞ', 'ಸರ್ವಶಕ್ತ' ಎಂದು ಪ್ರಮಾಣಗಳು ಹೇಳುವಾಗ ನೀವು ನಮಗೆ ಜ್ಞಾನಶಕ್ತಿಗಳಲ್ಲಿ ವೈಕಲ್ಯವನ್ನು ಯಾವ ಆಧಾರದಿಂದ ಹೇಳಿದಿರಿ'—ಎಂದು ಸ್ವಾಮಿ ಕೇಳಿದರೆ ಇವರೆನ್ನುತ್ತಾರೆ—'ಅದು ವ್ಯಕ್ತಿಯೊಬ್ಬಳಲ್ಲಿ ಹಾಗೆ ಫಲಿಸಿದುದನ್ನು ಕಂಡೆ'—ಎನ್ನುತ್ತಾರೆ. ತನ್ನ ಸ್ಥಿತಿಯನ್ನು ಅರಿತು ಬಂದು ಮುಖ ತೋರಿಸದ ಕಾರಣ ಅವನನ್ನು 'ಅಜ್ಞ' ಎಂದರು. ತಮ್ಮ ದಯನೀಯವಾದ ಸ್ಥಿತಿಯಲ್ಲಿ ಬಂದು ತನಗೆ ಒದಗದ ಕಾರಣ ಅವನನ್ನು 'ಅಶಕ್ತ' ಎಂದು ಉಪಪಾದಿಸಿದರು.

ನಮ್ಮ ಶೇಷತ್ವ ಸ್ವರೂಪವನ್ನು ಈಗ ಉಂಟುಮಾಡುವುದಾಗಲೀ ಅಳಿಸುವುದಾಗಲೀ ಆಗುವುದಿಲ್ಲವಲ್ಲ ! ಇದು ಸ್ವರೂಪಾನುರೂಪವಾದುದಷ್ಟೇ? ಅದಕ್ಕನುರೂಪವಾದ ಕೈಂಕರ್ಯವನ್ನು ನಮ್ಮಿಂದ ನೀವು ಮಾಡಿಸಿಕೊಳ್ಳದೆ ಇದ್ದೀರಿ! ಪರಾರ್ಥವಾದ ವಸ್ತುವನ್ನು ನೀವು ನಿಮ್ಮದೆಂದಿದ್ದೀರಿ. ನಿಮ್ಮ ಪಾದಗಳನ್ನು ತೋರಿಸದೆ ಇರುವುದೇ ಸ್ವಭಾವವಾದ ಹಾಗೆ ಆದಿರಿ. 'ನಾವು ಉಪೇಕ್ಷಿಸಿದರೆ ಇವರು ಅದಕ್ಕೆ ವಿರುದ್ಧವಾಗಿ ಹೋಗಲಾಗುವುದೋ ? ನಾವು ನೆನೆದ ಸಮಯದಲ್ಲಿ ಕೆಲಸ ಮಾಡುತ್ತೇವೆ'—ಎಂದು ನೀವು ಇರುವುದಕ್ಕೆ ನಿಮ್ಮ ಪರಮಪದದಲ್ಲಿರುವ ನಿತ್ಯಸೂರಿಗಳೇ ನಾವು ? ಮರುಭೂಮಿಯಲ್ಲಿ ತಣ್ಣೀರನ್ನು ಹೇಗೋ ಹಾಗೆ ನಾವು ನಿಮ್ಮನ್ನೇ ಬಯಸುತ್ತಿದ್ದೇವೆ. ನಾವು ಈ ಸಂಸಾರ ಮಂಡಲದಲ್ಲಿರುತ್ತಿದ್ದೇವೆ. ಸ್ವರೂಪಜ್ಞಾನದಿಂದ ಅದರಲ್ಲಿ ಸಂಬಂಧ ಹೊಂದಿ ಕಂಡುಕೊಂಡಿರುವರಲ್ಲವಲ್ಲಾ ! ಬಾಯಿ ತೆರೆದು ಮಾತಾಡಿ ನಮ್ಮಿಂದ ಸೇವೆಯನ್ನು ಕೈಕೊಂಡರೆ ನಾವು ಉಜ್ಜೀವಿಸಬಲ್ಲೆವು !

ಮುನ್ನೈವಣ್ಣಂ ಪಾಲಿನ್‌ವಣ್ಣಂ ಮುಟುದುಂ ನಿಲೈನಿನ್ರ
ಪಿನ್ನೈವಣ್ಣಂ ಕೊಂಡಲ್‌ವಣ್ಣಂ ವಣ್ಣಂ ಎಣ್ಣುಂಗಾಲ್
ಪೊನ್ನಿನ್‌ವಣ್ಣಂ ಮಣಿಯಿನ್‌ವಣ್ಣಂ ಪುರೈಯುಂತಿರುಮೇನಿ
ಇನ್ನವಣ್ಣಂ ಎನ್ರು ಕಾಟ್ಟೀರ್ ಇಂದಳೂರೀರೇ ॥೮॥

(ಇಂದಳೂರೀರ್) ತಿರುವಿಂದಳೂರ್ ಭಗವಂತನೇ, (ವಣ್ಣಂ ಎಣ್ಣುಂಗಾಲ್) ನಿಮ್ಮ ದಿವ್ಯಮಂಗಳ ವಿಗ್ರಹದ ಬಣ್ಣವನ್ನು ವಿಚಾರಿಸಿ ನೋಡಿದಾಗ (ಮುನ್ನೈ

ವಣ್ಣಂ) ಮೊದಲಾದ ಕೃತಯುಗದಲ್ಲಿ ಸ್ವೀಕರಿಸಿದ ದೇಹಕಾಂತಿಯೂ (ಪಾಲಿನ್ ವಣ್ಣಂ) ಹಾಲಿನ ಬಣ್ಣವಾಗಿರುವುದು. (ಮುಟುದುಂ ನಿಲೈನಿನ್ರು ಪಿನ್ನೈವಣ್ಣಂ) ಯಥಾವಾಗಲೂ ನೆಲೆ ನಿಂತಿರುವುದೂ ಕಲಿಯುಗದಲ್ಲಿ ಸ್ವೀಕರಿಸಿರುವುದೂ ಆದ ಬಣ್ಣ (ಕೊಂಡಲ್‌ವಣ್ಣಂ) ಕಾಳಮೇಘದ ಬಣ್ಣವಾದ ಕಪ್ಪುಬಣ್ಣವಾಗಿರುವುದು. (ಪೊನ್ನಿನ್‌ವಣ್ಣಂ ಮಣಿಯಿನ್‌ವಣ್ಣಂ ಪುರೈಯುಂ ತಿರುಮೇನಿ) ಸ್ವರ್ಣ ವರ್ಣವೂ ನೀಲರತ್ನದ ಬಣ್ಣವೂ ಹೊಂದಿಕೊಂಡಿರುವ ನಿಮ್ಮ ದಿವ್ಯಮಂಗಳ ವಿಗ್ರಹ (ಇನ್ನವಣ್ಣಂ ಎನ್ರು) ಮೇಲೆ ಹೇಳಿದ ಬಣ್ಣಗಳಲ್ಲಿ ಇಂಥ ಬಣ್ಣ ವುಳ್ಳದ್ದು ಎಂದು (ಕಾಟ್ಟೀರ್) ತೋರಿಸಿ ಕರುಣಿಸಬೇಕು.

'ಕೃತಯುಗದಲ್ಲಿ ಜನ ಸಾತ್ವಿಕ ಪ್ರಕೃತಿಯುವರು. ಬಿಳಿಯ ಬಣ್ಣವನ್ನು ಪ್ರೀತಿಸುವರು'—ಎಂದು ಬಿಳಿಯ ಬಣ್ಣವನ್ನು ಅವನು ಸ್ವೀಕರಿಸಿದನು. ಅನಂತರಕಾಲದಲ್ಲಿ ಬಂದವರು ರಾಜಸಗುಣದವರಾದ ಕಾರಣ ಅವರಿಗೆ ಪ್ರಿಯವಾದ ಸ್ವರ್ಣದ ಬಣ್ಣವನ್ನು ಸ್ವೀಕರಿಸಿದನು. ಅದಕ್ಕೂ ಅನಂತರ ಮಣಿಯ ಬಣ್ಣವನ್ನು ಹೊಂದಿದವನಾದನು. 'ಇವನ ನಿತ್ಯವಾದ ಅಸಾಧಾರಣ ವಿಗ್ರಹವಾದರೋ ನೀರುಂಡಕಾಳಮೇಘದಂತಿರುವುದು' ಎಂದು ಶಾಸ್ತ್ರದಲ್ಲಿ ಕೇಳಿದ್ದೇವೆ. 'ಶಾಸ್ತ್ರದಲ್ಲಿ ನೀವು ಕೇಳಿದಂತಹ ನನ್ನ ದೇಹಕಾಂತಿ ಇಂಥದು' ಎಂದು ಒಂದು ಮಾತು ಹೇಳಿ ಆ ದಿವ್ಯರೂಪವನ್ನು ತೋರಬೇಕು. ಹಾಲಿನ ಬಣ್ಣ, ಚಿನ್ನದ ಬಣ್ಣ, ನೀಲವರ್ಣ, ಸ್ವಾಭಾವಿಕವಾದ ಮೇಘವರ್ಣ–ಹೀಗೆ ನಾಲ್ಕು ಬಣ್ಣಗಳೊಡನೆ ಇರುವ ದಿವ್ಯರೂಪವನ್ನು ಶಾಸ್ತ್ರದಲ್ಲಿ ಕೇಳಿದ್ದೇವೆ. 'ಇದು ನನ್ನ ವರ್ಣ' ಎಂದು ನೀವೇ ನಮಗೆ ತೋರಬೇಕು.

**ಎನ್‌ದೈ ತನ್‌ದೈ ತವಮ್ಮಾನ್ ಎನ್ರುಎಮರ್ ಏಟುಳವುಮ್**
**ವಂದು ನಿನ್ರು ತೊಂಡರೋಕ್ಕ್ ವಾಶಿವಲ್ಲೀರಾಲ್**
**ಶಿಂದೈ ತನ್ನುಳ್ ಮುಂದಿನಿತ್ತಿರ್ ಶಿರಿದುಂ ತಿರುಮೇನಿ**
**ಇಂದವಣ್ಣಂ ಎನ್ರು ಕಾಟ್ಟೀರ್ ಇಂದಳೂರೀರೇ** ॥೯॥

(ಎಂದೈ ತಂದೈ ತವಮ್ಮಾನ್ ಎನ್ರು) ನನ್ನ ತಂದೆ, ಅವರ ತಂದೆ, ಮತ್ತು ಅವರ ತಂದೆ ಎನ್ನುವ ಮೊರೆಯಲ್ಲಿ (ಎಮರ್ ಏಟುಳವುಮ್) ನಮ್ಮ ಪೂರ್ವಿಕರು ಏಳು ತಲೆಮೊರೆಯಾಗಿ (ವಂದು ನಿನ್ರು) ನಿಮ್ಮ ಕೈಂಕರ್ಯಕ್ಕಾಗಿ ಬಯಸಿ

ಬಂದಿರುವ (ತೊಂಡರೋರ್ಕ್ಕೇ) ದಾಸರಾದ ನಮ್ಮ ವಿಷಯದಲ್ಲಿಯೇ (ವಾಶಿವಲ್ಲೀರ್) ಎಣಿಕೆ ಮಾಡುತ್ತಿದ್ದೀರಿ. (ಅಲ್) ಅಯ್ಯೋ, (ಶಿಂದೈ ತನ್ನುಳ್ ಮುಂದಿ ನಿತ್ತಿರ್) ಎಮ್ಮ ಹೃದಯದೊಳಗೆ ಮೊದಲೇ ಬಂದು ನಿಲ್ಲುತ್ತೀರಿ. (ತಿರುಮೇನಿ ಇದ ವಣ್ಣಂ ಎನ್ರು) ನಮ್ಮ ದಿವ್ಯಮಂಗಳ ವಿಗ್ರಹದ ಬಣ್ಣ ಇಂಥದೆಂದು (ಶಿರಿದುಂಕಾಟ್ಟೀರ್) ಎಳ್ಳಷ್ಟಾದರೂ ತೋರಿಸು ವುದಿಲ್ಲ. (ಇಂದಳೂರೀರೇ) ಇಂಥ ನೀವು ತಿರುವಿಂದಳೂರಿನಲ್ಲಿ ಬಂದು ಸನ್ನಿಧಿ ಮಾಡಿದುದಕ್ಕೆ ಏನು ಪ್ರಯೋಜನ ?

'ಆಯಾ ಕಾಲಾನುಗುಣವಾಗಿ ಅವರವರು ಬಯಸಿದಂತೆಲ್ಲಾ ನಾವು ನಮ್ಮನ್ನು ತೋರಿಸಿಕೊಳ್ಳಬೇಕೋ ? ನಿಮ್ಮ ಹೆಬ್ಬಯಕೆಯನ್ನು ಯಾರಾದರೂ ತೀರಿಸುವುದಕ್ಕಾಗುವುದೋ ? ಅರ್ಚಾವತಾರಿಗಳಾಗಿ ಸೇವೆ ಕೊಡುತ್ತಿದ್ದರೂ ತೃಪ್ತಿ ಇಲ್ಲದೆ ಇದ್ದೀರಲ್ಲಾ ?'—ಎಂದು ಸ್ವಾಮಿ ಕೇಳಿದರೆ ಇವರು ಹೇಳು ತ್ತಾರೆ—'ನೀವು ಪ್ರಯೋಜನಾಂತರ ಪರರಿಗಾಗಿ ಬೇರೆಬೇರೆ ರೂಪದಲ್ಲಿ ಅವತರಿಸಿದರೇ ವಿನಾ ವಂಶಪರಂಪರೆಯಾಗಿ ದಾಸರಾಗಿರುವ ನಮಗೆ ವ್ಯೈ ದೋರಿದಿರಾ ? ಆದರೆ ನನ್ನ ಆಶೆ ಬೆಳೆಯುವಂತೆ ಹೃದಯದಲ್ಲಿ ಪ್ರಕಾಶಿಸು ವುದೇತಕ್ಕೆ ? ನಿಮ್ಮನ್ನು ಎಳ್ಳಷ್ಟೂ ತೋರಿಸಿಕೊಡಲಿಲ್ಲ'—ಎಂದು.

ನಮ್ಮ ಕುಲನಾಥನೆಂದು ಏಳೇಳು ತಲೆಗಳಿಂದಲೂ ನಿಮ್ಮ ಸೇವೆಯನ್ನೇ ಮಾಡುತ್ತಾ ಬಂದಿರುವ ನಮಗೇ ರೂಪತೋರಲು ನೀವು ಮೀನಮೇಷ ಎಣಿಸುತ್ತಿದ್ದೀರಿ. ಕಟ್ಟಿಕೊಳ್ಳಲು ಕೈಗೆ ಎಟುಕದಿರುವ ನೀವು ಈ ಆಶೆ ಬೆಳೆಯುವಂತೆ ಮಾಡುವುದೇತಕ್ಕೆ ? ಹೃದಯದಲ್ಲಿ ಪ್ರಕಾಶಿಸುವಂತೆ ಕಟ್ಟಿ ಕೊಳ್ಳಲು ಎಟುಕದೆ ಇರುವುದು, ಕೈಗೆಟುಕದಂತೆ ಹೃದಯದಲ್ಲಿ ಪ್ರಕಾಶಿಸು ತ್ತಿರುವುದು ಹೀಗೆ ಮಾಡುತ್ತಿದ್ದೀರಿ. ಹೃದಯದಲ್ಲಿ ಪ್ರಕಾಶಿಸುವುದಲ್ಲದೆ ನಿತ್ಯಸೂರಿಗಳಿಗೆ ಹೇಗೆ ದರ್ಶನ ಕೊಡುವಿರೋ ಹಾಗೆ ಪೂರ್ಣವಾಗಿ ಎಲ್ಲರಿಗೂ ತೋರಿಸುವುದಕ್ಕಾಗಿ ತಾನೇ ಇಲ್ಲಿ ಬಂದು ನಿಂತಿರುವುದು ?

**ಏರಾರ್‌ಪೊಲಿಲ್ ಶೂಟ್ ಇಂದಳೂರಿಲ್ ಎಂದೈ ಪೆರುಮಾನ್ನೈ**
**ಕಾರಾರ್‌ಪುರವಿನ್ ಮಂಗೈವೇಂದನ್ ಕಲಿಯನ್ ಒಲಿಶೆಯ್‌ದ**
**ಶೀರಾರಿನ್‌ಶೊಲ್ ಮಾಲೈ ಕತ್ತುತಿರಿವಾರ್ ಉಲಹತ್ತು**
**ಆರಾರ್ ಅವರೇ ಅಮರರ್ಕ್ಕು ಎನ್ರುಂ ಅಮರರ್ ಆವಾರೇ**
**॥೧೦॥**

(ಏರಾರ್ ಪೊಟಿಲ್‌ಶೂಟ್ ಇಂದಳೂರಿಲ್) ರಮಣೀಯವಾದ ಉದ್ಯಾನಗಳಿಂದ ಸುತ್ತುವರಿಯಲ್ಪಟ್ಟ ಇಂದಳೂರಿನಲ್ಲಿ ಇರುವ (ಎಂದೈಪೆರು ಮಾನ್ಯೆ) ಸ್ವಾಮಿಯ ವಿಷಯವಾಗಿ (ಕಾರಾರ್ ಪುರವಿನ್‌ಮಂಗೈವೇಂದನ್) ಮೇಘಗಳು ಕವಿದಿರುವ ತೋಪುಗಳನ್ನುಳ್ಳ ತಿರುಮಂಗೈನಗರಿಗೆ ಅಧಿಪರಾದ (ಕಲಿಯನ್ ಒಲಿಶೆಯ್‌ದ) ತಿರುಮಂಗೈ ಆಳ್ವಾರ್ರವರು ಹಾಡಿದ (ಶೀರಾರ್ ಇನ್‌ಶೊಲ್‌ಮಾಲೈ) ಪರಮಭೋಗ್ಯವಾದ ಈ ಶ್ರೀ ಸೂಕ್ತಿಗಳನ್ನು (ಕತ್ತು ತಿರಿವಾರ್) ಕಲಿಯುವುದನ್ನೇ ಯಾತ್ರೆಯನ್ನಾಗಿ ಉಳ್ಳವರು (ಉಲಹತ್ತು ಆರಾರ್ ಅವರೇ) ಈ ಲೋಕದಲ್ಲಿ ಯಾರು ಯಾರು ಇದ್ದಾರೋ ಅವರೇ (ಎನ್ರುಂ ಅಮರರ್‌ಕ್ಕು) ಯಾವ ಕಾಲದಲ್ಲಿಯೂ ನಿತ್ಯ ಸೂರಿಗಳಿಗೆ (ಅಮರರ್ ಆವಾರ್) ಗೌರವಾರ್ಹರಾಗುತ್ತಾರೆ.

ಅತಿ ಸುಂದರವಾದ ಸನ್ನಿವೇಶವನ್ನುಳ್ಳ ಇಂದಳೂರಿನಲ್ಲಿ ಸರ್ವೇಶ್ವರನು ನೆಲಸಿದ್ದಾನೆ. ಭಗವದ್ಗುಣಗಳನ್ನು ಪೂರ್ಣವಾಗಿ ಹೊಂದಿರುವ ಈ ಶ್ರೀ ಸೂಕ್ತಿಗಳನ್ನು ಆಳ್ವಾರ್ ಹಾಡಿದರು. 'ಅಹಂ ವಕ್ತಾ ಭವಾನ್ ಶ್ರೋತಾ ವಾಚ್ಯೋ ಯೋಗೋ ವಿಮುಕ್ತಿದಃ'. ರಘುವರಚರಿತವನ್ನು ಅಪ್ರತಿಮರಾದ ಮುನಿಗಳು ಹೇಳಿದಂತೆಯೇ ಇದು. ಇದನ್ನು ಅಭ್ಯಾಸ ಮಾಡಿ ಆ ಗರ್ವ ದೊಡನೆ ತಿರಿಯುವವರು–ಇದನ್ನು ಅಭ್ಯಾಸ ಮಾಡುವುದಷ್ಟೇ ಬೇಕಾದುದು. ಅವರ ಜನ್ಮ ವೃತ್ತಾದಿಗಳು ಏನಾದರೂ ಆಗಿರಬಹುದು. ಅಂಥವರನ್ನು ಸ್ವತಃ ಉತ್ಕರ್ಷವನ್ನುಳ್ಳ ನಿತ್ಯಸೂರಿಗಳೇ ಶಿರಸಾ ನಮಿಸಿ ಗೌರವಿಸುವರು.

---

## ನಾಲ್ಕನೆಯ ಪತ್ತು—ಹತ್ತನೆಯ ತಿರುಮೊಳಿ

# 'ಆಯರ್‌ಚ್ಚಿಯರ್'

## ಪ್ರವೇಶ

'ನಾವು ನೆನೆದಂತೆ ನಿನ್ನ ಸಂಶ್ಲೇಷ ಲಭಿಸಲಿಲ್ಲ' ಎಂದು ಹಿಂದಿನ ದಶಕದಲ್ಲಿ ಖಿನ್ನರಾದರು ಆಳ್ವಾರ್ರವರು. 'ನಮ್ಮನ್ನು ಆಶಿಸಿದವರಿಗೆ ಅವರವರ ಆಶೆ ಯನ್ನು ಸಫಲಗೊಳಿಸಲು ನಾವು ರಾಮಕೃಷ್ಣಾದ್ಯವತಾರಗಳನ್ನು ಮಾಡಿ

ದರ್ಶನ ಈಯಲಿಲ್ಲವೇ ? ಈಗ ತಿರುವೆಳ್ಳಿಯಂಗುಡಿಯಲ್ಲಿ ಸನ್ನಿಹಿತರಾಗಿಯೂ ಇದ್ದೇವೆ. ನಿಮ್ಮ ಇಚ್ಛಾ ಪ್ರಕಾರಗಳಿಗನುಸಾರವಾಗಿ ಸೇವಿಸಬಹುದಲ್ಲಾ'— ಎಂದು ಸ್ವಾಮಿಯು ಸಮಾಧಾನ ಮಾಡಲು ಸಮಾಹಿತರಾಗಿ ಅವನನ್ನು ಸ್ತುತಿಸಿ ಅನುಭವಿಸುತ್ತಾರೆ. ಹಿಂದಿನ ದಶಕದಲ್ಲಿಯೂ ಈ ದಶಕದಲ್ಲಿಯೂ ಅರ್ಚಾವತಾರವನ್ನೇ ಅನುಭವಿಸಿದ ಇವರು ಅಲ್ಲಿ ಖಿನ್ನತೆಯನ್ನೂ ಇಲ್ಲಿ ಸಂತೋಷವನ್ನೂ ಹೊಂದುವುದು ಸರಿಯೇ ಎಂದರೆ ಒಂದು ಗುಣವನ್ನು ಆವಿಷ್ಕಾರ ಮಾಡಿ ಅದನ್ನು ತೋರಿಸಿ ಸಂತೋಷಪಡಿಸಿದ ಸ್ವಾಮಿ—'ತದೇವ ಕೋಪಾಯ ಯಶಃ ಪ್ರಸಾದಾಯ ಚ ಜಾಯತೇ ? ಎಂಬಂತೆ.

ಆಯೆರ್ಚ್ಚಿ ಯುರ್ ಅಟ್ಕ್ರೈಪ್ಪವೆಣ್ಣೆ ಯುಂಣ್ಡು ಒರುಕಾಲ್
ಆಲಿಲೈವಳರ್ನ್ದ ಎಂಬೆರುಮಾನ್
ಪೇಯೆರ್ಚ್ಚಿ ಯೈ ಮುಲೈಯುಂಣ್ಡು ಇಣೈಮರುದು ಇರುತ್ತು
ಪೆರುನಿಲಮಳನ್ದವನ್ ಕೋಯಿಲ್
ಕಾಯೆರ್ತ್ತ ನೀಳ್ ಕಮುಕುಮ್ ಕದಲಿಯುಂ ತೆಂಗುಂ
ಎಂಗುಂ ಆಮ್ಪೊಟಿಲ್ ಹಳಿನ್ ನಡುವೇ
ವಾಯೆರ್ತ್ತ ನೀರ್ ಪಾಯುಂ ಮಣ್ಣಿಯಿನ್ ತೆನ್ಪಾಲ್
ತಿರುವೆಳ್ಳಿಯಂ ಗುಡಿಯದುವೇ ॥೧॥

(ಆಯರ್ಚ್ಚಿಯುರ್ ಅಟ್ಕೈಪ್ಪವೆಣ್ಣೆಯುಂಡು) ಗೋಪಾಂಗನೆಯರು ಮೊರೆ ಯಿಡುವಂತೆ ನವನೀತ ಭೋಜನ ಮಾಡಿದವನಾಗಿಯೂ, (ಒರುಕಾಲ್ ಆಲಿಲೈ ವಳರ್ನ್ದ ಎಮ್ಬೆರುಮಾನ್) ಒಂದಾನೊಂದು ಕಾಲದಲ್ಲಿ ವಟಪತ್ರಶಾಯಿ ಯಾದವನಾಗಿಯೂ, (ಪೆಯರ್ಚ್ಚಿ ಯೈಮುಲೈಉಂಡು) ಪೂತನಿಯ ಸ್ತನ್ಯವನ್ನು ಪಾನಮಾಡಿದವನಾಗಿಯೂ, (ಇಣೈಮರುದು ಇರುತ್ತು) ಯಮಳಾರ್ಜುನ ವೃಕ್ಷಗಳನ್ನು ಭಂಜಿಸಿದವನಾಗಿಯೂ (ಪೆರುನಿಲಂ ಅಳನ್ದವನ್) ವಿಶಾಲವಾದ ದ್ಯಾವಾಪೃಥಿವಿಗಳನ್ನು ಅಳೆದವನಾಗಿಯೂ ಇರುವ ನಮ್ಮ ಸ್ವಾಮಿಯ (ಕೋಯಿಲ್) ದಿವ್ಯವಾದ ಆಲಯವು ಯಾವುದೆಂದರೆ (ಕಾಯ್ತ್ತ ನೀಳ್ ಕಮುಕುಂ ಕದಲಿಯುಂ ತೆಂಗುಂ) ಕಾಯಿಗಳಿಂದ ತುಂಬಿದ ಉನ್ನತವಾದ ಅಡಿಕೆ ಮರಗಳೂ ಬಾಳೆಗಿಡಗಳೂ ತೆಂಗಿನಮರಗಳೂ (ಎಂಗುಂ ಆಮ್ ಪೊಟಿಲ್

ಹಳಿನ್ ನಡುವೇ) ಎಲ್ಲೆಲ್ಲಿಯೂ ತುಂಬಿರುವಂತಹ ತೋಟಗಳ ಮಧ್ಯದಲ್ಲಿ (ವಾಯ್‌ತ್ತ ನೀರ್‌ಪಾಯುಂ) ಸಾಕಾಗುವಷ್ಟು ಜಲವು ಪ್ರವಹಿಸುವ (ವಣ್ಣೆ ಯಿನ್ ತೆನ್‌ಪಾಲ್) ವಣ್ಣೆ ಎಂಬ ನದಿಯ ದಕ್ಷಿಣ ತೀರದಲ್ಲಿರುವ (ತಿರುವೆಳ್ಳಿ ಯುಂಗುಡಿಯದುವೇ) ತಿರುವೆಳ್ಳಿಯುಂಗುಡಿ ಎಂಬುವ ದಿವ್ಯಕ್ಷೇತ್ರವೇ ಆಗಿದೆ.

ಎಡಗೈ ಬಲಗೈ ಭೇದವರಿಯದ ಐದುಲಕ್ಷ ಗೋಪಿಯರು ಕೈಯೆತ್ತಿ ಕೂಗಾಡುವಂತೆ ನವನೀತಚೌರ್ಯ ಮಾಡಿದನಿವನು. ಆ ಗೋಪಿಯರು ಆದರದಿಂದ ಆಹ್ವಾನಿಸಲು ಅಲ್ಲಿ ಹೋಗಿ ನವನೀತ ಭೋಜನ ಮಾಡಿದ ಎಂದೂ ಆಗಬಹುದು. ಕೃಷ್ಣನ ಚೌರ್ಯ ಸ್ಪೃಹಣೀಯವಾಗಿರುವುದಷ್ಟೇ ? 'ಇನ್ನೊಂದು ಬಾರಿ ಬೆಣ್ಣೆ ಕದಿಯಲು ಬರುವುದಿಲ್ಲವೋ ?'—ಎಂದು ಆಹ್ವಾನಿಸುವ ರೀತಿ ಇವನು ಕದಿಯುತ್ತಿದ್ದ ಬೆಣ್ಣೆಯನ್ನು. ಎಳೆಯ ಶಿಶುವಾಗಿ ಜಗತ್ತನ್ನೆಲ್ಲಾ ಹೊಟ್ಟೆಯಲ್ಲಿಟ್ಟುಕೊಂಡು, ಕೂಗು ಹಾಕುವರೊಬ್ಬರೂ ಇಲ್ಲದ ಸಮಯದಲ್ಲಿ ಎಳೆಯ ಆಲದೆಲೆಯ ಮೇಲೆ ಶಯನಿಸಿದವನಿವನು. 'ಅಘಟಿತ ಘಟನಾ ಸಾಮರ್ಥ್ಯವನ್ನು ತೋರಿ ನನ್ನನ್ನು ಅನನ್ಯಾರ್ಹನನ್ನಾಗಿ ಮಾಡಿದ ನವನು'—ಎನ್ನುವರು ಆಳ್ವಾರ್ ಅವರು. ಶ್ರುತಿ ಕೊಂಡಾಡುವಂತೆ ಮೂರು ಹೆಜ್ಜೆಗಳಿಂದ ಮೂರು ಲೋಕವನ್ನೂ ಆಕ್ರಮಿಸಿಕೊಂಡವನವನು. ಇಂಥ ಆಶ್ರಯಣೀಯವಸ್ತು ಸನ್ನಿಹಿತವಾಗಿರುವ ದೇಶವನ್ನು ಆ ದೇಶದ ಭೋಗ್ಯ ತೆಯೇ ತೋರಿಸಿಕೊಡುತ್ತಿದೆ. ಅವನಿರುವ ದಿವ್ಯಾಲಯವೆಂದರೆ ಅವನನ್ನು ಆಶ್ರಯಿಸಲು ಸೇರಬೇಕಾದ ಸ್ಥಲ.

ಆನಿರೈಮೇಯ್‌ತ್ತು ಅನ್ರು ಅಲೈಕಡಲ್ ಅಡೈತ್ತಿಟ್ಟು
ಅರಕ್ಕರ್ ತಮ್ ಶಿರಂಗಳೈ ಉರುಟ್ಟಿ
ಕಾರ್‌ನಿರೈಮೇಗಮ್ ಕಲನ್ದದೋರುರುವಂ
ಕಣ್ಣನಾರ್ ಕರುದಿಯ ಕೋಯಿಲ್
ಪೂನಿರೈ ಶೆರುಂದಿ ಪುನ್ನೈ ಮುತ್ತರುಂಬಿ
ಪೊದುಂಬಿಡೈ ವರಿವಣ್ಡು ಮಿಣ್ಡಿ
ತೇನ್ ಇರೈತ್ತು ಉಣ್ಡು ಅಂಗು ಇನ್ನಿಶೈಮುರಲುಂ
ತಿರುವೆಳ್ಳಿಯಂ ಗುಡಿಯದುವೇ ॥೨॥

(ಅನ್ರು ಆನಿರೈಮೇಯರ್‌ತ್ತು) ಹಿಂದಿನ ಕಾಲದಲ್ಲಿ ಗೋಪಾಲಕೃಷ್ಣನಾಗಿ ಹಸುಗಳ ಮಂದೆಯನ್ನು ಮೇಯಿಸಿದವನೂ, (ಅಲೈಕಡಲ್ ಅಡೈತ್ತಿಟ್ಟು) ಅಲೆಗಳೇಳುವ ಸಮುದ್ರದಲ್ಲಿ ಸೇತು ಬಂಧನಮಾಡಿ, ಲಂಕೆಯನ್ನು ಪ್ರವೇಶಿಸಿ (ಅರಕ್ಕರ್ ತಮ್ ಶಿರಂಗಳ್ ಉರುಟ್ಟಿ) ರಾಕ್ಷಸರುಗಳ ತಲೆಗಳನ್ನು ಕತ್ತರಿಸಿ ಉರುಳಿಸಿದವನೂ, (ಕಾರ್‌ನಿರೈಮೇಗಂ ಕಲಂದದೋರುವಂ) ವರ್ಷಾಕಾಲದ ಮೇಘವನ್ನು ಹೋಲುವ ವಿಲಕ್ಷಣವಾದ ದಿವ್ಯಮಂಗಳ ವಿಗ್ರಹವನ್ನುಳ್ಳವನೂ ಆದ (ಕಣ್ಣನಾರ್) ಶ್ರೀಕೃಷ್ಣನು (ಕರುದಿಯುಕೋಯಿಲ್) ಮನಸ್ಸಿನಿಂದ ಬಯಸುವ ದಿವ್ಯದೇಶವು ಯಾವುದೆಂದರೆ (ಪೂನಿರೈ) ಹೂಗಳ ಸಾಲುಗಳಿಂದ ಶೋಭಿತವಾದ (ಶೆರುಂದಿ) ಸುರಹೊನ್ನೆಮರಗಳಲ್ಲಿಯೂ (ಮುತ್ತು ಅರುಂಬಿ ಪುನ್ನೈ) ಮುತ್ತಿನಂತಿರುವ ಮೊಗ್ಗುಗಳಿಂದ ಅಲಂಕೃತವಾದ ಪುನ್ನಾಗ ಮರ ಗಳಲ್ಲಿಯೂ (ಪೊದುಂಬಿಡೈ) ದ್ವಾರಗಳಲ್ಲಿ (ಪರಿವಂಡುಮಿಂಡಿ) ಸುಂದರವಾದ ಭೃಂಗಗಳು ನೆರೆದು (ಅಂಗು) ಆ ಜಾಗಗಳಲ್ಲಿ (ತೇನ್ ಇರೈತ್ತು ಉಂಡು) ಸಂಭ್ರಮವಾಗಿ ಮಧುಪಾನಮಾಡಿ (ಇನ್ನಿಶೈಮುರಲುಂ) ಮಧುರವಾದ ರಾಗ ಗಳನ್ನು ಹಾಡುವಂತಹ ಸ್ಥಳವಾದ (ತಿರುವೆಳ್ಳಿಯಂಗುಡಿಯದುವೇ) ತಿರುವೆಳ್ಳಿಯಂಗುಡಿ ಎಂಬುವ ದಿವ್ಯಕ್ಷೇತ್ರವೇ.

ತನ್ನ ಪರತ್ವವನ್ನೆಣಿಸದೆ ದನಗಳನ್ನು ಕಾಯುವ ಕೆಲಸವನ್ನು ಮಾಡಿದ ಸ್ವಾಮಿಯ ಪರಮಸೌಲಭ್ಯಕ್ಕೆ ಆಳ್ವಾರ್ ಪರವಶರಾಗಿದ್ದಾರೆ. ಕೇವಲ ಸಂಕಲ್ಪದಿಂದಲೇ ರಾವಣಾದಿರಾಕ್ಷಸರ ಧ್ವಂಸವನ್ನು ಮಾಡಲು ಶಕ್ತನಾಗಿದ್ದರೂ 'ಸೇತು ಬಂಧನ ಮುಖಾಃ ಕ್ರೀಡಾಸ್ತ್ವಾಡಂಬರಂ' ಎಂದಂತೆ ಆಡಂಬರಗಳನ್ನು ಮಾಡಿ ಶತ್ರುನಾಶವನ್ನು ಮಾಡಿದನವನು. ಹಾಗೆ ರಾಕ್ಷಸವಧವನ್ನು ಮಾಡಿದಾಗ ಸ್ವಾಮಿಯ ದೇಹಕಾಂತಿ ಕಾಲಮೇಘದ ಕಾಂತಿಗೆ ಸದೃಶವಾಗಿದ್ದಿತಂತೆ. ಆ ಶ್ರೀರಾಮನೇ ಮತ್ತೆ ಕೃಷ್ಣನಾಗಿ ಅವತರಿಸಿ ಈಗ ಇರುತ್ತಿರುವ ದೇಶ ತಿರು ವೆಳ್ಳಿಯಂಗುಡಿ. ಮಧುವನದಲ್ಲಿ ಮಧುಪಾನ ಮಾಡಿದ ವಾನರಶ್ರೇಷ್ಠರು ಗಳಂತೆ ಇಲ್ಲಿ ಭೃಂಗಗಳು ಕೋಲಾಹಲಮಾಡುತ್ತಾ ಮಧುಪಾನಮಾಡಿ ಮಧುರವಾಗಿ ಹಾಡುತ್ತಿರುತ್ತವೆ.

ಕಡುವಿಡಮುಡೈಯ ಕಾಳಿಯನ್‌ತಡತ್ತೈ
ಕಲಕ್ಕಿಮುನ್ ಅಲಕ್ಕಟಿತ್ತು ಅವನ್‌ತನ್
ಪಡಂ ಇರಪಾಯ್‌ನ್ದು ಪಣ್ಮಣಿಶಿನ್ದ
ಪಲ್‌ನಡಂ ಪಯಿನ್ರವನ್ ಕೋಯಿಲ್
ಪಡವರವಲ್‌ಹುಲ್ ಪಾವೈನಲ್ಲಾರ್‌ಹಳ್
ಪಯುತ್ತಿಯನಾಡಹತ್ತು ಒಲಿಪೋಯ್
ಅಡೈಪುಡೈತಟುವಿ ಅಂಡಂ ನಿನ್ರು ಅದಿರುಮ್
ತಿರುವೆಳ್ಳಿಯಂ ಗುಡಿಯದುವೇ ॥೩॥

(ಮುನ್) ಹಿಂದೊಂದು ಕಾಲದಲ್ಲಿ (ಕಡುವಿಡಮುಡೈಯ) ಕ್ರೂರವಾದ ವಿಷದಿಂದ ಯುಕ್ತನಾದ (ಕಾಳಿಯನ್ ತಡತ್ತೈ) ಕಾಳಿಂಗನಿದ್ದ ತಟಾಕವನ್ನು (ಕಲಕ್ಕಿ) ಕದಡಿ (ಅಲಕ್ಕತ್ತು) ಆ ನಾಗನನ್ನು ಆಯಾಸಗೊಳಿಸಿ (ಅವನ್ ತನ್ ಪಡಂ ಇರಪಾಯ್‌ನ್ದು) ಆ ಹಾವಿನ ಹೆಡೆಗಳು ಮುರಿದುಹೋಗುವಂತೆ ಹಾಯ್ದು (ಪಲ್‌ಮಣಿಶಿನ್ದ) ಹೆಡೆಗಳಲ್ಲಿದ್ದ ರತ್ನಗಳೆಲ್ಲ ಚೆಲ್ಲಿ ಹೋಗುವಂತೆ (ಪಲ್‌ನಡಂ ಪಯಿನ್ರವನ್ ಕೋಯಿಲ್) ಆ ಹೆಡೆಗಳ ಮೇಲೆ ನಾನಾ ವಿಧವಾದ ನರ್ತನಗಳನ್ನು ಮಾಡಿದ ಭಗವಂತನ ಸನ್ನಿಧಿಯು ಯಾವುದು ಎಂದರೆ— (ಪಡವರ ವಲ್‌ಕುಲ್) ಹೆಡೆಬಿಚ್ಚಿದ ಹಾವಿಗೆ ಸಮನಾದ ನಿತಂಬವನ್ನುಳ್ಳ (ಪಾವೈನಲ್ಲಾರ್‌ಹಳ್) ಸುಂದರಿಯರಾದ ಸ್ತ್ರೀಯರು (ಪಯುತ್ತಿಯನಾಡ ಹತ್ತು ಒಲಿ) ಅಭ್ಯಾಸಮಾಡಿದ ನಟನದ ಧ್ವನಿಯು (ಅಡೈಪುಡೈಪೋಯ್) ಅಹೋ ರಾತ್ರಿಯೆಲ್ಲಾ ಸಮೀಪದ ಪ್ರದೇಶಗಳಲ್ಲೆಲ್ಲಾ (ತಟುವಿ) ವ್ಯಾಪಿಸಿ (ಅಂಡಂ ನಿನ್ರು ಅದಿರುಂ) ಆಕಾಶವನ್ನು ಸೇರಿ ಪ್ರತಿಧ್ವನಿ ಮಾಡುವಂತಹ (ತಿರುವೆಳ್ಳಿಯಂ ಗುಡಿಯದುವೇ) ತಿರುವೆಳ್ಳಿಯಂಗುಡಿ ಎಂಬ ದಿವ್ಯಕ್ಷೇತ್ರವೇ.

ನಾಲ್ಕೈದು ಯೋಜನಗಳ ದೂರದಲ್ಲಿ ಬರುವ ಹಕ್ಕಿಗಳೂ ಸತ್ತು ಬೀಳುವಂತೆ ಕ್ರೂರವಾದ ವಿಷವನ್ನುಳ್ಳ ಕಾಳಿಯನಿದ್ದ ಮಡುವಿನೊಳಗೆ ಧುಮ್ಮಿಕ್ಕಿ ಆ ನಾಗನು ಕ್ಲೇಶಪಡುವಂತೆ ಮಾಡಿದ ಶ್ರೀಕೃಷ್ಣ. ದಡದಲ್ಲಿದ್ದ ಕದಂಬವೃಕ್ಷದಮೇಲಿನಿಂದ ಆ ನಾಗನ ಹೆಡೆಗಳ ಮೇಲೆ ಧುಮುಕಿದಾಗ ಆ ಹೆಡೆಗಳಲ್ಲಿದ್ದ ರತ್ನಗಳೆಲ್ಲಾ ಉದುರಿ ಚೆಲ್ಲಾಡಿಹೋದವಂತೆ. ಶ್ರೀಕೃಷ್ಣನು

ಆಡಿದ ನರ್ತನಗಳಿಂದ ಭರತಶಾಸ್ತ್ರಕ್ಕೆ ಬೇಕಾದ ಲಕ್ಷಣಗಳೆಲ್ಲ ಲಬ್ಧವಾದವಂತೆ. ಈ ಕೃಷ್ಣನ ನಟನವೇ ಆ ಲಲನಾಮಣಿಯರ ನರ್ತನಕ್ಕೆ ಹೇತುವಾದಂತೆ ಇದೆ.

ಕರವೈ ಮುನ್‌ಕಾತ್ತು ಕಂಜನೈಕ್ಕಾಯ್‌ನ್ದ
ಕಾಳಮೇಗತ್ತಿರು ಉರುವನ್
ಪರವೈಮುನ್‌ಉಯರ್‌ತ್ತು ಪಾರ್ಕ್ಕಡಲ್‌ತುಯಿನ್ರ
ಪರಮನಾರ್ ಪಳ್ಳಿಕೊಳ್ ಕೋಯಿಲ್
ತುರೈತುರೈತೋರುಂ ಪೊನ್ಮಣಿಶಿದರುಂ
ತೋಹುತಿರೈ ಮಣ್ಣಿಯಿನ್‌ತೆನ್ಪಾಲ್
ಶೆರಿಮಣಿಮಾಡಕ್ಕೊಡಿಕದಿರ್ ಅಣವುಮ್
ತಿರುವೆಳ್ಳಿಯಂಗುಡಿಯದುವೇ ॥೪॥

(ಮುನ್ ಕರವೈಕಾತ್ತು) ಹಿಂದಿನ ಕಾಲದಲ್ಲಿ ಹಸುಗಳನ್ನು ರಕ್ಷಿಸಿದವನೂ (ಕಂಜನೈಕಾಯ್‌ನ್ದ) ಕಂಸನನ್ನು ಕೊಂದವನೂ (ಕಾಳಮೇಗತ್ತಿರು ಉರುವನ್) ಕಾಲಮೇಘ ಸದೃಶವಾದ ದಿವ್ಯಮಂಗಳ ವಿಗ್ರಹವನ್ನುಳ್ಳವನೂ (ಪರವೈ ಮುನ್ ಉಯರ್‌ತ್ತು) ಗರುಡಧ್ವಜನಾಗಿರುವವನೂ, (ಪಾರ್‌ಕ್ಕಡಲ್ ತುಯಿನ್ರ) ಕ್ಷೀರಸಾಗರಶಾಯಿಯಾಗಿಯೂ ಇರುವನೂ ಆದ (ಪರಮನಾರ್) ಸರ್ವೇಶ್ವರನು (ಪಳ್ಳಿಕೊಳ್‌ಕೋಯಿಲ್) ಶಯನಿಸಿರುವ ಸ್ಥಳ ಯಾವುದೆಂದರೆ (ತುರೈತುರೈತೋರುಂ) ಎಲ್ಲಾ ಘಟ್ಟಗಳಲ್ಲಿಯೂ (ಪೊನ್‌ಮಣಿಶಿದರುಂ) ಚಿನ್ನವನ್ನೂ ರತ್ನಗಳನ್ನೂ ತಂದು ತಳ್ಳುವ (ತೋಹುತಿರೈ) ಮೇಲೆದ್ದ ಅಲೆಗಳನ್ನುಳ್ಳ (ಮಣ್ಣಿಯಿನ್ ತೆನ್ಪಾಲ್) ಮಣ್ಣಿನದಿಯ ದಕ್ಷಿಣಭಾಗದಲ್ಲಿ (ಶೆರಿಮಣಿಮಾಡಂ ಕೊಡಿ) ನಿಬಿಡವಾದ ರತ್ನಮಾಳಿಗೆಗಳಲ್ಲಿರುವ ಧ್ವಜಗಳು (ಕದಿರ್ ಅಣವುಮ್) ಸೂರ್ಯಮಂಡಲವನ್ನು ಸ್ಪರ್ಶಿಸುವಂತಿರುವ (ತಿರುವೆಳ್ಳಿಯಂ ಗುಡಿಯದುವೇ) ತಿರುವೆಳ್ಳಿಯಂಗುಡಿ ಎಂಬ ದಿವ್ಯಕ್ಷೇತ್ರವೇ.

ಗೋರಕ್ಷಣವನ್ನು ಮಾಡಿ, ಆ ಗೋ ಸಮೃದ್ಧಿಯನ್ನು ಸಹಿಸದ ಕಂಸನನ್ನು ಮುಗಿಸಿದ ಶ್ರೀಕೃಷ್ಣ. ಆಶ್ರಿತ ರಕ್ಷಣಕ್ಕೆ ಅನುಕೂಲನಾಗಿದ್ದ ಗರುಡನನ್ನು ಧ್ವಜವನ್ನಾಗಿ ಹೊಂದಿದ್ದನವನು. ಬ್ರಹ್ಮಾದಿಗಳ ಕೂಗು ಕೇಳಿಸುವಂತೆ ಕ್ಷೀರ ಸಾಗರದಲ್ಲಿ ಶಯನಿಸಿದ್ದನವನು. ಕೃಷ್ಣಾವತಾರಕ್ಕೆ ಮೂಲವಾಗಿದ್ದ

ಕ್ಷೀರಾರ್ಣವ ಶಾಯಿತ್ವವನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಸೂರ್ಯ ಮಂಡಲವನ್ನು ಸ್ಪರ್ಶಿಸುವ ಮಹಾಳಿಗೆಗಳಿರುವ ಈ ದಿವ್ಯಕ್ಷೇತ್ರದಲ್ಲಿ ಆ ಸ್ವಾಮಿ ನೆಲಸಿದ್ದಾನೆ.

ಪಾರಿನೈ ಉಂಡು ಪಾರಿನೈ ಉಮಿೞ್ನ್ದು
ಪಾರದಂಕೈಎರಿನ್ದು ಒರುಕಾಲ್
ತೇರಿನೈ ಊರ್ನ್ದು ತೇರಿನೈತುರನ್ದ
ಶೆನ್ಗಣ್‌ಮಾಲ್ ಶೆನ್ರುಉರೈಕೋಯಿಲ್
ಏರ್‌ನಿರೈವಯಲುಳ್ ವಾಳೈಹಳ್ ಮರುಹಿ
ಎಮಕ್ಕು ಇಡಂ ಅನ್ರು ಇದೆನ್ರೆಣ್ಣಿ
ಶೀರ್‌ಮಲಿ ಪೊಯ್‌ಹೈ ಶೆನ್ರು ಅಣೈಹಿನ್ರ
ತಿರುವೆಳ್ಳಿಯಂಗುಡಿಯದುವೇ ॥೫॥

(ಒರುಕಾಲ್) ಒಂದು ಸಮಯದಲ್ಲಿ (ಪಾರಿನೈಉಂಡು) ಲೋಕಗಳನ್ನೆಲ್ಲವನ್ನೂ ಉಂಡು ತನ್ನ ಹೊಟ್ಟೆಯೊಳಗಿಟ್ಟುಕೊಂಡವನೂ (ಪಾರಿನೈಉಮಿೞ್ನ್ದು) ಮತ್ತೊಂದು ಕಾಲದಲ್ಲಿ ಆ ಲೋಕಗಳನ್ನೆಲ್ಲಾ ಹೊರಕ್ಕೆ ಹಾಕಿದವನೂ, (ಪಾರದಂ ಕೈ ಎರಿಂದು) ಭಾರತ ಯುದ್ಧವನ್ನು ನಿರ್ವಾಹಮಾಡಿದವನೂ, (ತೇರಿನೈ ಊರ್ನ್ದು) ಅರ್ಜುನನ ರಥವನ್ನು ನಡೆಸಿ (ತೇರಿನೈತುರನ್ದ) ಪ್ರತಿ ಪಕ್ಷದ ರಥಗಳನ್ನು ಭಂಗಪಡಿಸಿದವನೂ ಆದ (ಶೆಂಗಣ್‌ಮಾಲ್‌ಶೆನ್ರುಉರೈ ಕೋಯಿಲ್) ಪುಂಡರೀಕಾಕ್ಷನು ನೆಲಸಿ ಸಾನ್ನಿಧ್ಯವನ್ನು ಕೊಡುತ್ತಿರುವ ದಿವ್ಯ ದೇಶ ಯಾವುದೆಂದರೆ—(ಏರ್‌ನಿರೈವಯಲುಳ್) ಉಳುವ ಎತ್ತುಗಳ ಸಾಲು ಗಳನ್ನುಳ್ಳ ಗದ್ದೆಗಳಲ್ಲಿರುವ (ವಾಳೈಹಳ್‌ಮರುಹಿ) ಮೀನುಗಳು ಭಯಪಟ್ಟು (ಇದು ಎಮಕ್ಕು ಇಡಂ ಅನ್ರು ಎನ್ರು ಎಣ್ಣಿ) ಇದು ನಮಗೆ ವಾಸಯೋಗ್ಯ ವಾದ ದೇಶವಲ್ಲ ಎಂದು ತಿಳಿದು (ಶೀರ್‌ಮಲಿಪೊಯ್‌ಹೈ) ರಮಣೀಯವಾದ ಸರೋವರಗಳನ್ನು (ಶೆನ್ರುಅಣೈಹಿನ್ರ) ಹೋಗಿ ಸೇರುವಂತಹ ಜಾಗವಾದ (ತಿರುವೆಳ್ಳಿಯಂಗುಡಿಯದುವೇ) ತಿರುವೆಳ್ಳಿಯಂಗುಡಿ ಕ್ಷೇತ್ರವೇ ಆಗಿದೆ.

ವಿಶಾಲವಾದ ಭೂಮಿಯನ್ನು ತನ್ನ ಹೊಟ್ಟೆಯೊಳಗಿಟ್ಟುಕೊಂಡು ರಕ್ಷಿಸಿದವನೂ ಮತ್ತೊಮ್ಮೆ ಅದಕ್ಕೆ ಎಳ್ಳಷ್ಟೂ ನೋವಾಗದಂತೆ ಅದನ್ನು

ಹೊರಗೆ ಹಾಕಿದವನೂ ಆಗಿದ್ದಾನೆ ಆ ಸರ್ವರಕ್ಷಕ. ಆಶ್ರಿತರ ಮೇಲಿನ ವಾತ್ಸಲ್ಯ ದಿಂದ ಅವರಿಗೆ ಸಾರಥ್ಯವನ್ನು ಮಾಡಿದಂತೆ ಅತಿರಥಮಹಾರಥರು ರಥವನ್ನು ಬಿಟ್ಟು ಓಡುವಂತೆ ಮಾಡಿದವನೂ ಅವನೇ. ಅವನ ಆಶ್ರಿತ ವಾತ್ಸಲ್ಯವೆಲ್ಲಾ ಕಣ್ಣಿನಲ್ಲಿಯೇ ತೋರುವಂತೆ ಅವನು ಪುಂಡರೀಕನಯನನಾಗಿದ್ದಾನೆ. ಆಶ್ರಿತ ವ್ಯಾಮುಗ್ಧನಾದ ಅವನು ಇರುವ ದಿವ್ಯದೇಶ ಇದು. ಗದ್ದೆಗಳಲ್ಲಿರುವ ಮತ್ಸ್ಯಗಳು 'ಇದು ಅಪಾಯವಾದ ಜಾಗ; ನಮಗೆ ವಾಸಸ್ಥಾನವಲ್ಲ'— ಎಂದು ನಿರಪಾಯವಾದ ಜಾಗಕ್ಕೆ ಹೋಗಿ ಸೇರುತ್ತವಂತೆ. ಹಾಗೆ ಬ್ರಹ್ಮ ರುದ್ರಾದಿದೇವತೆಗಳೆಂಬ ವೃಷಭಗಳನ್ನು ಹೂಡಿಕೊಂಡು ಕರ್ಮಪಾಶಗಳನ್ನು ತೆಗೆದುಕೊಂಡು ಕಟ್ಟಿ ಉಳುತ್ತಿರುವ ಸರ್ವೇಶ್ವರನು ಸೃಜಿಸುವ ಲೀಲಾ ವಿಭೂತಿಯನ್ನು ಬಿಟ್ಟು ಭಗವಂತನ ಕೃಪಾಜಲವನ್ನು ಬಯಸುವ ಭಾಗವತರು ನಿರಪಾಯವಾದ ವಿರಜಾ ಜಲವನ್ನು ಸೇರುವರೆಂಬುದನ್ನು ಇದು ಸೂಚಿಸು ತ್ತಿದೆ. ಮುಮುಕ್ಷುಗಳು ಸಂಸಾರ ಭೀತಿಯಿಂದ ಸಂಸಾರವನ್ನು ಬಿಟ್ಟು 'ಹರಿಸರಸಿ ವಿಗಾಹ್ಯ' ಎಂಬಂತೆ 'ಏಷ ಬ್ರಹ್ಮಪ್ರವಿಷ್ಟೋಽಹಂ' ಎಂದಂತೆ ಭಗವಂತನಲ್ಲಿ ವರ್ತಿಸುವರು.

ಕಾತ್ತಿಡೈಪೀಳೈಕರನ್ದನ ಅರಂದೈಯುಱ

ಕಡಲರಕ್ಕರ್ ತಮ್‌ಶೇನೈ

ಕೂತ್ತಿಡೈಶೆಲ್ಲ ಕೊಡುಂಕಣೈ ತುರನ್ದ

ಕೋಲವಿಲ್ಲಿ ರಾಮನ್ ತನ್‌ಕೋಯಿಲ್

ಊತ್ತಿಡೈ ನಿನ್ರವಾಟೈಯಿನ್ ಕನಿಹಳ್

ಊಟ್‌ತ್ತು ವೀೞ್‌ನ್ದನ ಉಂಡು ಮಂಡಿ

ಶೇತ್ತಿಡೈ ಕಯಲ್‌ಹಳ್ ಉಹಳ್ ತಿಹೞ್ ವಯಲ್‌ಶೂೞ್

ತಿರುವೆಳ್ಳಿಯಂ ಗುಡಿಯದುವೇ ॥೬॥

(ಪೀಳೈ) ಪೀಳೈ ಹೂ (ಕಾತ್ತಿಡೈಕರನ್ದನ) ಬಿರುಗಾಳಿಯು ಹೊಡೆತಕ್ಕೆ ಸಿಕ್ಕಿ ಹಾರಿಹೋಗುವಂತೆ (ಅರಕ್ಕರ್‌ತಮ್‌ಕಡಲ್‌ಶೇನೈ) ರಾಕ್ಷಸರ ಸಾಗರೋಪಮ ವಾದ ಸೇನೆ (ಅರಂದೈಯುಱ) ದುಃಖಿಕ್ಕೊಳಗಾಗುವಂತೆಯೂ (ಕೂತ್ತಿಡೈಶೆಲ್ಲ) ಯಮನ ಬಳಿಗೆ ಹೋಗಿ ಸೇರುವಂತೆಯೂ (ಕೊಡುಂ ಕಣೈ ತುರನ್ದ) ಕ್ರೂರ ವಾದ ಬಾಣಗಳನ್ನು ಪ್ರಯೋಗಿಸಿದ (ಕೋಲವಿಲ್ ಇರಾಮನ್ ತನ್

ಕೋಯಿಲ್) ಅಂದವಾದ ಕೋದಂಡವನ್ನು ಪಾಣಿಯಲ್ಲಿ ಧರಿಸಿರುವ ಸರ್ವೇಶ್ವರನ ಸನ್ನಿಧಿ ಯಾವುದು ಎಂದರೆ—(ಊತ್ತಿಡೈನಿನ್ರ) ನೀರೂರಿರುವ ಜಾಗಗಳಲ್ಲಿ ಬೆಳೆದ (ವಾಟ್ಟೈಯಿನ್) ಬಾಳೆಯ ಗಿಡಗಳ (ಊಟ್ತ್ತು ವೀಟ್ನ್ದ ಕನಿಹಳ್) ಚೆನ್ನಾಗಿ ಮಾಗಿ ಕೆಳಗೆ ಬಿದ್ದ ಹಣ್ಣುಗಳನ್ನು (ಕಯಲ್‌ಹಳ್ ವಂಡಿ ಉಂಡು) ಮತ್ಸ್ಯಗಳು ಮೇಲೆ ಬಿದ್ದು ಭುಜಿಸಿ (ಶೇತ್ತಿಡೈ ಉಹಳ್) ಕೆಸರಿನ ಪ್ರದೇಶಗಳಲ್ಲಿ ಚಿಮ್ಮಿನಲಿಯುವ (ತಿಹಟ್‌ವಯಲ್‌ಶೂಟ್) ಸುಂದರವಾದ ಗದ್ದೆಗಳಿಂದ ಪರಿವೃತವಾದ (ತಿರುವೆಳ್ಳಿಯಂಗುಡಿಯದುವೇ) ತಿರುವೆಳ್ಳಿಯಂಗುಡಿ ಎಂಬ ದಿವ್ಯಕ್ಷೇತ್ರವೇ.

ತಿರುವೆಳ್ಳಿಯಂಗುಡಿಯಲ್ಲಿರುವ 'ಕೋಲವಿಲ್ಲಿರಾಮ'ನನ್ನು ಕೃಷ್ಣನ ರೂಪದಲ್ಲಿ ಇದುವರೆಗೂ ಅನುಭವಿಸಿದ ಇವರು ಈಗ ಶ್ರೀರಾಮನ ಅನುಸಂಧಾನ ಮಾಡಿದ್ದಾರೆ. ಬಿರುಗಾಳಿಗೆ ಸಿಕ್ಕಿದ ಹೂ ಎಲ್ಲಿ ಹೋಯಿತೆಂಬುದೇ ಹೇಗೆ ಗೊತ್ತಾಗುವುದಿಲ್ಲವೋ ಹಾಗೆ ರಾಕ್ಷಸ ಸೇನೆಯನ್ನೆಲ್ಲಾ ಅವನು ಧೂಳೀಪಟ ಮಾಡಿದನು. ಶ್ರೀರಾಮನು ಬಿಲ್ಲನ್ನು ಹಿಡಿದು ನಿಂತಿರುವ ಚೆಲುವನ್ನು ಕಂಡು 'ನಾನು ಬಿಲ್ಲನ್ನು ಹಿಡಿದಿರುವುದೂ ಒಂದು ಕ್ರಮವೋ ?'—ಎಂದು ತನ್ನನ್ನೇ ತಾನು ನಿಂದಿಸಿಕೊಂಡು 'ಚಾಪಂ ಚ ಮುಮೋಚ ವೀರಃ'—ಆ ರಾವಣ. ಶ್ರೀರಾಮ ಬಿಲ್ಲನ್ನು ಹಿಡಿದು ನಿಂತ ಭಂಗಿಯನ್ನು ನೋಡಿಯೇ ರಾಕ್ಷಸರೆಲ್ಲಾ ಹತರಾದರು. ಅಂಥ ರಾಮನ ಸನ್ನಿಧಿ ಇದು. ಹೃದಯವು ಪರಿಪಾಕಹೊಂದಿ ಭಗವದ್ಗುಣಗಳನ್ನು ಕೆಲವರು ವರ್ಷಿಸಲು ಆ ಗುಣಾನುಭವದಿಂದ ಗರ್ವಿತರಾಗಿ ವರ್ತಿಸುವ ಮುಮುಕ್ಷುಗಳ ಹಾಗೆ ಆ ದಿವ್ಯ ದೇಶದಲ್ಲಿರುವ ಮತ್ಸ್ಯಗಳು ವರ್ತಿಸುತ್ತವೆಯಂತೆ.

ಒಳ್ಳಿಯ ಕರುಮಂ ಶೆಯ್‌ವನ್ ಎನ್ರು ಉಣರ್‌ನ್ದ
ಮಾವಲಿ ವೇಳ್ವಿಯಿಲ್ ಪುಕ್ಕು
ತೆಳ್ಳಿಯ ಕುರಳಾಯ್ ಮೂವಡಿ ಕೊಂಡು
ತಿಕ್ಕುರ ವಳರ್‌ನ್ದವನ್ ಕೋಯಿಲ್
ಅಳ್ಳಿಯಂ ಪೊಟಿಲ್‌ವಾಯ್ ಇರುನ್ದುವಾಟ್
ಕುಯಿಲ್‌ಹಳ್ ಅರಿಯರಿಎನ್ರು ಅನ್ವೈ ಅಟ್ಕೈಪ್ಪ
ವೆಳ್ಳಿಯೋರ್‌ವಣಂಗ ವಿಳೈನ್ದು ಅರುಳ್ ಶೆಯ್‌ವಾನ್
ತಿರುವೆಳ್ಳಿಯಂಗುಡಿಯದುವೇ ॥೭॥

(ಒಳ್ಳಿಯಂಕರುಮಂ) ಔದಾರ್ಯದಿಂದ ಕೂಡಿದ ಸತ್ಕಾರ್ಯವನ್ನು (ಶೆಯ್‌ವನ್ ಎನ್ರು ಉಣರ್‌ನ್ದ) ಮಾಡುವೆನೆಂದು ಸಂಕಲ್ಪಿಸಿದ (ಮಾವಲಿವೇಳ್ವಿಯಿಲ್) ಮಹಾಬಲಿಯ ಯಜ್ಞವಾಟದಲ್ಲಿ (ತೆಳ್ಳಿಯಕುರಳಾಯ್ ಪುಕ್ಕು) ಮನೋಹರ ನಾದ ವಾಮನ ಮೂರ್ತಿಯಾಗಿ ಪ್ರವೇಶಿಸಿ (ಮೂವಡಿಕೊಂಡು) ಮೂರಡಿಯ ನೆಲವನ್ನು ಯಾಚಿಸಿ (ತಿಕ್ಕುರ ವಳರ್‌ನ್ದವನ್ ಕೋಯಿಲ್) ಸಕಲ ದಿಕ್ಕು ಗಳನ್ನೂ ವ್ಯಾಪಿಸಿ ಬೆಳೆದ ಭಗವಂತನ ಸನ್ನಿಧಿ ಯಾವುದು ಎಂದರೆ—(ಅಳ್ಳಿಯಂ ಪೊಟಿಲ್‌ವಾಯಕ್) ರಮಣೀಯವಾದ ಉಪವನಗಳಲ್ಲಿ (ಇರುಂದುವಾಟ್ ಕುಯಿಲ್‌ಹಳ್) ಇದ್ದು ನಲಿಯುವ ಕೋಗಿಲೆಗಳು (ಅರಿಅರಿಎನ್ರು ಅಟ್ಟೈಪ್ಪ) ಹರಿಃಹರಿಃ ಎಂದು ಕೂಗುವಂಥದೂ (ವೆಳ್ಳಿಯಾರ್ ವಣಂಗ ವಿರೈನ್ದು ಅರುಳ್ ಶೆಯ್‌ವಾನ್) ಶುಕ್ರನು ಬಂದು ಉಪಾಸಿಸಲು ಅವನಿಗೆ ಕ್ಷಿಪ್ರವಾಗಿ ಅನುಗ್ರಹ ಮಾಡುವ ಭಗವಂತನನ್ನುಳ್ಳದೂ ಆದ (ತಿರುವೆಳ್ಳಿಯಂ ಗುಡಿಯದುವೇ) ತಿರುವೆಳ್ಳಿಯಂಗುಡಿ ಎಂಬ ದಿವ್ಯಕ್ಷೇತ್ರವೇ.

'ದಾತವ್ಯಂ ಇತಿ ಯದ್ದಾನಂ' ಎಂದಂತೆ ದಾನಮಾಡುವುದರಲ್ಲಿ ದೀಕ್ಷಿತ ನಾದ ಮಹಾಬಲಿಯ ಔದಾರ್ಯವನ್ನು ಇಲ್ಲಿ ಹೇಳಿದೆ, 'ಯಾರು ಏನನ್ನು ಕೇಳಿದರೂ ಕೊಡುವೆನು'—ಎಂಬ ಸಂಕಲ್ಪವನ್ನವನು ಮಾಡಿದ್ದನಂತೆ. ಅಲ್ಲಿಗೆ ಸ್ವಾಮಿಯು 'ಸ್ವಾಧ್ಯಾಯಸ್ವರಸಂಪದಾ ಪರಿಷದಾಂ ಪ್ರೀತಿಂ ಸಮುತ್ಪಾದ ಯನ್' ಎಂದಂತೆ ವೇದಾಧ್ಯಯನಧ್ವನಿಮುಖರನಾದ ವಾಮನಮೂರ್ತಿಯಾಗಿ ಪ್ರವೇಶಿಸಿದ. ಶುಕ್ರಾಚಾರ್ಯರು ವಿರೋಧಿಸಿದರೂ, ಬಲಿಯೇ ಕೊಡುವುದಿಲ್ಲ ವೆಂದು ಹೇಳಿದರೂ, 'ತೆಗೆದುಕೊಳ್ಳದೇ ನಾನು ಹೋಗುವುದಿಲ್ಲ'—ಎಂದು ವಾಮನಮೂರ್ತಿ ಪ್ರವೇಶಿಸಿದ. 'ಕಿಂತೇ ಅಭೀಷ್ಟಂ ದದಾನಿ' ಎಂದು ಬಲಿ ಕೇಳಲು 'ತ್ರಿಪದಪರಿಮಿತಾ ಭೂಮಿಃ' ಎಂದನಿವನು. ಅದನ್ನು ಪಡೆದ ಮರು ಕ್ಷಣವೇ ದಶ ದಿಶೋವ್ಯಾಪ್ತನಾದ ತ್ರಿವಿಕ್ರಮನಾಗಿ ಅವನು ಬೆಳೆದ. ಅಂಥ ಪ್ರಭು ಇರುತ್ತಿರುವ ದಿವ್ಯದೇಶ ಇದು. ಸತ್ತ್ವನಿಷ್ಠರು ಬ್ರಾಹ್ಮಮುಹೂರ್ತ ದಲ್ಲಿ ಎದ್ದು 'ಹರಿಃ ಹರಿಃ' ಎನ್ನುವಂತೆ ಈ ದಿವ್ಯಕ್ಷೇತ್ರದ ಉದ್ಯಾನವನಗಳಲ್ಲಿ ರುವ ಕೋಗಿಲೆಗಳು ಕೂಗುತ್ತವಂತೆ. ಅಲ್ಲಿರುವ ತಿರ್ಯಕ್ಕುಗಳೂ ಹೀಗೆ ಸತ್ತ್ವೋತ್ತಮರ ವ್ಯಾಪಾರವನ್ನು ಅನುಕರಿಸುತ್ತವೆಯಂತೆ. ಶುಕ್ರನು ತನ್ನ ದುಃಖ ಪರಿಹಾರಕ್ಕಾಗಿ ಈ ಕ್ಷೇತ್ರದಲ್ಲಿ ಬಂದು ನಿಂತು ಸ್ವಾಮಿಯನ್ನು

ಉಪಾಸನೆ ಮಾಡಲು ಅವನಿಗೆ ಅನುಗ್ರಹವನ್ನು ಸ್ವಾಮಿ ಮಾಡಿದುದರಿಂದ ಈ ಕ್ಷೇತ್ರಕ್ಕೆ ಆ ಹೆಸರು ಬಂದಿದೆ. ವೆಳ್ಳಿಯಾರ್ ಎಂದರೆ ಶುದ್ಧಸತ್ತ್ವನಿಷ್ಠರು ಎಂದೂ ಅರ್ಥ ಧ್ವನಿಸುತ್ತದೆ.

ಮುಡಿಯುಡೈ ಅಮರರ್ಕ್ಕು ಇಡರ್ ಶೆಯ್ಯುಂ
ಅಶುರರ್ತಮ್ ಪೆರುಮಾನೈ ಅನ್ರುಅರಿಯಾಯ್
ಮಡಿಯಿಡೈ ವೈತ್ತು ಮಾರ್ವೈ ಮುನ್ ಕೀಂಡ
ಮಾಯನಾರ್ ಮನ್ನಿಯ ಕೋಯಿಲ್
ಪಡಿಯಿಡೈ ಮಾಡತ್ತು ಅಡಿಯಿಡೈತ್ತೂಣಿಲ್ ಪದಿತ್ತ
ಪಲ್ಮಣಿಹಳಿನ್ ಒಳಿಯಾಲ್
ವಿಡಿಪಹಲ್ ಇರವೆನ್ರು ಅರಿವು ಅರಿದಾಯ
ತಿರುವೆಳ್ಳಿಯಂಗುಡಿಯದುವೇ ॥೮॥

(ಮುಡಿಯುಡೈ ಅಮರರ್ಕ್ಕು) ಕಿರೀಟಧಾರಿಗಳಾದ ದೇವತೆಗಳಿಗೆ (ಇಡರ್ ಶೆಯ್ಯುಂ) ಪೀಡೆಯನ್ನುಂಟುಮಾಡುವವರಾದ (ಅಶುರರ್ತಮ್ ಪೆರುಮಾನೈ) ರಾಕ್ಷಸರಿಗೆ ಒಡೆಯನಾದ ಹಿರಣ್ಯಕಶಿಪುವನ್ನು (ಮುನ್ ಅನ್ರು) ಹಿಂದೊಂದು ಕಾಲದಲ್ಲಿ (ಅರಿಯಾಯ್) ಶ್ರೀ ನೃಸಿಂಹಮೂರ್ತಿಯಾಗಿ (ಮಡಿಯಿಡೈವೈತ್ತು) ತನ್ನ ಮಡಿಲಿನ ಮೇಲಿಟ್ಟುಕೊಂಡು (ಮಾರ್ವೈಕೀಂಡ ಮಾಯನಾರ್) ವಕ್ಷಃಸ್ಥಲವನ್ನು ಸೀಳಿ ಸಂಹರಿಸಿದ ಪರಮಾತ್ಮನ ಸನ್ನಿಧಿಯು ಯಾವುದು ಎಂದರೆ– (ಪಡಿಯಿಡೈ ಮಾಡತ್ತು) ಭೂಮಿಯ ಮೇಲೆ ಉಂಟಾದ ಭವನಗಳಲ್ಲಿ (ತೂಣಡಿಯಿಡೈಯಿಲ್ಪದಿತ್ತ) ನೆಟ್ಟಿರುವ ಸ್ತಂಭಗಳಲ್ಲಿ ಕೆತ್ತಿರುವ (ಪಲ್ಮಣಿಹಳಿನ್ ಒಳಿಯಾಲ್) ನಾನಾ ರತ್ನಗಳ ಪ್ರಭೆಯ ಕಾರಣ (ವಿಡಿಪಹಲ್ ಇರವೆನ್ರು ಅರಿವು ಅರಿದಾಯ) ಹಗಲು, ರಾತ್ರಿ ಎಂಬ ವಿಭಾಗದ ಅರಿವನ್ನು ಹೊಂದುವುದು ಕಷ್ಟವಾದ (ತಿರುವೆಳ್ಳಿಯಂ ಗುಡಿಯದುವೇ) ತಿರುವೆಳ್ಳಿಯಂ ಗುಡಿ ಎಂಬ ದಿವ್ಯಕ್ಷೇತ್ರವೇ.

'ಈಶ್ವರೋऽಹಂ' ಎಂಬ ದುರಭಿಮಾನವನ್ನುಳ್ಳ ದೇವಜಾತಿಗಳಿಗೆ ಕ್ಲೇಶವನ್ನುಂಟುಮಾಡಿದ ಅಸುರೇಂದ್ರನೊಬ್ಬನಿದ್ದ. ಅವನೇ ಹಿರಣ್ಯಕಶಿಪು. 'ಭಕ್ತಸ್ಯ ದಾನವಶಿಶೋಃ ಪರಿಪಾಲನಾಯ' ಎಂದು ಹೇಳಿದಂತೆ ಭಗವಂತನು

ಶ್ರೀ ನೃಸಿಂಹರೂಪಿಯಾಗಿ ಮೈದೋರಿ, ತನ್ನ ದೇವಿಯರೇ ಮೊದಲಾದವರನ್ನು ಇರಿಸಿಕೊಳ್ಳುವಂತಹ ತನ್ನ ಮಡಿಲಲ್ಲಿ ಆ ಪ್ರತಿಕೂಲನಾದ ಹಿರಣ್ಯನನ್ನು ಇಟ್ಟುಕೊಂಡು ತನ್ನ ನಖಗಳಿಂದ ಅವನ ಎದೆಯನ್ನು ಸೀಳಿಹಾಕಿದನು. ಅಂಥ ಸ್ವಾಮಿ ನಿತ್ಯವಾಸ ಮಾಡುವ ಕ್ಷೇತ್ರ ಇದು. ಆ ಕ್ಷೇತ್ರದಲ್ಲಿರುವ ಭವನಗಳಲ್ಲಿ ನೆಟ್ಟ ಕಂಭಗಳ ಅಡಿಯಲ್ಲಿ ಕೆತ್ತಿದ ನಾನಾ ರತ್ನಗಳ ಪ್ರಭೆ ಎಲ್ಲಾ ಕಾಲದಲ್ಲಿ ಒಂದೇ ಸಮನಾಗಿರುವುದರಿಂದ ಅಲ್ಲಿನ ಜನರಿಗೆ 'ಇದು ಹಗಲು', 'ಇದು ರಾತ್ರಿ' ಎಂದು ವಿಭಾಗ ಮಾಡುವುದೇ ಕಷ್ಟವಾಗುವುದಂತೆ.

ಕುಡಿಕುಡಿಯಾಹ ಕೂಡಿ ನಿನ್ರು ಅಮರರ್
ಕುಣಂಗಳೇ ಪಿದತ್ತಿ ನಿನ್ರು ಏತ್ತ
ಅಡಿಯವರ್ಕ್ಕು ಅರುಳಿ ಅರವಣೈ ತುಯಿನ್ರ
ಆಟಿಯಾನ್ ಅಮರ್ನ್ದು ಉರೈಕೋಯಿಲ್
ಕಡಿಯುಡೈಕಮಲಂ ಅಡಿಯಿಡೈಮಲರ
ಕರುಂಬೊಡುಪೆರುಂ ಶೆನ್ನೆಲ್ ಅಶೈಯ
ವಡಿವುಡೈ ಅನ್ನಂ ಪೆಡೈಯೊಡುಂಶೇರುಂ ವಯಲ್
ವೆಳ್ಳಿಯಂ ಗುಡಿಯದುವೇ ॥೯॥

(ಅಮರರ್) ಬ್ರಹ್ಮಾದಿದೇವತೆಗಳು (ಕುಡಿಕುಡಿಯಾಹ ಕೂಡಿ) ಕುಲಕುಲವಾಗಿ ಕೂಡಿಕೊಂಡು (ನಿನ್ರು) ಬಂದಿದ್ದು (ಕುಣಂಗಳೇಪಿದತ್ತಿ ನಿನ್ರು ಏತ್ತ) ಭಗವಂತನ ಶುಭಗುಣಗಳನ್ನು ಕೊಂಡಾಡಿ ಸ್ತುತಿಸಲು (ಅಡಿಯವರ್ಕ್ಕು ಅರುಳಿ) ಭಕ್ತರಿಗೆ ಅನುಗ್ರಹಶೀಲನಾಗಿ (ಅರವಣೈತುಯಿನ್ರ) ಶೇಷಶಾಯಿಯಾಗಿರುವ (ಆಟಿಯಾನ್ ಅಮರ್ನ್ದು ಉರೈಕೋಯಿಲ್) ಚಕ್ರಧಾರಿಯಾದ ಪರಮಾತ್ಮನು ನಿತ್ಯಸಾನ್ನಿಧ್ಯ ಮಾಡಿರುವ ದೇಶ ಯಾವುದು ಎಂದರೆ— (ಕಡಿಯುಡೈಕಮಲಂ) ಪರಿಮಳ ಪ್ರಚುರವಾದ ಕಮಲ ಪುಷ್ಪಗಳು (ಅಡಿಯಿಡೈ ಮಲರ) ಭತ್ತದ ತೆನೆಗಳ ಪಕ್ಕದಲ್ಲಿ ವಿಕಸಿಸಿರಲು (ಕರುಂಬೊಡುಪೆರುಂಶೆನ್ನೆಲ್ ಅಶೈಯ) ಕಬ್ಬುಗಳೂ ಕೆಂಭತ್ತವೂ ಸೇರಿಕೊಂಡಿರುವಂಥದೂ (ವಡಿವುಡೈ ಅನ್ನಂ) ಸುಂದರವಾದ ಹಂಸ ಪಕ್ಷಿಗಳು (ಪೆಡೆಯೊಡುಂ ಶೇರುಂ) ತಮ್ಮ ಸಹಚರಿಯೊಡನೆ ಸೇರಿ ಬಾಳುವಂಥದೂ ಆದ (ವಯಲ್) ಗದ್ದೆಗಳನ್ನುಳ್ಳ (ವೆಳ್ಳಿಯಂ ಗುಡಿಯದುವೇ) ತಿರುವೆಳ್ಳಿಯಂ ಗುಡಿ ಕ್ಷೇತ್ರವೇ.

·ದೇವತೆಗಳು ಗುಂಪುಗುಂಪಾಗಿ ಬಂದು ಭಗವಂತನ ಕಲ್ಯಾಣಗುಣಗಳನ್ನು ತಮಗೆ ತೋರಿದಂತೆ 'ಅತ್ಯಂತ ಭಕ್ತಿಯುಕ್ತಾನಾಂ ನೈವ ಶಾಸ್ತ್ರಂ ನ ಚ ಕ್ರಮಃ' ಎಂದಂತೆ, ಕೊಂಡಾಡಿ ಸ್ತುತಿಸಲು ಅವರಿಗೆ ಅನುಗ್ರಾಹಕನಾಗಿ 'ಭೋಗಿ ಭೋಗ ಶಯನೀಯಶಾಯಿ' ಯಾಗಿರುವ ಸರ್ವೇಶ್ವರನು ನಿತ್ಯವಾಸ ಮಾಡುವ ಶ್ರೀಕ್ಷೇತ್ರ ಈ ತಿರುವೆಳ್ಳಿಯಂಗುಡಿ. ಇಲ್ಲಿನ ಗದ್ದೆಗಳಲ್ಲಿ ಭತ್ತದ ತೆನೆಗಳಿಗೂ ಕಬ್ಬುಗಳಿಗೂ ನಡುವೆ ಸೌರಭ್ಯವನ್ನು ಸೂಸುವ ಸರೋಜಗಳು ಅರಳಿರುವು ವಂತೆ ಕಮಲಗಳ ಎರಡು ಕಡೆಯಲ್ಲಿಯೂ ಕಬ್ಬಿನ ಜಲ್ಲೆಗಳೂ ಭತ್ತದ ಪಯಿರುಗಳೂ ತೂನೆದಾಡುವುವಂತೆ. ಹಂಸಪಕ್ಷಿಗಳ ಜೋಡಿಗಳು ಆ ಕಮಲ ಗಳಲ್ಲಿ ಕೂಡಿ ಬಾಳುವುವಂತೆ. ಅಂಥ ಸುಂದರವಾದ ಕ್ಷೇತ್ರ ಅದು.

**ಪಣ್ಡುಮುನ್ ಏನಮಾಹಿ ಅನ್ರು ಒರುಕಾಲ್**
**ಪಾರ್ ಇಡನ್ದು ಎಯಿತ್ತಿನಿಲ್‌ಕೊಂಡು**
**ತೆಣ್ದಿರೈ ವರುಡ ಪಾರ್ಕ್ಕಡಲ್‌ತುಯಿನ್ದ**
**ತಿರುವೆಳ್ಳಿಯಂಗುಡಿಯಾನೈ**
**ವಂಡರೈಶೋಲೈಮಂಗೈಯರ್ ತಲೈವನ್**
**ಮಾನವೇಲ್ ಕಲಿಯಿನ್ ವಾಯೆತ್ ಒಲಿಹಳ್**
**ಕೊಂಡಿವೈ ಪಾಡುಂ ತವಮುಡೈಯಾರ್‌ಹಳ್**
**ಆಳ್ವರ್ ಇಕ್ಕುರೈಕಡಲುಲಹೇ ॥೧೦॥**

(ಪಂಡುಮುನ್ ಅನ್ರು) ಹಿಂದೆ ಅಂದೊಮ್ಮೆ (ಒರುಕಾಲ್) ಒಂದು ಕಾಲದಲ್ಲಿ (ಏನಂಆಹಿ) ವರಾಹರೂಪಿಯಾಗಿ ಅವತರಿಸಿ (ಪಾರ್ ಇಡನ್ದು) ಭೂಮಿಯನ್ನು ಬಿಡಿಸಿಕೊಂಡು (ಎಯಿತ್ತಿನಿಲ್‌ಕೊಂಡು) ದಂಷ್ಟ್ರಾಗ್ರದಲ್ಲಿ ಇಟ್ಟುಕೊಂಡು ಬಂದವನೂ (ತೆಣ್‌ತಿರೈವರುಡ) ತಿಳಿಯಾದ ಅಲೆಗಳು ತನ್ನ ಶ್ರೀಪಾದವನ್ನು ಸ್ಪರ್ಶಿಸುವಂತೆ (ಪಾಲ್‌ಕಡಲ್‌ತುಯಿನ್ರು) ಕ್ಷೀರಾಬ್ಧಿಯಲ್ಲಿ ಶಯನಿಸಿದವನೂ (ತಿರುವೆಳ್ಳಿಯಂ ಗುಡಿಯಾನೈ) ತಿರುವೆಳ್ಳಿಯಂ ಗುಡಿಯಲ್ಲಿ ಸನ್ನಿಹಿತನಾದ ವನೂ ಆದ ಸರ್ವೇಶ್ವರನನ್ನು ಕುರಿತು (ವಂಡರೈಶೋಲೈ ಮಂಗೈಯರ್ ತಲೈವನ್) ದುಂಬಿಗಳು ಮೊರೆಯುವಂತಹ ಉದ್ಯಾನವನಗಳನ್ನುಳ್ಳ ತಿರುಮಂಗೈನಾಡಿನವರಿಗೆ ನಿರ್ವಾಹಕರಾದ (ಮಾನವೇಲ್ ಕಲಿಯನ್‌ವಾಯ್ ಒಲಿಹಳ್ ಇವೈಕೊಂಡು) ತಿರುಮಂಗೈಯಾಳ್ವಾರ್ರವರ ಈ ಶ್ರೀಸೂಕ್ತಿಗಳನ್ನು

ಪಡೆದುಕೊಂಡು (ಪಾಡುಂತವಮ ಉಡ್ಯೆಯಾರ್‌ಹಳ್) ಹಾಡುವುದನ್ನೇ.ತಪಸ್ಸನ್ನಾಗಿ ಮಾಡಿಕೊಳ್ಳುವ ಭಾಗ್ಯಶಾಲಿಗಳು (ಕುರೈಕಡಲ್ ಇವ್ವುಲಹು ಆಳ್ವರ್) ಘೋಷಿಸುವ ಸಾಗರದಿಂದ ಪರಿವೃತವಾದ ಈ ಲೋಕವನ್ನೆಲ್ಲಾ ಆಳುವವರಾಗುತ್ತಾರೆ.

. ತಿರುವೆಳ್ಳಿಯುಂ ಗುಡಿಯಲ್ಲಿರುವ ಸ್ವಾಮಿ ಯಾರೆಂದರೆ ಅಂದು ವರಾಹಕಲ್ಪದ ಆದಿಯಲ್ಲಿ ಅಂಡಭಿತ್ತಿಯೊಡನೆ ಸೇರಿಹೋಗಿದ್ದ ಭೂಮಿಯನ್ನು ಮೇಲೆತ್ತಿ ತಂದವನೇ. ಆ ಶ್ರಮವು ಪರಿಹಾರವಾಗುವಂತೆ ಕ್ಷೀರಾಬ್ಧಿಯಲ್ಲಿ ಅದರ ಅಲೆಗಳು ಮೃದುವಾಗಿ ಪಾದಸೇವೆ ಮಾಡುವಂತೆ ಶಯನಿಸಿದನವನು. ಶ್ರೀಪೆರಿಯಾಳ್ವಾರರವರು ಹಿಡಿದ ವೇಲಾಯುಧ ವೈಷ್ಣವಾಭಿಮಾನವನ್ನು ಬೆಳಿಸುವುದಾಗಿದೆಯಂತೆ. ಈ ದಶಕವನ್ನು ಆದರದೊಡನೆ ಅಭ್ಯಾಸಮಾಡಿ ಹಾಡುವವರು ಸಮುದ್ರದಿಂದ ಸುತ್ತುವರಿಯಲ್ಪಟ್ಟ ರಾಜ್ಯಶ್ರೀಯನ್ನು ಪಡೆಯುವರು. ಈ ಐಶ್ವರ್ಯವನ್ನು ಭಾಗವತ ಶೇಷವಾದುದನ್ನಾಗಿ ಮಾಡುವವರಾದ ಕಾರಣ ಅವರು ಇದನ್ನು ಒಂದು ಪುರುಷಾರ್ಥವೆಂದು ಭಾವಿಸುವುದಿಲ್ಲ.

---

ಐದನೆಯ ಪತ್ತು—ಒಂದನೆಯ ತಿರುಮೊೞಿ

## 'ಅರಿವದರಿಯಾನ್'

### ಪ್ರವೇಶ

ಒಂದು ಕಾಲದಲ್ಲಿ ಒಂದು ದಿವ್ಯಕ್ಷೇತ್ರದಲ್ಲಿರುವ ಭಗವಂತನನ್ನು ಅನುಭವಿಸಲು ಅಪೇಕ್ಷಿಸಿದಾಗ ಅದು ಲಭ್ಯವಾಗದಿದ್ದರೆ 'ಅದು ಲಭಿಸಲಿಲ್ಲ' ಎಂದು ಕೈಬಿಡುವ ಸ್ವಭಾವದವರಲ್ಲ ಆಳ್ವಾರರು. ಆ ವಿಷಯದ ಸ್ವಭಾವವನ್ನು ನೋಡಿದರೆ ಆಶೆ ಮಾಡದೆ ಇರುವುದಕ್ಕೆ ಆಗದೆ ಇದೆ. ಭಗವಂತನು

ಅನೇಕ ದಿವ್ಯಕ್ಷೇತ್ರಗಳಲ್ಲಿ ಒಲಿದು ನೆಲಸಿರುವುದು ಒಂದಲ್ಲ ಒಂದು ಜಾಗದಲ್ಲಿ ಒಬ್ಬರಲ್ಲ ಒಬ್ಬರಿಗೆ ದರ್ಶನ ಕೊಡುವುದಕ್ಕೆ ತಾನೇ ? ನಮಗೆ 'ಈ ಜಾಗ ದಲ್ಲಿಯೇ ಮೈದೋರುವನು' ಎಂಬುದು ತಿಳಿದುಬರುವುದಿಲ್ಲವಷ್ಟೇ ? ಆದುದರಿಂದ ತಿರುಪುಳ್ಳಂ ಬೂತಂ ಗುಡಿಯಲ್ಲಿ ಸನ್ನಿಹಿತನಾಗಿರುವ ಅವನು ಆಶ್ರಿತರ ಕೆಲಸವನ್ನು ನಡೆಸಿಕೊಡುತ್ತಾನೆ, ನಿರತಿಶಯಭೋಗ್ಯನವನು, ಶ್ರೀದೇವಿಯೊಡನೆ ಸಂದರ್ಶನ ನೀಡುತ್ತಿದ್ದಾನೆ, ಅವನನ್ನು ಅರಿಯುವಂತಹ ಸುಕೃತವು ಉಂಟಾಗುವುದಕ್ಕೂ ಅವನೇ ಪ್ರವರ್ತಕನಾಗಿದ್ದಾನೆ—ಎಂದು ಅವನ ಗುಣಗಳನ್ನು ಕೊಂಡಾಡಿದ್ದಾರೆ.

> ಅರಿವದರಿಯಾನ್ ಅನೈತ್ತು ಉಲಹುಂಉಡೈಯಾನ್
> ಎನ್ನೈ ಆಳುಡೈಯಾನ್
> ಕುರಿಯಮಾಣಿ ಉರುವಾಯ ಕೂತ್ತನ್
> ಮನ್ನಿ ಅಮರುಂ ಇಡಂ
> ನೆರಿಯಮಲರ್‌ಮೇಲ್ ಶುರುಂಬು ಆರ್ಕ್ಕ
> ಎಳಿಲ್‌ಆರ್ ಮಂಜೈನಡಮಾಡ
> ಪೊರಿಕೊಳ್ ಶಿರೈವಂಡು ಇಶೈಪಾಡುಂ
> ಪುಳ್ಳಂಪೂತಂಗುಡಿ ತಾನೇ ॥೧॥

(ಅರಿವದು ಅರಿಯಾನ್) ಯಾರಿಂದಲೂ ತಮ್ಮ ಯತ್ನದಿಂದಲೇ ತಿಳಿಯಲು ದುಶ್ಶಕನಾದವನೂ, (ಅನೈತ್ತುಉಲಹುಂ ಉಡೈಯಾನ್) ಎಲ್ಲ ಲೋಕಗಳಿಗೂ ಒಡೆಯನಾದವನೂ (ಎನ್ನೈ ಆಳ್‌ಉಡೈಯಾನ್) ನನ್ನನ್ನು ದಾಸನನ್ನಾಗಿ ಮಾಡಿಕೊಂಡವನೂ, (ಕುರಿಯಮಾಣಿ ಉರುವಾಯ) ವಾಮನ ಬ್ರಹ್ಮಚಾರಿಯ ವೇಷವನ್ನು ಧರಿಸಿದವನೂ (ಕೂತ್ತನ್) ಆ ಸಮಯದಲ್ಲಿ ವಿಲಕ್ಷಣವಾದ ನಡೆ ಯಿಂದ ಬಂದವನೂ ಆದ ಸರ್ವೇಶ್ವರನು (ಮನ್ನಿ ಅಮರುಂ ಇಡಂ) ಎಡೆ ಬಿಡದೆ ನಿತ್ಯವಾಸಮಾಡುತ್ತಿರುವ ಸ್ಥಳ ಯಾವುದು ಎಂದರೆ—(ಶುರುಂಬು) ಶುರುಂಬು ಎಂಬ ಜಾತಿಗೆ ಸೇರಿದ ದುಂಬಿಗಳು (ನರಿಯ ಮಲರ್ ಮೇಲ್) ಪರಿಮಳದಿಂದ ಕೂಡಿದ ಹೂಗಳ ಮೇಲೆ ಇದ್ದುಕೊಂಡು (ಆರ್ಕ್ಕ) ಝೇಂಕಾರ ವನ್ನು ಮಾಡುವಂತಹುದೂ,(ಎಳಿಲ್‌ಆರ್‌ಮಂಜೈ) ಸೌಂದರ್ಯ ಹೊಂದಿರುವ ನವಿಲುಗಳು (ನಡಂ ಆಡ) ನರ್ತನ ಮಾಡುವಂಥದೂ, (ಪೊರಿ ಶಿರೈಕೊಳ್)

ಚುಂಕ್ಕಿಯುನ್ನೂ ಗರಿಗಳನ್ನೂ ಹೊಂದಿರುವ (ವಂಡು) ದುಂಬಿಗಳು (ಇಶೈ ಪಾಡುಂ) ಮಧುರವಾಗಿ ಗಾನವಾಡುತ್ತಿರುವಂಥದೂ ಆದ (ಪುಳ್ಳಂ ಪೂತಂ ಗುಡಿ ತಾನೇ) ತಿರುಪ್ಪುಳ್ಳಂ ಪೂತಂಗುಡಿ ಎಂಬುವ ದಿವ್ಯಕ್ಷೇತ್ರವೇ ಆಗಿದೆ.

ಸ್ವಪ್ರಯತ್ನದಿಂದ ಅವನನ್ನು ತಿಳಿಯಲು ಯತ್ನ ಮಾಡುವವರಿಗೆ ತಿಳಿಯುವುದಕ್ಕಾಗದ ಸ್ವಭಾವದವನು. ಆದರೂ ಸರ್ವಲೋಕೇಶ್ವರನಾಗಿ ಸರ್ವರಿಗೂ ಸಂಪ್ರತಿಪನ್ನನಾಗಿದ್ದಾನೆ ಅವನು. ನನ್ನ ಸೇವೆಯನ್ನು ಕೊಂಡವ ನವನು–'ಅಸ್ಮತ್‌ಸ್ವಾಮಿನ್'. ಸರ್ವಾಧಿಕನಾದವನು. ವಾಮನ ವೇಷವನ್ನು ಪರಿಗ್ರಹಿಸಿ ಮಹಾಬಲಿಯ ಯಜ್ಞಶಾಲೆಗೆ ಮನೋಹರವಾದ ನಡೆಗೆಯಿಂದ ಹೋದವನವನು. ಅಂಥವನು ನಿತ್ಯವಾಸಮಾಡಿ 'ಈ ಜಾಗವನ್ನು ಬಿಡುವು ದಿಲ್ಲ'—ಎಂದು ಇರುತ್ತಿರುವ ದಿವ್ಯದೇಶ ಇದು.

ಕಳ್ಳಕ್ಕುರಳಾಯ್ ಮಾವಲಿಯೈ ವಂಚಿತ್ತು
ಉಲಹಂ ಕೈಪ್ಪಡುತ್ತು
ಪೊಳ್ಳೈಕರತ್ತ ಪೋತಕತ್ತಿನ್ ತುನ್ಬಂ ತವಿರ್ತ್ತ ಪುನಿದನಿಡಂ
ಪಳ್ಳಚ್ಚೆರುವಿಲ್ ಕಯಲ್ ಉಹಳ
ಪಟನಕ್ಕಟನಿಯೆದನುಳ್‌ಪೋಯ್
ಪುಳ್ಳು ಪಿಳ್ಳೈಕ್ಕು ಇರೈತೇಡುಂ ಪುಳ್ಳಂಪೂದಂಗುಡಿತಾನೇ
॥ ೨ ॥

(ಕಳ್ಳಂಕುರಳ್‌ಆಯ್) ಕಪಟವುಳ್ಳ ವಾಮನರೂಪಿಯಾಗಿ (ಮಾವಲಿಯೈ ವಂಚಿತ್ತು) ಮಹಾಬಲಿಯನ್ನು ವಂಚಿಸಿ (ಉಲಹಂ ಕೈಪ್ಪಡುತ್ತು) ಸಕಲ ಲೋಕಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡವನೂ (ಪೊಳ್ಳೈಕರತ್ತ) ದೊಡ್ಡರಂಧ್ರವನ್ನುಳ್ಳ ಸೊಂಡಿಲನ್ನುಳ್ಳ (ಪೋತಕತ್ತಿನ್ ತುನ್ಬಂ ತವಿರ್ತ್ತ) ಗಜೇಂದ್ರನ ದುಃಖವನ್ನು ಹೋಗಲಾಡಿಸಿ ಅನುಗ್ರಹಿಸಿದ (ಪುನಿದನ್) ಪರಮಪವಿತ್ರನಾದ ಪರಮಾತ್ಮನು ಇರುತ್ತಿರುವ (ಇಡಂ) ಸ್ಥಳವಾದರೋ ಪಳ್ಳಂಶೆರುವಿಲ್) ತಗ್ಗಾದ ಪ್ರದೇಶಗಳಲ್ಲಿರುವ ಗದ್ದೆಗಳಲ್ಲಿ (ಕಯಲ್‌ಉಹಳ) ಮೀನುಗಳು ನಲಿದು ಆಡುತ್ತಿರಲು (ಪುಳ್ಳು) ಹಕ್ಕಿಗಳು (ಪಟನಂ ಕಟನಿ ಅದನುಳ್ ಪೋಯ್) ನೀರು ನಿಂತಿರುವ ಗದ್ದೆಗಳೊಳಗೆ ಹೋಗಿ (ಪಿಳ್ಳೈಕ್ಕು) ತಮ್ಮತಮ್ಮ ಮರಿಗಳಿಗೆ (ಇರೈತೇಡುಂ) ತಿನ್ನುವುದಕ್ಕಾಗುವಂತಹ ಚಿಕ್ಕಚಿಕ್ಕ

ಮೀನುಗಳನ್ನು ಹುಡುಕುವಂತಹ (ಪುಳ್ಳಂ ಪೂದಂಗುಡಿ ತಾನೇ) ಪುಳ್ಳಂಪೂದಂ ಗುಡಿ ಎಂಬುವ ದಿವ್ಯಕ್ಷೇತ್ರವೇ.

ದೇವತೆಗಳಿಗಾಗಿ ತನ್ನನ್ನು ಚಿಕ್ಕವನನ್ನಾಗಿ ಮಾಡಿಕೊಂಡವನನ್ನು ಬಯಸುವವರಾದ ಆಳ್ವಾರ್ ಈ ಪಾಶುರದಲ್ಲಿಯೂ ಅದೇ ವೃತ್ತಾಂತವನ್ನು ಹೇಳಿ, ಅವನು ಒಂದು ತಿರ್ಯಕ್ಕಿಗೆ ಒದಗಿದುದನ್ನು ಅನುಸಂಧಾನ ಮಾಡಿದ್ದಾರೆ. ತಮ್ಮ ಆಶೆಯೂ ಸಫಲವಾಗುವುದೆಂದು ಆಶಿಸುತ್ತಾರೆ. 'ಅವನು ಸರ್ವೇಶ್ವರ. ಅವನ ಮಾತಿಗೆ ಒಪ್ಪಬೇಡ. ದೇವಕಾರ್ಯ ಮಾಡಿಕೊಡಲು ಬಂದಿದ್ದಾನೆ'—ಎಂದು ಶುಕ್ರಾಚಾರ್ಯರು ಹೇಳಿದಮಾತು ಬಲಿಗೆ ಹಿಡಿಸದೆ ಇರುವಂತಹ ವಾಮನವೇಷ ಧರಿಸಿದನವನು. ತನ್ನದಲ್ಲದುದನ್ನು 'ತನ್ನದು' ಎಂದಿದ್ದವನಿಂದ ಸ್ವಾಮಿ ತೆಗೆದುಕೊಂಡ. ಗಜೇಂದ್ರನ ದುಃಖವನ್ನು ಹೋಗಲಾಡಿಸಿದ ಸ್ವಾಮಿ ಇರುವ ಕ್ಷೇತ್ರ ಇದು. 'ಮೀನುಗಳು ಅಲ್ಲೆಲ್ಲಾ ಚಿಮ್ಮಿ ಆಡುತ್ತಿರುವಾಗ ಹಕ್ಕಿಗಳು ಏಕೆ ಮೀನನ್ನು ಹುಡುಕುತ್ತಿದ್ದವು ?' ಎಂದು ಕೇಳಲು ಭಟ್ಟರವರು ಹೇಳಿದರಂತೆ—'ಪಿಳ್ಳೈಕ್ಕು ಎಂದಿದೆ ಅಲ್ಲವೇ ? ಮರಿಗಳಿಗಾಗಿ ತಕ್ಕ ಚಿಕ್ಕಮೀನನ್ನು ಹುಡುಕುತ್ತವೆಯಷ್ಟೇ ? ಅಲ್ಲಿನ ಮೀನುಗಳು ಕಂಭದಂತೆ ಬೆಳೆದಿರುತ್ತವೆ. ಅವುಗಳಲ್ಲಿ ತಮ್ಮ ಮರಿಗಳಿಗೆ ತಕ್ಕುವಾದ ಪುಟ್ಟ ಪುಟ್ಟ ಮೀನುಗಳನ್ನು ಅವು ಹುಡುಕಬೇಕಾಗಿದೆ ಎಂದು ತೋರುತ್ತದೆ'—ಎಂದು.

> ಮೇವಾಅರಕ್ಕರ್ ತೆನ್ನಿಲಂಗೈ ವೇನ್ದನ್ ವೀಯ ಶರಂ ತುರಂದು
> ಮಾ ವಾಯ್ ಪಿಳಂದು ಮಲ್‌ಅಡರ್‌ತ್ತು
> ಮರುದಂಶಾಯ್‌ತ್ತ ಮಾಲದು ಇಡಂ
> ಕಾವಾರ್ ತೆಂಗಿನ್‌ಪಟಮ್ ಮೀಟ ಕಯಲ್ ಹಳ್ ಪಾಯ
> ಕುರುಕು ಇರಿಯುಮ್
> ಪೂವಾರ್‌ಕಟನಿ ಎಟಿಲ್‌ಆಡುಂ ಪುಳ್ಳಂಪೂತಂಗುಡಿ ತಾನೇ
> ॥೩॥

(ಮೇವಾ) ಭಗವಂತನಲ್ಲಿ ಭಕ್ತಿಲೇಶವೂ ಇಲ್ಲದ (ಅರಕ್ಕರ್) ರಾಕ್ಷಸರು ತುಂಬಿದ್ದ (ತೆನ್ನಿಲಂಗೈವೇಂದನ್) ದಕ್ಷಿಣದ ಲಂಕೆಗೆ ಅರಸನಾದ ರಾವಣನು (ವೀಯ ಶರಂತುರಂದು) ಮುಗಿದು ಹೋಗುವಂತೆ ಬಾಣಗಳನ್ನು ಪ್ರಯೋಗಿಸಿದವನೂ, (ಮಾ) ಕುದುರೆಯ ರೂಪದಲ್ಲಿ ಬಂದ ಕೇಶಿ ಎಂಬ ಅಸುರನ

(ವಾಯ್ ಪಿಳಂದು) ಬಾಯಿಯನ್ನು ಸೀಳಿದವನೂ (ಮಲ್ ಅಡರ್ತ್ತು) ಮಲ್ಲರುಗಳನ್ನು ನಿಗ್ರಹಿಸಿದವನೂ, (ಮರುದಂಶಾಯ್ತ್ತ)ಯ ಮುಳಾರ್ಜುನ ವೃಕ್ಷಗಳನ್ನು ಮುರಿದು ಉರುಳಿಸಿದವನೂ ಆದ (ಮಾಲದು ಇಡಂ) ನಮ್ಮ ಸರ್ವೇಶ್ವರನು ಇರುತ್ತಿರುವ ದೇಶವು ಯಾವುದೆಂದರೆ (ಕಾ ಆರ್) ತೋಟಗಳಲ್ಲಿ ತುಂಬಿರುವ (ತೆಂಗಿನ್ ಪಟಮ್) ತೆಂಗಿನ ಮರಗಳಿಂದ ತೆಂಗಿನಕಾಯಿಗಳು (ವೀಟ) ಕೆಳಗೆ ಬೀಳಲು ಅದರಿಂದ (ಕಯಲ್‌ಹಳ್ ಪಾಯ) ಮೀನುಗಳು ಹೆದರಿ ಬೇರೆಡೆಗೆ ಓಡಿಹೋಗುವಂತಹುದೂ, (ಕುರುಕು ಇರಿಯುಮ್) ನಾರೈ ಪಕ್ಷಿಗಳು ಚದರಿ ಹೋಗುವಂತಹುದೂ, (ಪೂಆರ್‌ಕಟನಿ) ತಾವರೆ ಮೊದಲಾದ ಹೂಗಳು ತುಂಬಿರುವ ಗದ್ದೆಗಳಿಂದ (ಎಟಿಲ್‌ಆರುಂ) ಅಂದ ಹೆಚ್ಚಾಗಿರುವ (ಪುಳ್ಳಂ ಪೂದಂಗುಡಿತಾನೇ) ಪುಳ್ಳಂಪೂದಂಗುಡಿ ಎಂಬ ದಿವ್ಯಕ್ಷೇತ್ರವೇ ಆಗಿದೆ.

ಲೋಕಮಾತೆಯಾದ ಸೀತಾದೇವಿಗೆ ವಿರೋಧವೆಸಗಿದ ದಶಕಂಠನನ್ನು ನಿರಸನ ಮಾಡಿದಸ್ವಾಮಿ. ಯಾವೊಂದು ಉಪಾಧಿಯಿಂದಲ್ಲದೆ ದ್ವೇಷಿಸುವುದೇ ಸ್ವಭಾವವಾಗಿದ್ದ ರಾಕ್ಷಸರಿಗೆ ನಿರ್ವಾಹಕನಾಗಿದ್ದ ಆ ರಾವಣ. ಇನ್ನೂ ಪ್ರಾಯಕ್ಕೆ ಬರುವ ಮೊದಲೇ ತಿರ್ಯಕ್ಕಾಗಿಯೂ ಸ್ಥಾವರವಾಗಿಯೂ ಇದ್ದ ವಿರೋಧಿಗಳನ್ನು ಕೈಯಿಂದಲೂ ಕಾಲಿಂದಲೂ ನಿರಸನ ಮಾಡಿದ ಆಶ್ಚರ್ಯ ಚೇಷ್ಟಿತನವನು. ಆಶ್ರಿತರಲ್ಲಿ ವ್ಯಾಮೋಹವನ್ನುಳ್ಳ ಆ ಸ್ವಾಮಿ ಇರುತ್ತಿರುವ ದಿವ್ಯದೇಶ ಇದು. ಸುಂದರವಾದ ಗದ್ದೆಗಳಿಂದ ಕೂಡಿ ಅತ್ಯಂತ ದರ್ಶನೀಯ ವಾದ ಕ್ಷೇತ್ರ ಅದು.

**ವೆಸ್ರಾಲ್ ವಾರಿ ಪಟುದಾಕ್ಕಿ ವಿರಲ್‌ವಾಳ್**
**ಅರಕ್ಕರ್ ತಲೈವನ್ ತನ್**
**ವಸ್ರಾರ್ ತಿರಳ್‌ತೋಳ್ ಐನ್ನಾನ್ಗುಮ್ ತುಣಿತ್ತ**
**ವಲ್‌ವಿಲ್ ಇರಾಮನಿಡಂ**
**ಕಸ್ರುಆರ್ ಪುರಿಶೈಶೆಯ್ ಕುನ್ರಂ ಕವಿನ್‌ಆರ್ ಕೂಡಮ್**
**ಮಾಳಿಕೈಹಳ್**
**ಪಾಸ್ರುಆರ್ ಮಾಡಂ ಎಟಿಲ್‌ಆರುಂ ಪುಳ್ಳಂಪೂದಂ**
**ಗುಡಿತಾನೇ ॥೪॥**

(ವೆರ್ಪಾಲ್) ಗೋವರ್ಧನ ಪರ್ವತದಿಂದ (ಮಾರಿ) ಭಯಂಕರವಾದ ಮಳೆಯನ್ನು (ಪಟುದು ಆಕ್ಕಿ) ವ್ಯರ್ಥವನ್ನಾಗಿ ಮಾಡಿದವನೂ (ವಿರಲ್) ಬಲಿಷ್ಠನಾದ (ವಾಳ್ ಅರಕ್ಕರ್ ತಲೈವನ್‌ತನ್) ರಾವಣಾಸುರನ (ವರ್ಪುಆರ್) ಬಲವನ್ನು ಹೊಂದಿದ (ತಿರಳ್) ಪುಷ್ಟವಾಗಿ ಬೆಳೆದಿದ್ದ (ಐನಾನ್ಗು ತೋಳುಂ) ಇಪ್ಪತ್ತು ತೋಳುಗಳನ್ನೂ (ತುಣಿತ್ತ) ಕತ್ತರಿಸಿ ಹಾಕಿದ (ವಲ್‌ವಿಲ್) ಬಲಿಷ್ಠವಾದ ಬಿಲ್ಲನ್ನುಳ್ಳವನಾದ (ಇರಾಮನ್ ಇಡಂ) ಶ್ರೀರಾಮನು ಇರುತ್ತಿರುವ ಜಾಗವು ಯಾವುದೆಂದರೆ— (ಕರ್ಪುಆರ್) ಬಹಳ ಕುಶಲಕರ್ಮಿಗಳನ್ನುಳ್ಳ (ಪುರಿಶೈಶೆಯ್) ಉನ್ನತವಾದ ಕೋಟೆಗಳಿಂದಾದ (ಕುನ್ರಮ್) ಬೆಟ್ಟಗಳಿಂದಲೂ (ಕವಿನ್‌ಆರ್‌ಕೂಡಂ) ಸುಂದರವಾದ ಗೃಹಗಳಿಂದಲೂ, (ಮಾಳಿಕೈಹಳ್) ಮಾಳಿಗೆಗಳಿಂದಲೂ (ಪಾರ್ಪು ಆರ್‌ಮಾಡಂ)ಸುಂದರವಾದ ಮಂಟಪಗಳಿಂದಲೂ (ಎಟಿಲ್‌ಆರುಮ್) ಶೋಭೆಯು ಹೆಚ್ಚಿರುವಂತಹ (ಪುಳ್ಳಂಪೂದಂಗುಡಿತಾನೇ) ಪುಳ್ಳಂಪೂದಂಗುಡಿ ಎಂಬ ದಿವ್ಯಕ್ಷೇತ್ರವೇ ಆಗಿದೆ.

ಇಂದ್ರನು ಅಭಿಸಂಧಿ ಪೂರ್ವಕವಾಗಿ ವರ್ಷಿಸಿದ ವರ್ಷವನ್ನು ವ್ಯರ್ಥಗೊಳಿಸಿದನು ಶ್ರೀಕೃಷ್ಣ. ರಾವಣಾವತಾರವಾಡಿ ಮಹಾಖಡ್ಗಗದಾದ್ಯಾಯುಧಗಳನ್ನುಳ್ಳ ರಾಕ್ಷಸರಿಗೆ ನಿರ್ವಾಹಕನಾದ ರಾವಣನ ಇಪ್ಪತ್ತು ಭುಜಗಳನ್ನೂ ಛೇದಿಸಿದನು. ಒಂದೇ ಬಾಣದಿಂದ ಅವನನ್ನು ವಧಿಸಿಬಿಡದೆ 'ಅವನು ಅನುಕೂಲನಾಗುವನೋ ಏನೋ ನೋಡೋಣ', ಎಂಬ ಆಶೆಯಿಂದ ಅವನ ಕೈಯ್ಯಿನ ಬಿಲ್ಲನ್ನು ಬೀಳಿಸಿ ಅವನನ್ನು ಜೀವದೊಡನೆ ಕಳುಹಿಸಿಕೊಟ್ಟ ಮಹೋದಾರ ಅವನು. ಈ ಎರಡು ಅವತಾರಗಳನ್ನೂ ಇಲ್ಲಿ ಅನುಸಂಧಾನ ಮಾಡಿದ್ದಾರೆ. ವಿಶಾಲವೂ ಉನ್ನತವೂ ಆದ ಪ್ರಾಕಾರಗಳಿಂದಲೂ ಮಾಳಿಗೆಗಳಿಂದಲೂ ಮಂಟಪಗಳಿಂದಲೂ ಕೂಡಿ ತೇಜಿಷ್ಠವಾಗಿರುವ ಪುಳ್ಳಂಪೂತಂಗುಡಿಕ್ಷೇತ್ರದಲ್ಲಿ ಆ ಸರ್ವೇಶ್ವರ ನಿತ್ಯವಾಸ ಮಾಡಿದ್ದಾನೆ.

**ನ್ಯೆಯೊಾರ್ ತಡಂಗಣ್ ಕರುಂ ಕೂಂದಲ್ ಆಯರ್‌ಚ್ಚಿ**
**ಮರ್ಕ್ಕೆಯ ವೈತ್ತ ತಯಿರ್**
**ನೆಯ್ ಆರ್‌ಪಾಲೋಡು ಅಮುದು ಶೆಯ್‌ದ**
**ನೇಮಿ ಅಮ್‌ಕೈ ಮಾಯನಿಡಂ**

ಶೆಯ್ ಆರ್ ಆರಲ್ ಇರೈಕರುದಿ ಶೆಂಗಾಲ್‌ನಾರೈ
ಶೆನ್ರಣ್ಯೆಯುಂ
ಪೊಯ್ಯಾ ನಾವಿನ್ ಮರೈಯಾಳರ್ ಪುಳ್ಳಂಬೂದಂಗುಡಿತಾನೇ
॥೫॥

(ಮೈಯಾರ್‌ತಡಂಕಣ್) ಕಾಡಿಗೆಯನ್ನು ಹಚ್ಚಿಕೊಂಡಿರುವ ವಿಶಾಲವಾದ ಕಣ್ಣುಗಳುಳ್ಳವಳೂ (ಕರುಂಕೂಂದಲ್) ಕಪ್ಪಾದ ತಲೆಗೂದಲುಳ್ಳವಳೂ ಆದ (ಆಯ್‌ಚ್ಚಿ) ಯಶೋದಾದೇವಿಯು (ಮರೈಯವೈತ್ತ) ಕಣ್ಣಿಗೆ ಕಾಣದಂತೆ ಮರೆಸಿಇಟ್ಟಿದ್ದ (ತಯಿರ್, ನೆಯ್, ಆರ್‌ಪಾಲೋಡು) ಮೊಸರು, ತುಪ್ಪ, ಕೊಡದ ತುಂಬ ಇದ್ದ ಹಾಲು ಇವುಗಳನ್ನು (ಅಮುದುಶೆಯ್‌ದ) ಕದ್ದು ಉಂಡ (ನೇಮಿ ಅವನ್‌ಕೈ ವಣಾಯನ್ ಇಡಂ) ಸುಂದರ್ಶನವನ್ನು ಸುಂದರವಾದ ಕೈಯಲ್ಲಿ ಹೊಂದಿರುವ ಪಣಾಯನ್ ಇರುತ್ತಿರುವ ದೇಶವಾವುದು ಎಂದರೆ (ಶೆಂಕಾಲ್ ನಾರೈ) ಕೆಂಪಾದ ಕಾಲುಗಳನ್ನುಳ್ಳ ನಾರೈಪಕ್ಷಿಗಳು (ಶೆಯ್) ಗದ್ದೆಗಳಲ್ಲಿ (ಆರ್ ಆರಲ್) ಬಹಳವಾಗಿರುವ ಆರಲ್ ಎಂಬ ಮೀನುಗಳನ್ನು (ಇರೈಕರುದಿ) ಆಹಾರಕ್ಕಾಗಿ ಹೊಂದಲು ಯೋಚಿಸಿ (ಶೆನ್ರು ಅಣೈಯುಂ) ಅಲ್ಲಿಗೆ ಬಂದು ಸೇರುವಂತಹುದೂ (ಪೊಯ್ಯಾನಾವಿಲ್) ಸುಳ್ಳನ್ನು ಹೇಳಿ ಅರಿಯದ ನಾಲಗೆಯಿಂದ (ಮರೈಆಳರ್) ವೇದಗಳನ್ನು ಗ್ರಹಿಸುವವರಾದ ಬ್ರಾಹ್ಮಣರು ಬಾಳುವಂತಹದೂ ಆದ (ಪುಳ್ಳಂಪೂದಂಗುಡಿ ತಾನೇ) ಪುಳ್ಳಂಪೂದಂಗುಡಿ ಕ್ಷೇತ್ರವೇ ಆಗಿದೆ.

'ಆಶ್ರಿತರ ಕರಸ್ಪರ್ಶವುಳ್ಳ ಅನ್ನವನ್ನು ದೇವತಾಂತರಕ್ಕೆ ಇಡಕೂಡದು' ಎಂದು ತಾನೇ 'ಗೋವರ್ಧನೋಽಸ್ಮಿ' ಎಂದು ಅದನ್ನು ಅನುಭವಿಸಿದ ಕೃಷ್ಣಾವತಾರದಲ್ಲಿ. 'ಅವನಿಗೆ ಆಶ್ರಿತರ ಕರಸ್ಪರ್ಶವಿರುವ ದ್ರವ್ಯದಲ್ಲಿ ಇಷ್ಟು ಆಶೆಯೆ ?'–ಎಂದು ಕೇಳಿದರೆ 'ಯಶೋದೆಯು ಮರೆವಾಡಿ ಇಟ್ಟುದೆಲ್ಲವನ್ನೂ ಅವನು ಭುಜಿಸಿದುದನ್ನು ನಾವು ಕಾಣುವುದಿಲ್ಲವೇ ?'—ಎಂದು ಅದರಲ್ಲಿ ಪರವಶರಾಗಿದ್ದಾರೆ. ಯಶೋದೆಗೆ ಮಗುವಿನ ಮೇಲೆ ಬಹಳ ವಾತ್ಸಲ್ಯ. 'ಮಗು ಯಾವಾಗಲೂ ಖಿನ್ನನಾಗದೇ ಇರಲಿ' ಎಂದು ಅವನಿಗಾಗಿ ಹಾಲು ಮೊಸರುಗಳನ್ನು ಬಚ್ಚಿಡುತ್ತಾಳೆ ಅವಳು. ಅವನು ಸಂತೋಷಿಸಲಿ ಎಂದು ಅಂಜನವನ್ನು ಕಣ್ಣಿಗೆ ಹಾಕಿಕೊಂಡು ತಲೆಗೂದಲನ್ನು ಮುಂಡಿಯುತ್ತಾಳೆ

ಅವಳು. ಅವನಿಗೆ ತಿಳಿಯದೆ ಇರುವ ಜಾಗವನ್ನು ಹುಡುಕಿ ಇಡಬೇಕಾಗುವುದು, ಅವಳಿಂದ ಹಾಗೆ ಮರೆಸಿ ಇಡುವುದಕ್ಕಾಗಲಿಲ್ಲ ಎಂಬ ಭಾವ. ಸುದರ್ಶನ ಹಸ್ತನಾದ ಶ್ರೀಮನ್ನಾರಾಯಣನಿಂದ ಮರೆಮಾಡಿಡುವುದಕ್ಕಾಗುವುದೋ ? ಇಂಥ ಸ್ವಾಮಿ ನೆಲಸಿರುವ ದಿವ್ಯಕ್ಷೇತ್ರ ಇದು.

ಮಿನ್ನಿನ್ ಅನ್ನನುಣ್ ಮರುಂಗುಲ್ ವೇಯೇಯ
ತಡಂದೋಳ್ ಮೆಲ್ಲಿಯಕ್ಕಾ
ಮುನ್ನುಶಿನತ್ತ ಮಟವಿಡೈಹಳ್ ಏಟು ಅನ್ರು ಇಡರ್ತ್ತ
ಮಾಲದು ಇಡಂ
ಮನ್ನು ಮುದುನೀರ್ ಅರವಿಂದ ಮಲರ್ಮೇಲ್
ವರಿವಂಡು ಇಶೈಪಾಡ
ಪುನ್ನೈ ಪೊನ್ನೇಯ್‌ ತಾದುಉದಿಕ್ಕುಂ
ಪುಳ್ಳಂಪೂದಂ ಗುಡಿತಾನೇ ॥೬॥

(ಮಿನ್ನಿನ್ ಅನ್ನ) ಮಿಂಚಿನ ಹಾಗೆ (ನುಣ್ ಮರುಂಗುಲ್) ಸೂಕ್ಷ್ಮವಾದ ಸೊಂಟವನ್ನುಳ್ಳವಳೂ, (ವೇಯ್ ಏಯುತಡತೋಳ್) ಬಿದಿರಿನ ಹಾಗೆ ಚೆಲುವಾದ ತೋಳುಗಳನ್ನುಳ್ಳವಳೂ ಆದ (ಮೆಲ್ಲಿಯಕ್ಕಾ) ಯುವತಿಯಾದ ನಪ್ಪಿನ್ನೈಪಿರಾಟ್ಟಿಗಾಗಿ (ಅನ್ರು) ಅಂದೊಂದು ಕಾಲದಲ್ಲಿ (ಮುನ್ನುಶಿನತ್ತ) ಕಡಿಮೆಯಾಗದ ಕೋಪವನ್ನುಳ್ಳ (ಏಟ್ ಮಟವಿಡೈಹಳ್) ಏಳು ಪ್ರಾಯದ ವೃಷಭಗಳನ್ನು (ಅಡರ್ತ್ತ) ಜಯಿಸಿ ಅಡಗಿಸಿದ (ಮಾಲದು ಇಡಂ) ಪರಮಾತ್ಮನು ಇರುವ ಜಾಗ ಯಾವುದೆಂದರೆ (ಮನ್ನು ಮುದುನೀರ್) ಒಂದು ದಿನವೂ ಬತ್ತದೆ ಇರುವ ಆಳವಾದ ಜಲಾಶಯಗಳಲ್ಲಿರುವ (ಅರವಿಂದಮಲರ್ ಮೇಲ್) ತಾವರೆ ಹೂಗಳಲ್ಲಿ (ವರಿವಂಡು) ರೇಖೆಗಳನ್ನುಳ್ಳ ದುಂಬಿಗಳು (ಇಶೈಪಾಡ) ಗಾನಗಳನ್ನು ಹಾಡುತ್ತಿರುವಂಥದೂ, (ಪುನ್ನೈ) ಹೊನ್ನೆ ಮರಗಳು (ಪೊನ್ಏಯ್ ತಾದು ಉದಿರ್ಕ್ಕುಂ) ಚಿನ್ನದ ಬಣ್ಣವನ್ನುಳ್ಳ ಹೂಗಳನ್ನು ಕೆಳಗೆ ಉದುರಿಸುವಂಥದೂ ಆದ (ಪುಳ್ಳಂಪೂದಂಗುಡಿತಾನೇ) ಪುಳ್ಳಂಪೂದಂಗುಡಿ ಎಂಬ ದಿವ್ಯಕ್ಷೇತ್ರವೇ ಆಗಿದೆ.

ನಪ್ಪಿನ್ನೈಪಿರಾಟ್ಟಿಯನ್ನು ಪಡೆಯುವುದಕ್ಕಾಗಿ ಅದಮ್ಯವಾದವೂ ಉಗ್ರ ಕೋಪವನ್ನುಳ್ಳವೂ ಆದ ಸಪ್ತವೃಷಭಗಳನ್ನು ಭಂಜಿಸಿದ ಪರಮಪ್ರಣಯಿ ಯಾದ ಪ್ರಭು ಇರುತ್ತಿರುವ ದೇಶ ಇದು. ಸ್ವರ್ಣಪುಷ್ಪಗಳನ್ನು ವರ್ಷಿಸು ವಂತೆ ಹೊನ್ನೆಮರಗಳಿಂದ ಸುಂದರವಾದ ಕುಸುಮಗಳು ಅಲ್ಲಿ ಉದುರುತ್ತಿರುವು ವಂತೆ. ಅಂಥ ಪರಮ ರಮಣೀಯವಾದ ದೇಶದಲ್ಲಿ ಸರ್ವಸ್ವಾತ್ಮರನಾದ ಸ್ವಾಮಿ ಸರ್ವಸುಲಭನಾಗಿ ಸೇವೆ ಕೊಡುತ್ತಿದ್ದಾನೆ.

ಕುಡೈಯಾ ವಿಲಂಗಲ್ ಕೊಂಡೇಂದಿ ಮಾರಿಪೆಟುದು
ಆನಿರೈಕಾತ್ತು
ಶಡೈಯಾನ್ ಓಡ ಅಡಲ್‌ವಾಣನ್ ತಡಂದೋಳ್
ತುಣಿತ್ತ ತಲೈವನಿಡಂ
ಕುಡಿಯಾವಂಡುಹಳ್ ಉಣ್ಣ ಕೋಲನೀಲಂ
ಮಟ್ಟುಉಹುಕ್ಕುಂ
ಪುಡೈಯೆಯಾರ್ ಕಟನಿ ಎಟಿಲ್ ಆರುಂ ಪುಳ್ಳಂ
ಪೂದಂಗುಡಿ ತಾನೇ ॥೭॥

(ವಿಲಂಗಲ್) ಗೋವರ್ಧನ ಪರ್ವತವನ್ನು (ಕುಡೈಆಕೊಂಡು) ಕೊಡೆಯನ್ನಾಗಿ ಮಾಡಿಕೊಂಡು (ಏನ್ದಿ) ಧರಿಸಿ (ಮಾರಿಪೆಟುದು) ವರ್ಷವನ್ನು ವ್ಯರ್ಥವಾಗಿಸಿ (ಆನಿರೈಕಾತ್ತು) ಹಸುಗಳ ಮಂದೆಯನ್ನು ರಕ್ಷಿಸಿ ಕರುಣಿಸಿದವನೂ, (ಶಡೈಯಾನ್ ಓಡ) ರುದ್ರದೇವನು ಓಡಿಹೋದಮೇಲೆ (ಅಡಲ್‌ವಾಣನ್) ಮೇಲೆ ಬೀಳಲು ಬಂದ ಬಾಣಾಸುರನ (ತಡತೋಳ್‌ತುಣಿತ್ತ) ವಿಶಾಲವಾದ ಭುಜಗಳನ್ನು ಕತ್ತರಿಸಿ ಹಾಕಿದವನೂ ಆದ (ತಲೈವನ್‌ಇಡಮ್)ಪರಮಾತ್ಮನು ಇರುತ್ತಿರುವ ಜಾಗ ಯಾವುದು ಎಂದರೆ—(ವಂಡುಹಳ್ ಕುಡಿ ಆ) ದುಂಬಿಗಳು ಹಿಂಡು ಹಿಂಡಾಗಿ ಬಂದು (ಉಣ್ಣ) ಭುಜಿಸುವಂತೆ (ಕೋಲನೀಲಂ) ಸುಂದರ ವಾದ ಕನ್ನೈದಿಲೆ ಪುಷ್ಪಗಳು (ಮಟ್ಟು) ಮಕರಂದವನ್ನು (ಉಹುಕ್ಕುಂ) ಉಕ್ಕುವಂತೆ ಹರಿಸುತ್ತಿರುವ (ಪುಡೈಆರ್ ಕಟನಿ ಎಟಿಲ್ ಆರುಂ) ನಾಲ್ಕು ಕಡೆಗಳಲ್ಲಿಯೂ ಸುತ್ತುವರಿದಿರುವ ಗದ್ದೆಗಳಿಂದ ಚೆಲುವು ಸೂಸುತ್ತಿರುವ (ಪುಳ್ಳಂ ಪೂದಂಗುಡಿತಾನೇ) ಪುಳ್ಳಂಬೂದಂಗುಡಿ ಎಂಬ ದಿವ್ಯಕ್ಷೇತ್ರವೇ ಆಗಿದೆ.

ಕಲ್ಮಳೆಯನ್ನು ನಿವಾರಿಸಲು ಕಲ್ಲನ್ನೇ ಕೊಡೆಯನ್ನಾಗಿ ಹಿಡಿದ ಆ ಸರ್ವೇಶ್ವರ, ಅದು ಪರಾರ್ಥವಾದ ವ್ಯಾಪಾರವಾದುದರಿಂದ ಸ್ವಲ್ಪವೂ ಖೇದವಾಗಲಿಲ್ಲವಂತೆ ಅವನಿಗೆ. ಉಪಕಾರಮಾಡಿದನೆಂಬುದನ್ನೂ ಅರಿಯಲಾರ ದಂತಹ ಪಶುಗಳನ್ನು ರಕ್ಷಿಸಿದ ಅವನು, ಈಶ್ವರಾಭಿಮಾನಿಯಾದ ರುದ್ರನು ಬೆನ್ನುತೋರಿ ಓಡಲು ಬಾಣನ ಬಾಹುಗಳನ್ನು ಕತ್ತರಿಸಿಹಾಕಿದ ಅವನು, 'ರಕ್ಷಕ ಇವನನ್ನು ತೊರೆದು ಹೋದ. ಇವನ ತಲೆಯನ್ನು ನಾವು ತೆಗೆಯ ಬಾರದು'—ಎಂದು ಕನಿಕರಿಸಿ ಬಾಣಾಸುರನ ಬಾಹುಗಳನ್ನು ಮಾತ್ರ ಕತ್ತರಿಸಿ ಹಾಕಿದನು. ದರ್ಶನೀಯವಾದ ಕನ್ನೈದಿಲೆ ಮಕರಂದದ ಪ್ರವಾಹವನ್ನು ಹರಿಯಿಸುವಂತಹ ದೇಶವಾದ ಪುಳ್ಳಂಬೂದಂ ಗುಡಿಯಲ್ಲಿ ಆ ಲೋಕನಾಥ ಬಂದು ನಿತ್ಯವಾಸ ಮಾಡುತ್ತಿದ್ದಾನೆ.

ಕರೈಯಾರ್ ನೆಡುವೇಲ್ ಮರಮನ್ನರ್ ವೀಯ
ವಿಶಯನ್ ಶೇರ್‌ಕಡವಿ
ಇರೈಯಾನ್ ಕೈಯಿಲ್ ನಿರೈಯಾದ ಮುಂಡಂ
ನಿರೈತ್ತ ಎನ್ದೈ ಇಡಂ
ಮರೈಯಾಲ್ ಮುತ್ತೀಯವೈ ವಳರ್ಕ್ಕುಂ ಮನ್ನು
ಪುಹೞಾಲ್ ವಣ್ಮೈಯಾಲ್
ಪೊರೈಯಾಲ್ ಮಿಕ್ಕ ಅಂದಣರ್‌ವಾೞ
ಪುಳ್ಳಂ ಪೂದಂಗುಡಿ ತಾನೇ ॥೮॥

(ಕರೈಆರ್‌ನಡುವೇಲ್) ರಕ್ತದ ಕಲೆಯು ಮಾಸದೆ ಇರುವ ನೀಳವಾದ ವೇಲಾ ಯುಧಗಳನ್ನು ಹಿಡಿದವರಾದ (ಮರಮನ್ನರ್) ದುರ್ಯೋಧನಾದಿ ಶತ್ರು ರಾಜರುಗಳು (ವೀಯ) ನಾಶವಾಗುವಂತೆ (ವಿಶಯನ್‌ತೇರ್‌ಕಡವಿ) ಅರ್ಜುನನ ರಥವನ್ನು ನಡೆಸಿದವನೂ, (ಇರೈಯವಾನ್ ಕೈಯಿಲ್) ರುದ್ರದೇವನ ಕೈಗೆ ಅಂಟಿಕೊಂಡಿದ್ದುದಾಗಿ (ನಿರೈಯವಾದ ಮುಂಡಂ) ಯಾವುದರಿಂದಲೂ ತುಂಬದೆ ಇರುವ ಕಪಾಲವನ್ನು (ನಿರೈತ್ತ) ಭಿಕ್ಷೆಹಾಕಿ ತುಂಬಿಸಿದವನೂ ಆದ (ಎಂದೈಇಡಂ) ನಮ್ಮ ಪರಮಾತ್ಮನು ಇರುತ್ತಿರುವ ಜಾಗವಾವುದು ಎಂದರೆ—(ಮರೈಯವಾಲ್) ವೇದಗಳಿಂದಲೂ (ಮುತ್ತೀಅವೈವಳರ್‌ಕ್ಕುಂ) ತ್ರೇತಾಗ್ನಿಗಳನ್ನು ಹೊಂದಿ

ಅಗ್ನಿಹೋತ್ರ ಮಾಡಿದುದರಿಂದಲೂ ಉಂಟಾದ (ಮನ್ನುಪುಹಟಾಲ್) ನೆಲೆ ನಿಂತ ಕೀರ್ತಿಯಿಂದಲೂ (ವಣ್ಮೈಯಾಲ್) ಔದಾರ್ಯದಿಂದಲೂ (ಪೊರೈಯಾಲ್) ಸಹನೆಯಿಂದಲೂ (ಮಿಕ್ಕ) ಹಿರಿಮೆ ಹೊಂದಿದ (ಅಂದಣರ್‌ವಾಟ್) ಬ್ರಾಹ್ಮಣರು ಬಾಳುತ್ತಿರುವಂತಹ (ಪುಳ್ಳಂಪೂದಂಗುಡಿತಾನೇ) ಪುಳ್ಳಂಪೂದಂ ಗುಡಿ ಎಂಬ ದಿವ್ಯಕ್ಷೇತ್ರವೇ ಆಗಿದೆ.

ಶತ್ರುವಿನ ನಿರಸನದಿಂದ ಆದ ರಕ್ತದ ಕಲೆಯನ್ನು ತೊಳೆಯುವುದಕ್ಕೂ ಅವಕಾಶವಿಲ್ಲದ ಕಾರಣ ಮಾಸದ ಕಲೆಯನ್ನುಳ್ಳ ವೇಲಾಯುಧಗಳನ್ನೂ, ಒಳಗೆ ಉಕ್ಕುವ ಕೋಪವನ್ನೂ ಉಳ್ಳ ರಾಜರುಗಳು ಮಡಿಯುವಂತೆ ಅರ್ಜುನನಿಗೆ ಸಾರಥ್ಯಮಾಡಿದ ಪ್ರಭು ಇವನು. ಈಶ್ವರಾಭಿಮಾನ ಹೊಂದಿದ ರುದ್ರನ ಕೈಯಲ್ಲಿ ಬ್ರಹ್ಮನ ಶಾಪದಿಂದ ಯಾವ ಭಿಕ್ಷೆಯಿಂದಲೂ ತುಂಬದೆ ಅಂಟಿ ಕೊಂಡಿರುತ್ತಿದ್ದ ಬ್ರಹ್ಮಕಪಾಲವನ್ನು ತನ್ನ ದೇಹದಿಂದ ಹರಿಸಿದ ರುಧಿರಧಾರೆ ಯಿಂದ ತುಂಬಿಸಿ, ಆ ಕಪಾಲ ಒಡೆದು ಬೀಳುವ ಹಾಗೆ ಮಾಡಿ ಅವನ ಪಾಪವನ್ನು ಹೋಗಲಾಡಿಸಿದ ಸರ್ವೇಶ್ವರನು ಇರುತ್ತಿರುವ ದೇಶ ಈ ದಿವ್ಯ ಕ್ಷೇತ್ರ. ಬ್ರಹ್ಮವಿದಗ್ರಗಣ್ಯರು ಇರುತ್ತಿರುವ ದೇಶ ಇದು.

**ತುನ್ನಿ ಮಣ್ಣುಂ ವಿಣ್‌ನಾಡುಂ ತೋನ್ರಾದು**
**ಇರುಳಾಯ್ ಮೂಡಿಯನಾಳ್**
**ಅನ್ನಮಾಹಿ ಅರುಮರೈಹಳ್ ಅರುಳಿಚ್ಚೆಯ್‌ದ**
**ಅಮಲನ್ ಇಡಂ**
**ಮಿನ್ನುಶೋದಿ ನವಮಣಿಯುಂ ವೇಯಿನ್‌ಮುತ್ತುಂ**
**ಶಾಮರೈಯುವತ್**
**ಪೊನ್ನುಂ ಪೊನ್ನಿ ಕೊಣರ್‌ನ್ದು ಅಲೈಕ್ಕುಂ**
**ಪುಳ್ಳಂಪೂದಂಗುಡಿ ತಾನೇ ॥೯॥**

(ಮಣ್ಣುಂ) ಭೂಲೋಕವೂ (ವಿಣ್‌ನಾಡುಂ) ಸತ್ಯಲೋಕಾಂತವಾದ ಲೋಕಗಳೂ (ತೋನ್ರಾದು) ಒಂದೂ ತಿಳಿಯದ ಹಾಗೆ (ಇರುಳ್ ಆಯ್) ಅಂಧಕಾರವಾಗಿ (ತುನ್ನಿ) ಎಲ್ಲೆಲ್ಲಿಯೂ ಸಾಂದ್ರವಾಗಿ (ಮೂಡಿಯನಾಳ್) ಕವಿದ ಕಾಲದಲ್ಲಿ (ಅನ್ನಂಆಹಿ) ಹಂಸರೂಪಿಯಾಗಿ ಅವತರಿಸಿ (ಅರುಮರೈಹಳ್‌ಅರುಳ್‌ಶೆಯ್‌ದ)

ಶ್ರೇಷ್ಠವಾದ ವೇದಗಳನ್ನು ಮತ್ತೆ ಪ್ರಕಾಶಕ್ಕೆ ತಂದು ಉಪಕರಿಸಿದ (ಅಮಲನ್ ಇಡಂ) ಪವಿತ್ರನಾದ ಪರಮಾತ್ಮನು ಇರುವ ಸ್ಥಳವಾವುದೆಂದರೆ—(ಮಿನ್ನು ಶೋದಿ) ಬೆಳಗುವ ತೇಜಸ್ಸನ್ನುಳ್ಳ (ನವಮಣಿಯುಮ್) ನವರತ್ನಗಳನ್ನೂ (ವೇಯಿನ್‌ಮುತ್ತುಂ) ಬಿದಿರುಗಳ ಮುತ್ತುಗಳನ್ನೂ (ಶಾಮರೈಯುಂ) ಚಾಮರಗಳನ್ನೂ(ಪೊನ್ನುಂ) ಚಿನ್ನವನ್ನೂ(ಪೊನ್ನಿ) ಕಾವೇರಿಯು (ಕೊಣರ್‌ನ್ದು ಅಲೈಕ್ಕುಂ) ತಳ್ಳಿಕೊಂಡು ಬಂದು ದಡದ ಮೇಲೆ ಸೇರಿಸುವ (ಪುಳ್ಳಂಪೂದಂ ಗುಡಿತಾನೇ) ಪುಳ್ಳಂಪೂದಂಗುಡಿ ಎಂಬ ದಿವ್ಯಕ್ಷೇತ್ರವೇ ಆಗಿದೆ.

ಜನಭರಿತವಾದ ಭೂಲೋಕವೂ ಸತ್ಯಲೋಕಾಂತವಾದ ಇತರ ಮೇಲಿನ ಲೋಕಗಳೂ ಒಂದು ಪದಾರ್ಥವನ್ನೂ ಅದು ಇರುವ ಹಾಗೇ ತಿಳಿಯುವುದಕ್ಕಾಗದ ಹಾಗೆ ಅಜ್ಞಾನಾಂಧಕಾರವು ಎಲ್ಲವನ್ನೂ ಆವರಿಸಿದ ಕಾಲದಲ್ಲಿ ಭಗವಂತನು ಹಂಸರೂಪದಲ್ಲಿ ಅವತರಿಸಿ ಸಾರಾಸಾರ ವಿವೇಕವನ್ನು ತಿಳಿಸಿಕೊಟ್ಟು ಬ್ರಹ್ಮದೇವನಿಗೆ ಅಂತಃ ಇದ್ದ ಅಂಧಕಾರವು ನಿವೃತ್ತಿ ಆಗುವಂತೆಮಾಡಿ ಯಥಾವಸ್ಥಿತವಾದ ರೀತಿಯಲ್ಲಿ ದುರ್ಜ್ಞೇಯವಾದ ಸಕಲವೇದಗಳನ್ನೂ ಉಪದೇಶಿಸಿದನು. ಸಂಚರಿತಸುಭಗರಾದ ಆಚಾರ್ಯರನ್ನು ಪರಮಹಂಸರೆಂದು ಹೇಳುವಂತೆ ಸ್ವಾಮಿ ಪ್ರಥಮಾಚಾರ್ಯನಾಗಿ ತೋರಿದ. ಈ ಹಂಸ ಅವತರಿಸಿದಾಗಲೇ ಒಳಗಿನ ಕತ್ತಲೆಯು ಮರೆಯಾಗಿ ನಿರತಿಶಯವಾದ ಆಹ್ಲಾದ ವುಂಟಾಯಿತು. ಭಗವಂತನು ದೇವರೂಪದಲ್ಲಿ ಬಂದು ಏಕೆ ಉಪದೇಶ ನೀಡಲಿಲ್ಲ ? ತಿರ್ಯಕ್ಕಾಗಿ ಏಕೆ ಹೀಗೆ ತೋರಿದ ? 'ಆಚಾರ್ಯಾನುವರ್ತನವನ್ನು ಮಾಡಿ ಕೇಳಲು ಅಧಿಕಾರಿಗಳು ಇರಲಾರರು. ಆದರೆ ಅಂಥವರಿಗೂ ಉಪದೇಶಿಸಲೇಬೇಕು. ತಿರ್ಯಕ್ಕಾಗಿ ಬಂದರೆ ಅಧಿಕಾರಿಯಲ್ಲದವನಿಗೆ ಹೇಳಬಾರದು ಎಂಬ ನಿಯಮವಿರದು—'ಎಂದು ಭಾವಿಸಿ ಪ್ರತ್ಯುಪಕಾರ ನಿರಪೇಕ್ಷನಾಗಿ ಪರಮತತ್ತ್ವವನ್ನು ಎಲ್ಲರಿಗೂ ಉಪದೇಶಿಸಿದ. ಹಾಗೂ ಅಜ್ಞಾನಾಂಧಕಾರವನ್ನು ಹೋಗಲಾಡಿಸಿದ ಆ ಕರುಣಾಕರ. ಅವನು ಹೇಗೆ ಪ್ರತ್ಯುಪಕಾರ ನಿರಪೇಕ್ಷನಾಗಿ ಉಪಕರಿಸಿದನೋ ಹಾಗೆಯೇ ಅಲ್ಲಿನ ಕನಕಸರಿತ್ತೂ ಸಹ ಅಪೂರ್ವವಾದ ಸಂಪತ್ತನ್ನು ದಡದ ಮೇಲೆ ತಂದು ಹಾಕುವುದಂತೆ. ಇಂಥ ದಿವ್ಯಕ್ಷೇತ್ರ ಅವನಿರುವ ಸ್ಥಾನ.

ಕನ್ರು ಆ ಮರಿತ್ತು ಕಾಳಿಯನ್‌ತನ್ ಶೆನ್ನಿ ನಡುಂಗ
ನಡಮ್ ಪಯಿನ್ರ
ಪೊತ್ತಾಮರೈಯಾಳ್ ತನ್‌ಕೇಳ್ವನ್ ಪುಳ್ಳಂಪೊತಂ
ಗುಡಿತನ್‌ಮೇಲ್
ಕತ್ತಾರ್ ಪರವುಂ ಮಂಗೈಯರ್‌ಕೋನ್
ಕಾರಾರ್‌ಪುಯಲ್‌ಕೈ ಕಲಿಕನ್ರಿ
ಶೊಲ್‌ತಾನ್ ಈರೈಂದಿವೈ ಪಾಡ ಶೋರನಿಲ್ಲಾ
ತುಯರ್‌ತಾನೇ ॥೧೦॥

(ಕನ್ರುಆ) ಕರುಗಳೊಡನೆ ಕೂಡಿದ ಪಶುಗಳನ್ನು (ಮರಿತ್ತು) ಪ್ರೇಮದಿಂದ ಮೇಯಿಸಿದವನೂ (ಕಾಳಿಯನ್‌ತನ್ ಶೆನ್ನಿ) ಕಾಳಿಂಗನಾಗನ ತಲೆಯಲ್ಲಿ (ನಡುಂಗ ನಡಂ ಪಯಿನ್ರ) ಆ ನಾಗವು ನಡುಗುವಂತೆ ಕುಣಿದವನೂ, (ಪೊನ್‌ತಾಮರೈಯಾಳ್‌ತನ್‌ಕೇಳ್ವನ್) ಸುಂದರವಾದ ಪದ್ಮದಲ್ಲಿ ಉದಿಸಿದ ಶ್ರೀದೇವಿಗೆ ವಲ್ಲಭನೂ ಆದ ಪರಮಾತ್ಮನ (ಪುಳ್ಳಂ ಪೂದಂಗುಡಿತನ್‌ಮೇಲ್) ಪುಳ್ಳಂಪೂದಂ ಗುಡಿಯ ವಿಷಯವಾಗಿ (ಕತ್ತಾರ್ ಪರವುಂ) ಯಾರು ಕಲಿಯುವರೋ ಅವರಿಂದ ಶ್ಲಾಘಿಸಲ್ಪಡುವವರೂ, (ಮಂಗೈಯರ್‌ಕೋನ್) ತಿರುಮಂಗೈಯಲ್ಲಿರುವವರಿಗೆ ನಿರ್ವಾಹಕರಾದವರೂ, (ಕಾರ್‌ಆರ್‌ಪುಯಲ್‌ಕೈ) ಕಾಳಮೇಘವನ್ನು ಹೋಲುವಂತಹ ಉದಾರರೂ ಆದ (ಕಲಿಕನ್ರಿ) ಶ್ರೀಕಲಿಯನ್ ಅವರ (ಶೊಲ್) ಶ್ರೀಸೂಕ್ತಿಯಾದ (ಇವೈಈರೈನ್ದು) ಈ ಇಪ್ಪತ್ತು ಪಾಶುರಗಳನ್ನು (ಪಾಡ) ಹಾಡುವುದಾದರೆ (ತುಯರ್) ದುಃಖಗಳು (ಶೋರ) ಈ ಆತ್ಮನನ್ನು ಹಿಂಸಿಸುವಂತೆ (ನಿಲ್ಲಾ) ತಂಗಿ ಇರುವುದಿಲ್ಲ. ತಮಗೆ ತಾವೇ ಹೋಗಿಬಿಡುವುವು.

ಪಶುಗಳನ್ನು ಮೇಯಿಸಿದವನೂ, ಅವುಗಳನ್ನು ಒಂದೆಡೆ ನಿಲ್ಲಿಸಿ ಕಾಳಿಂಗನ ಮಡುವಿನಲ್ಲಿ ಧುಮ್ಮಿಕ್ಕಿ ಆ ಕಾಳಿಂಗನ ತಲೆ ನಡುಗುವಂತೆ ನಟನವನ್ನು ಮಾಡಿದವನೂ ಆದ ಶ್ರಿಯಃಪತಿ ತನ್ನ ಸೌಕುಮಾರ್ಯಕ್ಕೆ ಸಲ್ಲದ ಸಾಹಸ ಮಾಡಿದನು. ಅವನಿರುವ ಪುಳ್ಳಂಪೂದಂಗುಡಿಯ ವಿಷಯವಾಗಿ ಸಕಲಕಲಾಪ್ರವೀಣರೂ, ಸ್ತೋತ್ರರೂ, ತಿರುಮಂಗೈನಾಡಿನ ನಿರ್ವಾಹಕರೂ, ಮಹೋದಾರರೂ, ಕಲಿಧ್ವಂಸರೂ ಆದ ಆಳ್ವಾರ್‌ರವರು ಅನುಗ್ರಹಿಸಿದ ಈ ಪಾಶುರಗಳನ್ನು ಹಾಡುವವರಿಗೆ ಯಾವ ಪಾಪದ ಬಾಧೆಯೂ ಇರುವುದಿಲ್ಲ.

# 'ತಾಮ್‌ತಮ್'

## ಪ್ರವೇಶ

'ವೆಳ್ಳಿಯಾರ್ ಪಣಂಗ ವಿರ್‍ೈಂದು ಅರುಳ್ ಶೆಯ್‌ವಾನ್' ಎಂದು ಆಳ್ವಾರ್ ಹೇಳಿದರು. 'ಪಂತ್ತೊಬ್ಬರು ಆಶ್ರಯಿಸಿದರೆ ಅವನು ಕೃಪೆ ತೋರುವನು' ಎಂದು ಹೇಳಬೇಕೋ ? ಅವನೇ ಬಂದು ನನ್ನ ಹೃದಯದಲ್ಲಿ ಪ್ರವೇಶಿಸಿ ಕೃಪೆ ಮಾಡುವವನಲ್ಲವೇ ? ಅವನ ಸ್ವಾಮಿತ್ವವನ್ನು ಅವನೇ ನಿರ್ಹೇತುಕವಾಗಿ ತೋರಿಸಿದನಲ್ಲಾ ! ಅಂಥ ಸರ್ವೇಶ್ವರ ತಿರುಕ್ಕೊಡಲೂರಿನಲ್ಲಿ ಬಂದು ಸನ್ನಿಹಿತನಾಗಿದ್ದಾನೆ. ಸರ್ವಾಧಿಕನಾಗಿದ್ದರೂ ಸಹ ಅವನು ತನ್ನ ಪರತ್ವವನ್ನು ಎಣಿಸದೆ ಆಶ್ರಿತರಿಗಾಗಿ ಸುಲಭವಾಗಿ ಅವರ ಕಾರ್ಯವನ್ನು ಮಾಡಿಕೊಡುವವನಾಗಿದ್ದಾನೆ-ಎಂದು ಆ ದೇಶದ ನಿರತಿಶಯ ಭೋಗ್ಯತ್ವವನ್ನೂ ಆ ಸ್ವಾಮಿಯ ಹಿರಿಮೆಯನ್ನೂ ಅನುಸಂಧಾನ ಮಾಡಿದ್ದಾರೆ ಇಲ್ಲಿ.

**ತಾಮ್‌ತಮ್ ಪೆರುಮೈ ಅರಿಯಾರ್ ತೂತು**
**ವೇಂದರ್ಕ್ಕಾಯ ವೇಂದರ್ ಊರ್‌ಪೋಲ್**
**ಕಾಂದಳ್ ವಿರಲ್ ಮೆನ್‌ಕಲೈ ನನ್ ಮಡವಾರ್**
**ಕೂಂದಲ್ ಕಮಳುಮ್ ಕೂಡಲೂರೇ** ॥೧॥

(ತಮ್‌ಪೆರುಮೈ) ತಮ್ಮ ಅಪಾರವಾದ ಹಿರಿಮೆಯನ್ನು (ತಾಮ್‌ಅರಿಯಾರ್) ತಾವೂ ತಿಳಿಯದವರಾಗಿರುವವರೊ, (ವೇಂದರ್ಕ್ಕು) ಪಾಂಡವರಿಗೆ (ತೂದು ಆಯ) ದೂತನಾಗಿ ಹೋದವರೂ ಆದ (ವೇಂದರ್) ದೇವಾಧಿದೇವರ (ಊರ್‌ಪೋಲ್) ದಿವ್ಯದೇಶದೋಪಾದಿ ಇದೆ-(ಕಾಂದಳ್‌ವಿರಲ್)ಶೆಂಗಾಂದಳ್ ಹೂವಿನ ಹಾಗೆ ಬೆರಳುಗಳನ್ನುಳ್ಳವರೂ (ಮೆನ್‌ಕಲೈ) ಮೃದುವಾದ ಪಟ್ಟೆಯ ಸೀರೆಯನ್ನುಟ್ಟವರೂ (ನಲ್‌ಮಡವಾರ್) ಸೌಂದರ್ಯವೂ ಗುಣಗಳೂ ಉಳ್ಳವರೂ ಆದ ಸ್ತ್ರೀಯರ (ಕೂಂದಲ್ ಕಮಳುಮ್) ತಲೆಗೂದಲು ಪರಿಮಳವನ್ನು ಹರಡುವಂತಹ (ಕೂಡಲೂರ್) ಈ ತಿರುಕ್ಕೂಡಲೂರ್ ಕ್ಷೇತ್ರ.

ಸ್ವತಃ ಸರ್ವಜ್ಞನೇ ಆಗಿದ್ದರೂ 'ಯಃ ಸರ್ವಜ್ಞಃ ಸರ್ವವಿತ್' ಎಂದು ಶ್ರುತಿಯೇ ಹೇಳುತ್ತಿದ್ದರೂ ತನ್ನ ಹಿರಿಮೆಯನ್ನು ಅವನು ಅರಿಯನು. ಅವನಿಗೆ ಹಿರಿಮೆ ಉಂಟೆಂಬುದನ್ನು ಅವನ ಆಶ್ರಿತರು ಅರಿಯುತ್ತಾರೆ. 'ಆಶ್ರಿತರಿಗಾಗಿ ಹೀಗೆ ಇಳಿದುಬಂದಿರುವ ಇವನ ಸೌಲಭ್ಯವೆಂಥದು !' ಎಂದು ಆಶ್ರಿತರು ಅರಿಯುವರೇ ವಿನಾ ಅವನು ಅರಿಯಲಾರ. 'ಇನ್ನಾರ್ ದೂತನೆನ ನಿನ್ರಾನ್' ಎಂದು ಎಲ್ಲರೂ ಎಂದೆಂದೂ ಹೇಳುವಂತೆ ಮತ್ತೊಬ್ಬರಿಗಾಗಿ ಅವನು ತನ್ನನ್ನೇ ಕಡಿಮೆ ಮಾಡಿಕೊಂಡು ಪಾಂಡವ ದೂತನಾಗಿ ವ್ಯವಹರಿಸಿದ. ತಮ್ಮನ್ನು ಎಷ್ಟೇ ಕೆಳಗೆ ಇಳಿಸಿಕೊಂಡರೂ ಇನ್ನೊಬ್ಬರಿಗಾಗಿ ದೂತರಾಗು ವುದಿಲ್ಲವಷ್ಟೇ ? ತನ್ನನ್ನು ತಾನು ಹೀಗೆ ಕಡಿಮೆಯಾಗಿ ಮಾಡಿಕೊಂಡರೂ ಇವನು ಹಿರಿಮೆಯಿಲ್ಲದವನು ಎಂದು ಯಾರೂ ತಿಳಿಯುವುದಿಲ್ಲವಷ್ಟೇ ? 'ರಾಜಾಧಿರಾಜನಿವನು' ಎಂಬುವ ಹಿರಿಮೆ ಎಲ್ಲವನ್ನೂ ಹಿಂದಿಕ್ಕಿ ತಾನೇ ತಾನಾಗಿ ತೋರಿಸಿಕೊಳ್ಳುವುದು !

ಇವನು ಇರುವ ದಿವ್ಯದೇಶದಲ್ಲಿರುವ ಸ್ತ್ರೀಯರು ಸರ್ವಪ್ರಕಾರದಲ್ಲಿಯೂ ವಿಲಕ್ಷಣೆಯರಾಗಿದ್ದಾರೆ. 'ಸರ್ವಗಂಧಃ' ಎಂಬುವ ವಸ್ತು ನಿತ್ಯವಾಸ ಮಾಡು ತ್ತಿರುವ ದೇಶವಾದರೂ ಅದನ್ನೂ ಮೀರಿ ಇವರ ಕೇಶ ಪರಿಮಳ ಎಲ್ಲೆಲ್ಲೂ ಹರಡುವುದಂತೆ.

**ಶೆರುಂ ತಿಣ್ ತಿಮಿಲ್ ಏರುಉಡ್ಯೆಯ ಪಿನ್ನೈ**
**ಪೆರುಂ ತಣ್ ಕೋಲಂ ಪೆತ್ತಾರ್ ಊರ್ ಪೋಲ್**
**ನರುಂತಣ್ ತೀವಮ್ ತೇನ್ ಉಣ್ಣವಣ್ಡು**
**ಕುರಿಂಜಿಪಾಡುಂ ಕೂಡಲೂರೇ** ॥೨॥

(ಶೆರುಂ) ಮೇಲೆ ಹಾಯುವಂತಹವೂ (ತಿಣ್ ತಿಮಿಲ್) ದೃಢವಾದ ಹಿಳಿಲು ಗಳನ್ನುಳ್ಳವೂ ಆದ (ಏರು) ವೃಷಭಗಳನ್ನು (ಉಡ್ಯೆಯ) ಶುಲ್ಕವಾಗಿ ಹೊಂದಿದ್ದವಳಾದ (ಪಿನ್ನೈ) ನಪ್ಪಿನ್ನೈಪಿರಾಟ್ಟಿಯನ್ನು (ಪೆರು) ಪಡೆಯಲು ಬಯಸುವಂತಹುದಾದ (ತಣ್ ಕೋಲಂ) ಸುಂದರವಾದ ದಿವ್ಯಮೂರ್ತಿಯನ್ನು (ಪೆತ್ತಾರ್) ವೃಷಭಗಳನ್ನು ದಮನಮಾಡಿ ಪಡೆದುಕೊಂಡ ಭಗವಂತನ (ಊರ್ ಪೋಲ್) ದಿವ್ಯದೇಶದ ರೀತಿ ಇರುವುದಿದು—(ನರು) ಒಳ್ಳೆಯ ವಾಸನೆಸೂಸು

ವಂಥದೂ (ತಣ್‌ತೀಮ್) ತಣ್ಣಗೆ ಮಧುರವಾಗಿರುವುದೂ ಆದ (ತೇನ್) ಮಕರಂದವನ್ನು (ಉಂಡಮಡು) ಹೀರಿಕೊಂಡ ದುಂಬಿಗಳು (ಕುರಿಂಜಿಪಾಡುಂ) ಕುರಿಂಜಿ ಎಂಬ ಗಾನವನ್ನು ಹಾಡುತ್ತಿರುವಂತಹ (ಕೂಡಲೂರೇ) ಕೂಡಲೂರ್ ದಿವ್ಯಕ್ಷೇತ್ರ.

ಉನ್ನತವಾದ ಹಿಳಿಲುಗಳನ್ನುಳ್ಳವೂ ಎದುರಾದವರ ಮೇಲೆ ಕ್ರೂರವಾಗಿ ಹಾಯುವಂಥವೂ ಆದ ಏಳು ವೃಷಭಗಳನ್ನು ನಪ್ಪಿನ್ನೈಪಿರಾಟ್ಟಿ ಒಬ್ಬಳಿಗಾಗಿ ಸ್ವಾಮಿ ದಮನಮಾಡಿದ. ಮತ್ತಾವ ಆಶ್ರಯದಲ್ಲಿಯೂ ಇಲ್ಲದಂತೆ ಚೆಲುವನ್ನು ಹೊಂದಿದ್ದ ಆ ನಪ್ಪಿನ್ನೈಯನ್ನು ಪಡೆದುಕೊಂಡ ಅಲಭ್ಯವಾದ ಲಾಭವನ್ನು ಹೊಂದಿದ---ಆ ಸರ್ವಾಧಿಕ. ಆ ಸರ್ವೇಶ್ವರನಿರುವ ದೇಶದಲ್ಲಿ ನಿತ್ಯಸೂರಿಗಳೂ ಮುಕ್ತರೂ ಹೇಗೆ ಸಾಮವನ್ನು ಆನಂದದಿಂದ ಹಾಡುತ್ತಿರುವರೋ ಹಾಗೆ ಆ ಸ್ವಾಮಿ ನಿತ್ಯವಾಸ ಮಾಡುತ್ತಿರುವ ಈ ದಿವ್ಯ ಕ್ಷೇತ್ರದಲ್ಲಿ ಮಧುಪಾನದಿಂದ ಆನಂದ ಹೊಂದಿ ಕಾಲದ ನಿರ್ಬಂಧವಿಲ್ಲದೆ 'ಕುರಿಂಜಿ' ಎನ್ನುವ ಗಾನವನ್ನು ಹಾಡುತ್ತಿರುತ್ತವೆ ದುಂಬಿಗಳು.

ಪಿಳ್ಳೈಯುರುವಾಯ್ ತಯಿರುಂಡು ಅಡಿಯೇನ್
ಉಳ್ಳಂ ಪುಹುಂದ ಒರುವರೂರ್‌ಪೋಲ್
ಕಳ್ಳನಾರೈ ವಯಲುಳ್ ಕಯಲ್‌ಮೀನ್
ಕೊಳ್ಳೈಕೊಳ್ಳುಂ ಕೂಡಲೂರೇ ॥೩॥

(ಪಿಳ್ಳೈಉರುಆಯ್) ಕೃಷ್ಣನೆಂಬುವ ಚಿಕ್ಕಬಾಲಕನಾಗಿದ್ದುಕೊಂಡು (ತಯಿರ್ ಉಂಡು) ಮೊಸರನ್ನುಭುಜಿಸಿ (ಅಡಿಯೇನುಳ್ಳಂ ಪುಹುಂದ) ನನ್ನ ಹೃದಯವನ್ನು ಪ್ರವೇಶಿಸಿದವನಾದ (ಒರುವರ್) ಅದ್ವಿತೀಯನಾದ ಒಬ್ಬ ಭಗವಂತನ (ಊರ್‌ಪೋಲ್) ದಿವ್ಯದೇಶದ ಹಾಗೆ (ಕಳ್ಳಂನಾರೈ) ವಂಚನೆಯ ಮನಸ್ಸುಳ್ಳ ನಾರೈ ಹಕ್ಕಿಗಳು (ವಯಲುಳ್) ಗದ್ದೆಗಳಲ್ಲಿ (ಕಯಲ್‌ಮೀನ್ ಕೊಳ್ಳೈಕೊಳ್ಳುಂ) ಕಯಲ್‌ಮೀನುಗಳನ್ನು ನುಂಗಿ ಹಾಕುವಂತಹ (ಕೂಡಲೂರ್) ಕೂಡಲೂರ್ ಕ್ಷೇತ್ರ ಇದೆ.

ಸರ್ವೇಶ್ವರನಾಗಿಯೇ ಇರುತ್ತಾ ಕದ್ದು ಬೆಣ್ಣೆಯನ್ನೂ ಮೊಸರನ್ನೂ ತಿನ್ನುವುದಕ್ಕಾಗದ ಕಾರಣ ಬಾಲಕನ ರೂಪವನ್ನು ತೆಗೆದುಕೊಂಡು ಬಂದು

ಆಶ್ರಿತರಸ್ಪರ್ಶವಿಲ್ಲದ ದ್ರವ್ಯತನಗೆಸಲ್ಲದೆಂಬ ಸೌಲಭ್ಯವನ್ನು ತೋರಿದ. ಅವನನ್ನು ಬಿಟ್ಟು ಬೇರೆಯವನನ್ನು ನಾನು ಒಪ್ಪದಂತೆ ಮಾಡಿ ನನ್ನನ್ನು ವಶೀಕರಿಸಿಕೊಂಡು ನನ್ನ ಹೃದಯದಲ್ಲಿ ಬಂದು ನೆಲಸಿದ್ದಾನೆ ಬ್ರಹ್ಮಪುರದಲ್ಲಿರುವಂತೆ. ಇವನು ನಿತ್ಯವಾಸ ಮಾಡಿರುವ ಆ ಕೂಡಲೂರ್ ಕ್ಷೇತ್ರವೂ ಹಾಗೆಯೇ ಬ್ರಹ್ಮಪುರವೆಂಬು ವಂತಾಯಿತು. ಆ ಕ್ಷೇತ್ರದಲ್ಲಿರುವ ನಾರೈಗಳು ನಿಶ್ಚಲವಾಗಿ ನಿಂತಿದ್ದು, ತಮ್ಮ ಬಾಯಿಗೆ ಅಡಗದ ಮತ್ಸ್ಯಗಳು ಕಾಲಿನ ಸಂದಿಯಲ್ಲಿ ಸಂಚರಿಸುತ್ತಿದ್ದರೂ ಆನಾದರಿಸಿ, ತಾನು ಬಯಸಿದ ಆಮಿಷ ಸಮೀಪಿಸಿದ ಕೂಡಲೇ ಮೇಲೆ ಬಿದ್ದು ಕಬಳಿಸುವುವಂತೆ. ಯಶೋದೆ ಬೆಣ್ಣೆ ಮೊಸರುಗಳನ್ನು ಮುಚ್ಚಿಡುವ ವೇಳೆ ಯಲ್ಲಿ ಕೃಷ್ಣನು ನಿದ್ರಿಸುವವನಂತೆ ನಟಿಸಿ ಅವಳು ಅತ್ತ ಹೋದ ಕೂಡಲೇ ತನಗೆ ಬೇಕಾದಂತೆ ಕೊಳ್ಳೆಹೊಡೆಯುವಂತೆ ಆಯಿತು ಇದೂ ಸಹ, ನಾರಾಯಣ ನಂತೆಯೇ ನಾರೈಗಳೂ ಆದ ಹಾಗೆ ಆಯಿತು.

ಕೂತ್ತೀರುರುವಿನ್ ಕುರಳಾಯ್ ನಿಲಂ ನೀರ್
ಏತ್ತಾನ್ ಎನ್ದೈಪೆರುಮಾನೂರ್‌ಪೋಲ್
ಶೇಶ್ತೇರುಟಿವರ್ ಕೋದೈಪ್ಪೋದೂಣ್
ಕೋಲ್‌ಶೇನ್ ಮುರಲುಂ ಕೂಡಲೂರೇ ॥೪॥

(ಕೂರುಏರ್‌ಉರುವಿನ್) ಕೊಂಡಾಡುವುದಕ್ಕೆ ತಕ್ಕರೂಪವನ್ನುಳ್ಳ (ಕುರಳ್ ಆಯ್) ವಾಮನರೂಪಿಯಾಗಿ (ನಿಲಂ ನೀರೇತ್ತಾನ್) ಭೂಮಿ ಧಾನವನ್ನು ತೆಗೆದುಕೊಂಡ (ಎನ್ದೈಪೆರುಮಾನ್) ನಮ್ಮ ಪರಮಾತ್ಮನ (ಊರ್‌ಪೋಲ್) ದಿವ್ಯದೇಶದ ರೀತಿಯಲ್ಲಿ (ಶೇರು) ಕೆಸರುಗಳಲ್ಲಿ (ಏರ್‌ಉಟಿವರ್) ಏರನ್ನು ಕಟ್ಟಿ ಉಳುವವರು (ಕೋದೈ) ಮುಡಿಯಲ್ಲಿ ಮುಡಿದ (ಪೋದು ಊಣ್) ಹೂಗಳಲ್ಲಿರುವ ಮಕರಂದವನ್ನು ಹೀರಿಕೊಳ್ಳುವಂತಹ (ಕೋಲ್‌ತೇನ್) ತೋಟಗಳಲ್ಲಿನ ದುಂಬಿಗಳು (ಮುರಲುಂ) ಝೇಂಕಾರ ಮಾಡುತ್ತಿರುವಂತಹ (ಕೂಡಲೂರೇ) ಈ ಕೂಡಲೂರ್ ಕ್ಷೇತ್ರ ಇದೆ.

'ದೇಹಿ' ಎಂದು ಕೇಳುವುದಕ್ಕೆ ಯೋಗ್ಯವಾದ ಬ್ರಹ್ಮಚಾರಿ ವೇಷವನ್ನು ಧರಿಸಿಬಂದ ಅವನು. 'ಈ ವಾಮನಮೂರ್ತಿಯ ರೂಪ ಎಂಥದು!'-ಎಂದು ಕಂಡವರೆಲ್ಲಾ ಕೊಂಡಾಡತಕ್ಕ ದಿವ್ಯರೂಪವನ್ನು ಅವನು ಪಡೆದು ಬಂದ,

ತನ್ನದಲ್ಲದ ವಸ್ತುವೊಂದನ್ನು ಪಡೆದುಕೊಂಡವನ ಹಾಗೆ ತೋರಿಸಿಕೊಂಡ. ತನ್ನ ಈ ಲೀಲಾಚೇಷ್ಟಿತದಿಂದ ನನ್ನನ್ನು ಪರವಶನನ್ನಾಗಿಸಿದ ನನ್ನ ಕುಲನಾಥನು ಇರುತ್ತಿರುವ ದಿವ್ಯದೇಶ ಇದು. ತೋಪುಗಳಲ್ಲಿ ಆಗ ತಾನೇ ಅರಳಿದ ಹೂಗಳಲ್ಲಿ ಮಧುಪಾನ ಮಾಡುತ್ತಿದ್ದ ದುಂಬಿಗಳು ಅವುಗಳನ್ನು ಬಿಟ್ಟು ಬಂದು, ಗದ್ದೆ ಉಳುತ್ತಿದ್ದವರ ಮುಡಿಯಲ್ಲಿ ಮುಡಿದಿದ್ದ ಹೂಗಳಲ್ಲಿರುವ ಮಧುಪಾನವನ್ನು ಮಾಡಿ ಆನಂದದಿಂದ ಹಾಡುತ್ತಿರುವುವಂತೆ.

ತೊಂಡರ್ ಪರವ ಶುಡರ್ ಶೆನ್ರು ಅಣವ
ಅಂಡತ್ತಮರುಂ ಅಡಿಹಳ್ ಊರ್‌ಪೋಲ್
ವಂಡಲ್ ಅಲೈಯುಳ್ ಕೆಂಡೈಮಿಳಿರ
ಕೊಂಡಲ್ ಅದಿರುಂ ಕೂಡಲೂರೇ ॥೫॥

(ತೊಂಡರ್) ಆಶ್ರಿತರು (ಪರವ) ಸ್ತೋತ್ರಮಾಡುವ ಹಾಗೆ (ಶುಡರ್ ಶೆನ್ರು ಅಣವ) ದಿವ್ಯದೇಹ ಸೂರ್ಯಮಂಡಲದವರೆಗೂ ಹೋಗಿ ಸ್ಪರ್ಶಿಸುವಂತೆ (ಅಂಡತ್ತು ಅಮರುಂ) ಆಕಾಶದಲ್ಲಿ ಅವಕಾಶವಿರುವ ಜಾಗವನ್ನೆಲ್ಲಾ ವ್ಯಾಪಿಸಿದ (ಅಡಿಹಳ್ ಊರ್‌ಪೋಲ್) ನಮ್ಮ ಸ್ವಾಮಿಯ ದಿವ್ಯದೇಶದೋಪಾದಿಯಲ್ಲಿ (ವಂಡಲ್ ಅಲೈಯುಳ್) ಮೆಕ್ಕಲು ಮಣ್ಣು ಇದ್ದು ಪ್ರಚುರವಾದ ಅಲೆಗಳಿರುವ ನೀರ್ನೆಲೆಗಳಲ್ಲಿ (ಕೆಂಡೈ) ಕೆಂಡೈಮೀನುಗಳು (ಮಿಳಿರ) ಸುತ್ತುವಾಗ ತಮ್ಮ ಪ್ರಕಾಶದಿಂದ ಮಿಂಚಲು ಅದನ್ನು ಕಂಡು (ಕೊಂಡಲ್ ಅದಿರುಂ) ಮೇಘಗಳು ಮೊಳಗುವಂತಹ (ಕೂಡಲೂರೇ) ಕೂಡಲೂರ್ ಕ್ಷೇತ್ರ ಇರುತ್ತಿದೆ.

ತನ್ನ ಕೈಮೇಲೆ ದಾನಧಾರೆ ಬಿದ್ದೊಡನೆ 'ಕಾರ್ಯವಾಯಿತು' ಎಂಬ ಸಂತೋಷದಿಂದ ಆಕಾಶದುದ್ದಕ್ಕೂ ಬೆಳೆದ ತ್ರಿವಿಕ್ರಮನ ಅನುಸಂಧಾನ ಮಾಡಿದ್ದಾರೆ ಇಲ್ಲಿ. ಆಶ್ರಿತರು ಆಗ ಅವನನ್ನು ಅನನ್ಯಭಾವದಿಂದ ಸ್ತುತಿಸಿದರು. ಎಷ್ಟು ಅವಕಾಶವಿತ್ತೋ ಅಷ್ಟನ್ನೂ ಅವನು ವ್ಯಾಪಿಸಿದ ತನ್ನ ದಿವ್ಯ ರೂಪದಿಂದ. ಅಲೆಗಳೇಳುತ್ತಿರುವ ನೀರಿನ ನೆಲೆಗಳಲ್ಲಿರುವ ಕೆಂಡೈಮೀನು ಹೊರಳಿದಾಗ ಅವುಗಳ ದೇಹದ ಪ್ರಕಾಶ ಮಿಂಚಿನಂತೆ ಹೊಳೆಯುವುದಂತೆ. ಆಗ ಮೋಡ ಗುಡುಗುವುದಂತೆ ತನ್ನ ದೇಹದಲ್ಲಿರುವ ಮಿಂಚು ಅದು ಎಂದು. ಕಾರ್ಯಕಾಲದಲ್ಲಿ ವಾಮನ ಹೇಗೆ ವರ್ಧಿಸಿದನೋ ಹಾಗೆ ಇಲ್ಲಿ ಮೀನುಗಳು ವರ್ತಿಸುತ್ತಿವೆಯಂತೆ.

**ತಕ್ಕನ್ ವೇಳ್ವಿ ತಹರ್ತ್ತ ತಲ್ವೈನ್**
**ತುಕ್ಕಂ ತುಡೈತ್ತ ತುಣೈವರ್ ಊರ್‌ಪೋಲ್**
**ಎಕ್ಕಲಿಡು ನುಣ್‌ಮಣಲ್‌ಮೇಲ್ ಎಂಗುಂ**
**ಕೊಕ್ಕಿನ್ ಪಟಂ ವೀಟಿ ಕೂಡಲೂರೇ** ॥೬॥

(ತಕ್ಕನ್) ದಕ್ಷ ಪ್ರಜಾಪತಿಯ (ವೇಳ್ವಿತಹರ್ತ್ತ) ಯಾಗವನ್ನು ನಾಶಪಡಿಸಿದವನಾದ (ತಲ್ವೈನ್) ರುದ್ರದೇವನ (ತುಕ್ಕುಂತುಡೈತ್ತ) ದುಃಖವನ್ನು ಹೋಗಲಾಡಿಸಿದ (ತುಣೈವರ್) ಆಪದ್ಬಂಧುವಾದ ಪರಮಾತ್ಮನ (ಊರ್ ಪೋಲ್) ದಿವ್ಯದೇಶದ ಹಾಗೆ (ಎಕ್ಕಲಿಡು) ಮಕ್ಕಲು ಮಣ್ಣು ಬಂದು ಸೇರಿರುವ (ನುಣ್ ಮಣಲ್‌ಮೇಲ್ ಎಂಗುಂ) ನುಣುಪಾದ ಮರಳಿರುವ ಜಾಗದಲ್ಲೆಲ್ಲಾ (ಕೊಕ್ಕಿನ್‌ಪಟುಂ) ಮಾವಿನಹಣ್ಣುಗಳು (ವೀಟಿ) ಹುದುಗಿಸಿಟ್ಟ ಹಾಗೆ ಬಿದ್ದಿರುವಂತಹ (ಕೂಡಲೂರೇ) ಕೂಡಲೂರ್ ದಿವ್ಯಕ್ಷೇತ್ರ ಇರುತ್ತಿದೆ.

'ದಕ್ಷಾಧ್ವರ ಧ್ವಂಸ' ಎಂಬ ಹಿರಿಮೆಯನ್ನು ಹೊಂದಿದ್ದ ರುದ್ರದೇವನ ದುಃಖವನ್ನು ಹೋಗಲಾಡಿಸಿದ ಆಪತ್ಸಖ ಇವನು. ರುದ್ರನಿಗೆ ಬ್ರಹ್ಮಶಾಪದಿಂದ ಕಪಾಲಭಿಕ್ಷಣಭಕ್ಷಣಾದಿಗಳೆಂಬ ಆಪತ್ತು ಬರಲು ಅದನ್ನು ಹೋಗಲಾಡಿಸಿದ ಸ್ವಾಮಿ ನೆಲಸಿರುವ ಕ್ಷೇತ್ರವನ್ನು ಇದು ಹೋಲುತ್ತದೆ. ಮಾವಿನ ಹಣ್ಣು ನಯವಾದ ಮರಳಿನ ಮೇಲೆ ಬೀಳಲು ಅದರ ಮೇಲೆ ಮಕ್ಕಲು ಬಂದು ಸೇರಲು ನೋಡುವುದಕ್ಕೆ ಹಣ್ಣುಗಳನ್ನು ಹುದುಗಿಸಿಟ್ಟ ಹಾಗೆ ಕಾಣುತ್ತದೆಯಂತೆ. ಅಂಥ ಸುಂದರವಾದ ಕ್ಷೇತ್ರ ಈ ಕೂಡಲೂರು.

**ಕರುಂದಣ್ ಕಡಲುಂ ಮಲೈಯುಂ ಉಲಹುಂ**
**ಅರುಂಡುಂ ಅಡಿಹಳ್ ಅಮರುಂ ಊರ್‌ಪೋಲ್**
**ಪೆರುಂದಣ್ ಮುಲ್ಲೈ ಪಿಳ್ಳೈಯೋಡಿ**
**ಕುರುಂದಂ ತಟುವುಂ ಕೂಡಲೂರೇ** ॥೭॥

(ಕರುಂತಣ್ ಕಡಲುಂ) ಕಪ್ಪಾಗಿಯೂ ತಂಪಾಗಿಯೂ ಇರುವ ಸಾಗರಗಳನ್ನೂ (ಮಲೈಯುಂ) ಪರ್ವತಗಳನ್ನೂ (ಉಲಹುಂ) ಲೋಕಗಳನ್ನೂ (ಅರುಂದುಂ) ಪ್ರಲಯ ಕಾಲದಲ್ಲಿ ನುಂಗಿದ (ಅಡಿಹಳ್ ಅಮರುಂ ಊರ್‌ಪೋಲ್)

ಸ್ವಾಮಿಯೂ ನಿತ್ಯವಾಸ ಮಾಡುವ ಜಾಗದಂತಿದೆ—(ಪೆರುತಣ್) ಪುಷ್ಟ ವಾಗಿಯೂ ತಂಪಾಗಿಯೂ ಇರುವ (ಮುಲ್ಲೈಪಿಳ್ಳೈ) ಮುಲ್ಲೈಗಿಡದ ಬಳ್ಳಿಯು (ಓಡಿ) ಹರಡಿಕೊಂಡು (ಕುರುಂದುಂ ತಟುವುಂ) ಕುರುಂದ ವೃಕ್ಷವನ್ನು ಬಳಸಿಕೊಂಡಿರುವಂತಹ [ಕೂಡಲೂರ್] ಕೂಡಲೂರ್ ಕ್ಷೇತ್ರ.

ಮಣ್ಣು, ಕಲ್ಲು ಆದ ಲೋಕವನ್ನೆಲ್ಲಾ ತನ್ನ ಸೌಕುಮಾರ್ಯವನ್ನೂ ಎಣಿಸದೆ ತನ್ನ ಹೊಟ್ಟೆಯೊಳಗಿಟ್ಟುಕೊಂಡು ರಕ್ಷಿಸಿದ ಮಹೋಪಕಾರವನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಕಪ್ಪು ಬಣ್ಣ ಹೊಂದಿ ಶ್ರಮಹರವಾಗಿದ್ದ ಕಡಲನ್ನೂ ಭೂಮಿಯ ಮೇಲೆ ಮೊಳೆ ಹೊಡೆದಂತೆ ನಿಂತಿರುವ ಪರ್ವತಗಳನ್ನೂ ಮತ್ತು ಲೋಕಗಳನ್ನೂ ಅವುಗಳ ಕಟ್ಟಳೆ ವ್ಯತ್ಯಾಸವಾಗದಂತೆ ತನ್ನ ಉದರ ದಲ್ಲಿಟ್ಟುಕೊಂಡ ಆಶ್ಚರ್ಯಚೇಷ್ಟಿತನವನು. ಸಮುದ್ರ ಅಳ್ಳಾಡದೆ, ಬೆಟ್ಟ ಚಲಿಸದೆ, ಲೋಕವೂ ಹೇಗಿತ್ತೋ ಹಾಗೆಯೇ ಇರುವಂತೆ ಅವನು ತನ್ನ ಹೊಟ್ಟೆಯೊಳಗೆ ರಕ್ಷಿಸಿದ ಆ ಸರ್ವಾಧಿಕ. ಇನ್ನೂ ಇಂಥ ಆಪತ್ತುಗಳನ್ನು ಹೋಗಲಾಡಿಸಿ ರಕ್ಷಿಸುವುದಕ್ಕಾಗಿ ಅವನು ನೆಲೆಸಿರುವ ದಿವ್ಯಕ್ಷೇತ್ರ ಇದು.

ಕಲ್ಲೈವಾಟ್ ಪಿಣ್ಯೊಡು ಅಣ್ಯೆಯುಂ ತಿರುನೀರ್
ಮಲ್ಲೈವಾಟ್ ಎನ್ದೈ ಮರುವುಂ ಊರ್‌ಪೋಲ್
ಇಲ್ಲೈತಾಟ್ ತೆಂಗಿನ್ ಮೇಲ್ ನಿನ್ರ ಇಳನೀರ್
ಕುಲ್ಲೈ ತಾಟ್ ಕಿಡಂಗಿನ್ ಕೂಡಲೂರೇ ॥೮॥

(ಕಲ್ಲೈ) ಕೃಷ್ಣಸಾರಂಗಗಳು (ಪಿಣ್ಯೊಡು) ಹೆಣ್ಣು ಜಿಂಕೆಗಳೊಡನೆ (ಅಣ್ಯೆ ವಾಟುಂ) ಸೇರಿಬಾಳುತ್ತಿರುವಂತಹ (ತಿರುನೀರ್‌ಮಲ್ಲೈವಾಟ್) ತಿರುನೀರ್‌ಮಲ್ಲೆ ಯಲ್ಲಿ ಬಾಳುವ (ಎಂದೈಮರುವುಂ) ನಮ್ಮ ಸ್ವಾಮಿಯು ಹೊಂದಿಕೊಂಡು ಇರುವಂತಹ (ಊರ್‌ಪೋಲ್) ದಿವ್ಯದೇಶದಂತೆ (ಇಲ್ಲೈತಾಟ್) ಮಟ್ಟೆಗಳು ಹರಡಿಕೊಂಡಿರುವ (ತೆಂಗಿನ್ ಮೇಲ್‌ನಿನ್ರ) ತೆಂಗಿನ ಮರಗಳ ಮೇಲಿರುವ (ಇಳನೀರ್‌ಕುಲ್ಲೈ) ಎಳನೀರಿನ ಗೊನೆಗಳು (ತಾಟ್) ಭಾರದ ಕಾರಣ ಒರಗಿ ಕೊಂಡಿರುವಂತಹ (ಕಿಡಂಗಿನ್) ನೀರಿನ ನೆಲೆಗಳನ್ನುಳ್ಳ (ಕೂಡಲೂರ್) ಕೂಡಲೂರ್‌ಕ್ಷೇತ್ರ ಇರುತ್ತಿದೆ.

ಕೃಷ್ಣಸಾರಂಗಗಳು ತಮ್ಮ ತಮ್ಮ ದಯಿತೆಯರಾದ ಹೆಣ್ಣು ಜಿಂಕೆಗಳೊಡನೆ ಸಂಶ್ಲೇಷಿಸಿ ಬಾಳುವಂತಹ ತಿರುನೀರ್‌ಮಲ್ಯೆಯಲ್ಲಿ ತನ್ನ ಆನಂದದೊಡನೆ ಇದ್ದುಕೊಂಡು ನನ್ನನ್ನು ದಾಸನನ್ನಾಗಿ ಮಾಡಿಕೊಂಡು ನನ್ನ ಮೇಲೆ ಕನಿಕರದಿಂದ ನನ್ನ ಹೃದಯವನ್ನೇ ತನ್ನ ಊರನ್ನಾಗಿ ಮಾಡಿಕೊಂಡ ಆ ಸ್ವಾಮಿಯ ಊರಿನಂತೆ ಈ ದಿವ್ಯಕ್ಷೇತ್ರ ಶೋಭಿಸಿದೆ. ತೆಂಗಿನ ಮರಗಳ ಮೇಲಿರುವ ಎಳನೀರು ಗೊನೆಗಳು ಭಾರದಿಂದ ಬಾಗಿ ನೀರಿನ ನೆಲೆಗಳ ಮೇಲೆ ಒರಗಿಕೊಂಡಿರುವುದನ್ನು ನೋಡಿದರೆ ಆ ನೀರಿನ ನೆಲೆಗಳನ್ನು ಎಳನೀರುಗಳಿಂದ ತುಂಬಿ ಮೇಲೆ ತೆಂಗಿನ ಗರಿಗಳನ್ನು ಮುಚ್ಚಿಮರೆಮಾಡಿದ ಹಾಗೆ ಕಂಡುಬರುತ್ತದೆಯಂತೆ.

**ಪೆರುಹುಕಾದಲ್ ಅಡಿಯೇನುಳ್ಳಂ**
**ಉರುಹ ಪುಹುನ್ದ ಒರುವರ್ ಊರ್‌ಪೋಲ್**
**ಅರುಹು ಕೈತೈ ಮಲರ ಕೆಂಡೈ**
**ಕುರುಕು ಎನ್ರು ಅಂಜುಂ ಕೂಡಲೂರೇ** ॥೯॥

(ಪೆರುಹುಕಾದಲ್) ವೃದ್ಧಿಯಾಗುತ್ತಿರುವ ಆಶೆಯುಳ್ಳವನಾದ (ಅಡಿಯೇನ್ ಉಳ್ಳಂ) ನನ್ನ ಮನಸ್ಸು (ಉರುಹ) ಕರಗಿಹೋಗುವಂತೆ (ಪುಹುಂದ ಒರುವರ್) ಒಳಗೆ ಪ್ರವೇಶಿಸಿರುತ್ತಿರುವ ವಿಲಕ್ಷಣರಾದವರ (ಊರ್‌ಪೋಲ್) ದಿವ್ಯದೇಶದಂತೆ (ಅರುಹುಕೈದೈ) ಸಮೀಪದಲ್ಲಿ ತಾಳೆಗಿಡಗಳು (ಮಲರ) ಹೂಬಿಟ್ಟಿರಲು ಅದನ್ನು ಕಂಡು (ಕೆಂಡೈ) ಕೆಂಡೈ ಮೀನುಗಳು (ಕುರುಕು ಎನ್ರು ಅಂಜುಂ) ತಮ್ಮನ್ನು ಹಿಡಿದುಕೊಳ್ಳಲು ಬಂದ ನಾರೈಪಕ್ಷಿಗಳು ಎಂದು ಅಂಜುವಂತಹ (ಕೂಡಲೂರ್) ಕೂಡಲೂರ್ ದಿವ್ಯಕ್ಷೇತ್ರವು ಇರುತ್ತಿದೆ.

ಒಂದೊಂದು ದಿನವೂ ಸಂದಂತೆ ಅವನಲ್ಲಿ ಆಶೆಯೂ ವರ್ಧಿಸುತ್ತಲೇ ಇರುವ ನನ್ನ ಮನಸ್ಸು ಕರಗಿ ಹೋಗುವಂತೆ ಅದರಲ್ಲಿ ಪ್ರವೇಶಿಸಿದ ಅದ್ವಿತೀಯನಾದ ಸ್ವಾಮಿ ಇರುತ್ತಿರುವ ದೇಶದಂತೆ ಈ ದಿವ್ಯಕ್ಷೇತ್ರ ಇದೆ. ಕೆಂಡೈಮೀನು ತಾಳೆಹೂವನ್ನು ನೋಡಿ ನಾರೈ ಎಂದು ಭಯಪಡುವುವಂತೆ. ನಾರೈಗೂ ತಾಳೆ ಹೂವಿಗೂ ಇರುವ ಸಾದೃಶ್ಯದ ಕಾರಣ ಭಯ ಹೋಗುವುದಿಲ್ಲ. ಇವೆರಡೂ ನಿತ್ಯವಾಗಿ ಅಲ್ಲಿರುವುದರಿಂದ ಭಯವೂ ನಿತ್ಯವಾಗಿಯೇ ಇರುವಂಥದಾಗಿದೆಯಂತೆ.

ಕಾವಿಪ್ಪೆರುನೀರ್‌ವಣ್ಣನ್ ಕಣ್ಣನ್
ಮೇವಿ ತಿಹಳುಂ ಕೂಡಲೂರ್‌ಮೇಲ್
ಕೋವೈತ್ತವಿಟಾಲ್ ಕಲಿಯನ್ ಶೊನ್ನ
ಪಾವೈಪಾಡ ಪಾವಂ ಪೋಮೇ ॥೧೦॥

(ಕಾವಿ) ಕನ್ನೈದಿಲೆಯಹಾಗೆಯೂ (ಪೆರುನೀರ್) ಕಡಲಿನಂತೆಯೂ (ವಣ್ಣನ್) ಬಣ್ಣವನ್ನುಳ್ಳ (ಕಣ್ಣನ್‌ಮೇವಿ ತಿಹಳುಂ) ಪರಮಾತ್ಮನು ನೆಲೆಸಿರುವುದರಿಂದ ಪ್ರಕಾಶಿಸುವ (ಕೂಡಲೂರ್ ಮೇಲ್) ಕೂಡಲೂರಿನ ವಿಷಯವಾಗಿ (ಕಲಿಯನ್) ತಿರುಮಂಗೈಆಳ್ವಾರ್ ಅವರು (ಕೋವೈತವಿಟಾಲ್) ಸಲಕ್ಷಣವಾದ ತಮಿಳಿನಲ್ಲಿ (ಶೊನ್ನ) ಅನುಗ್ರಹಿಸಿದ (ಪಾವೈಪಾಡ) ಈ ಪಾಶುರಗಳನ್ನು ಹಾಡಿದರೆ (ಪಾವಂಪೋಮ್) ಪಾಪಗಳು ತೊಲಗಿ ಹೋಗುವುವು.

ಇಂದೀವರದಲಶ್ಯಾಮನೂ, ಸಾಗರವರ್ಣನೂ ಆದ ಶ್ರೀಕೃಷ್ಣನು ಮನಸಾರೆ ಒಲಿದು ನೆಲಸಿ ಉಜ್ವಲನಾಗಿ ಪ್ರಕಾಶಿಸುತ್ತಿರುವ ತಿರುಕ್ಕೂಡಲೂರ್ ಕ್ಷೇತ್ರವನ್ನು ಕುರಿತು ಆಳ್ವಾರ್‌ರವರು ಹಾಡಿದ ಈ ಪಾಶುರಗಳನ್ನು ಹಾಡಿದರೆ ಉಪಾಯೋಪೇಯ ಪ್ರತಿಬಂಧಕಗಳಾದ ಪಾಪಗಳೆಲ್ಲಾ ನಾಶವಾಗಿ ಹೋಗುವುವು. ಇದರಲ್ಲಿ ಸಂದೇಹವೇ ಇಲ್ಲ. 'ಹಾಲು ಕುಡಿದರೆ ನೋವು ಹೋಗುತ್ತೆ'—ಎಂದು ಹೇಳುವವರಂತೆ ಆಳ್ವಾರ್ ಇಲ್ಲಿ ಹೇಳುತ್ತಾರೆ.

---

ಐದನೆಯಪತ್ತು—ಮೂರನೆಯ ತಿರುಮೊಳಿ

# 'ವೆನ್ರಿಮಾಮುಉ'

## ಪ್ರವೇಶ

ತಮ್ಮ ಹೃದಯದೊಳಗೆ ಆ ಸರ್ವೇಶ್ವರನು ಪ್ರವೇಶಿಸಿ ತಮಗೆ ಉಪಕಾರ ಮಾಡಿದುದನ್ನು ಅನುಸಂಧಾನ ಮಾಡಿ ಹೃಷ್ಟರಾದರು. ಅಂಥ ಸ್ಥಿತಿ ಸಾರ್ಥಕವಾದ ಲಾಭವಾಗಬೇಕಾದರೆ ಅವನ ಪಾದಗಳಲ್ಲಿ ಸ್ವರೂಪಾನುರೂಪವಾದ

ಕೈಂಕರ್ಯವನ್ನು ಮಾಡಬೇಕಷ್ಟೇ ? ಅದು ಕೂಡಲೇ ಲಭಿಸದ ಕಾರಣ ಮನಸ್ಸಿಗೆ ವೇದನೆ ಆಯಿತು. ಆದರಿಂದ ನೊಂದು ನಿನ್ನ ಪ್ರಾಪ್ತಿಗೆ ಪ್ರತಿಬಂಧಕವಾದುದನ್ನು ಕಳೆದುಹಾಕಿ ನಿನ್ನ ಪಾದಸೇವೆಯನ್ನು ನಾನು ಮಾಡುವುದಕ್ಕಾಗುವಂತೆ ಅನುಗ್ರಹಿಸಬೇಕೆಂದು ಬೇಡುತ್ತಾರೆ.

ವೆನ್ರಿಮಾಮಟು ವೇನ್ದಿ ಮುನ್ ಮಣ್ಮಿಶೈ
ಮನ್ನರೈ ಮೂವೆಟುಕಾಲ್
ಕೊನ್ರ ತೇವ ನಿನ್ಕುರೈಕಟಿಲ್ ತೊಟುವದು
ಓರ್ವಹೈ ಎನಕ್ಕರುಳ್ಪುರಿಯೇ
ಮನ್ರಿಲ್ ಮಾಂಪೊಟಿಲ್ ನುಟೈತನ್ದು ಮಲ್ಲಿಕೈ
ಮೌವಲಿನ್ಪೋದು ಅಲರ್ತ್ತಿ
ತೆನ್ರಲ್ ಮಾಮಣಮ್ ಕಮಟಿ
ತರವರು ತಿರುವೆಳ್ಳರೈ ನಿನ್ರಾನೇ ॥೧॥

(ತೆನ್ರಲ್) ತಂಕಣಗಾಳಿಯು (ಮನ್ರಿಲ್ ಮಾಂಪೊಟಿಲ್) ಅಕ್ಕಪಕ್ಕದಲ್ಲಿರುವ ಮಾವಿನ ತೋಪುಗಳಲ್ಲಿ (ನುಟೈತನ್ದು) ನುಸುಳಿ (ಮಲ್ಲಿಕೈಪೋದು) ಮಲ್ಲಿಗೆ ಹೂಗಳನ್ನೂ (ಮೌವಲಿನ್ಪೋದು) ಮೊಲ್ಲೆಹೂಗಳನ್ನು (ಅಲರ್ತ್ತಿ) ಅರಳುವಂತೆಮಾಡಿ (ಮಾಮಣಮ್ ಕಮಟ್ತರುವರು) ಗಾಢವಾದಪರಿಮಳವು ಹರಡುವಂತೆ ಸುಳಿದಾಡುವಂತಹ (ತಿರುವೆಳ್ಳರೈ) ತಿರುವೆಳ್ಳರೈಕ್ಷೇತ್ರದಲ್ಲಿ (ನಿನ್ರಾನೇ) ನೆಲಸಿ ಅನುಗ್ರಹಮಾಡುತ್ತಿರುವ ಭಗವಂತನೇ, (ಮುನ್) ಹಿಂದೊಂದು ಕಾಲದಲ್ಲಿ (ವೆನ್ರಿ) ಜಯಶೀಲವಾದ (ಮಾಮಟು) ದೊಡ್ಡ ಕೊಡಲಿಯನ್ನು (ಏನ್ದಿ) ಆಯುಧವನ್ನಾಗಿ ಧರಿಸಿ (ಮಣ್ಮಿಶೈಮನ್ನರೈ) ಭೂಮಿಯಮೇಲಿದ್ದ ಅರಸರುಗಳನ್ನು (ಮೂವೆಟುಕಾಲ್) ಇಪ್ಪತ್ತೊಂದುಸಲ (ಕೊನ್ರದೇವ) ಕೊಂದ ದೇವನೇ, (ನಿನ್ಕುರೈಕಟಿಲ್) ನಿನ್ನ ಆಭರಣಗಳ ಶಬ್ದದಿಂದ ಕೂಡಿದ ಪಾದಗಳನ್ನು (ತೊಟುವದು ಓರ್ವಹೈ) ಸೇವಿಸುವ ಭಾಗ್ಯ ಪಡೆಯುವ ಒಂದುಪಾಯವನ್ನು (ಎನಕ್ಕು ಅರುಳ್ಪುರಿ) ನನಗೆ ಅನುಗ್ರಹಿಸಬೇಕು.

ಭೂಮಿಗೆ ರಾಜರುಗಳಿಂದ ಬಂದ ಪೀಡೆಯನ್ನು ಹೋಗಲಾಡಿಸಿ ರಕ್ಷಿಸಲು ಪಟ್ಟಷ್ಟು ಶ್ರಮ ಪಡಬೇಕೋ ನನ್ನ ಪ್ರತಿಬಂಧಕವನ್ನು ಕಳೆದು ನನ್ನಿಂದ ಸೇವೆಯನ್ನು ಪಡೆದುಕೊಳ್ಳುವುದಕ್ಕೆ ? ವಿರೋಧಿಗಳನ್ನು ಹೋಗ

ಲಾಡಿಸಲು ಈಗತಾನೇ ನೀನು ಮೊದಲು ಮಾಡಿಲ್ಲವಷ್ಟೇ? ಅಕುಂಠವಾದ ಪರಶುವನ್ನು ಧರಿಸಿ ದುಷ್ಟಕ್ಷತ್ರಿಯರನ್ನು ನಿರಸನ ಮಾಡಿದುದು ಇತರರಿಗೆ ಉಪಕರಿಸುವುದಕ್ಕಾಗಿಯೇ ಅಲ್ಲವೇ? 'ವಿಜ್ವರಃ ಪ್ರಮುಮೋದ ಹ' ಎಂದಂತೆ ಅದರಿಂದ ನೀನು ಪ್ರಕಾಶಯುಕ್ತನಾಗಿ ತೋರಿದೆಯಲ್ಲವೇ? 'ಈಗ ನಿಮಗೆ ಆಗಬೇಕಾದುದೇನು?' –ಎಂದು ಅವನು ಕೇಳಿದರೆ ಹೇಳುತ್ತಾರೆ– 'ಆಭರಣಗಳಿಂದ ಅಲಂಕೃತವಾಗಿ ಅವುಗಳಿಂದ ಮಧುರವಾಗಿ ಧ್ವನಿಸುತ್ತಿರುವ ನಿನ್ನ ಶ್ರೀಪಾದಗಳಲ್ಲಿ ನನ್ನ ಸ್ವರೂಪಾನುರೂಪವಾದ ಕೈಂಕರ್ಯವನ್ನು ಮಾಡುವಂತೆ ಆಗುವುದಕ್ಕಾಗಿ ನನಗೊಂದು ಪ್ರಕಾರವನ್ನು ದಯೆಮಾಡಿ ತೋರಬೇಕು '–ಎಂದು.

ಆ ಊರಿನಲ್ಲಿರುವ ಪದಾರ್ಥಗಳೆಲ್ಲವೂ ಪರಾರ್ಥವಾಗಿಯೇ ಇರುವುವಂತೆ. ಇತರರಿಗಾಗಿ ಇರುವುದೇ ಅವುಗಳಿಗೆ ಹಿರಿಮೆಯಂತೆ. ಸುತ್ತಲೂ ಇರುವ ಮಹಾಮರಗಳಲ್ಲಿ ಹೂವು ಹಣ್ಣುಗಳು ತುಂಬಿರುವುವು. ಅವುಗಳೊಳಗೆ ನುಗ್ಗಿ ತೀಡಿದ ಮಂದಮಾರುತ ಅವುಗಳ ಪರಿಮಳ ತೆಗೆದುಕೊಂಡು, ಮಲ್ಲಿಗೆ ಮೊಲ್ಲೆಗಳನ್ನು ಅರಳಿಸಿ, ಅವುಗಳ ಪರಿಮಳವನ್ನೂ ತೆಗೆದುಕೊಂಡು ಎಲ್ಲೆಲ್ಲಿಯೂ ಆ ಪರಿಮಳವನ್ನು ಹರಡುತ್ತಾ ಬೀಸುತ್ತಿರುವುದು. ಆ ಊರಿನವರು ತಮ್ಮ ಅಭಿಮತ ಸಿದ್ಧಿಗೆ ಬೇರೆ ಎಲ್ಲಿಗೂ ಹೋಗಬೇಕಾಗಿಲ್ಲವಂತೆ.

**ಪಶ್ಶೈಯಿಲ್ ನಾನ್‌ಮರ್ೈ ಕೆಡುತ್ತ ಅಮ್ಮಲರ್ ಅಯಕ್ಕ್ಕು**
**ಅರುಳಿ ನಿನ್ ಪರಿಮುಹಮಾಯ್**
**ಇಶೈಕೊಳ್ ವೇದನೂಲ್ ಎನ್ರಿವೈ ಪಯಂದವನೇ**
**ಎನಕ್ಕು ಅರುಳ್ ಪುರಿಯೇ**
**ಉಯರ್‌ಕೊಳ್ ಮಾದವಿ ಪ್ಪೋದೊಡುಲಾವಿಯ**
**ಮಾರುತಮ್ ವೀದಿಯಿನ್ ವಾಯ್**
**ತಿಶೈ ಎಲ್ಲಾಂ ಕಮುಳುಂ ಪೊಳಿಲ್ ಶೂಟ್**
**ತಿರುವೆಳ್ಳರೈ ನಿನ್ರಾನೇ ॥೨॥**

(ಉಯರ್‌ಕೊಳ್ ಮಾದವಿ) ಉದ್ದವಾಗಿ ಬೆಳೆದ ಕುರುಕ್ಕತ್ತಿಮರಗಳಲ್ಲಿರುವ (ಪ್ಪೋದೊಡು ಉಲಾವಿಯ) ಹೂಗಳೊಡನೆ ಸಂಶ್ಲೇಷಿಸಿದ (ಮಾರುತಂ) ಮಂದಮಾರುತವು (ವೀದಿಯಿನ್‌ವಾಯ್) ಬೀದಿ ಬೀದಿಗಳಲ್ಲಿ ಬೀಸುವಾಗ

(ತಿಶೈ ಎಲ್ಲಾಂ ಕಮುಟುಂ) ದಿಕ್ಕುಗಳಲ್ಲೆಲ್ಲಾ ಪರಿಮಳವು ಪಸರಿಸುವಂಥದೂ, (ಪೊಟಿಲ್‌ಶೂಟ್) ತೋಪುಗಳಿಂದ ಸುತ್ತುವರಿಯಲ್ಪಟ್ಟಿರುವುದೂ ಆದ (ತಿರುವೆಳ್ಳರೈನಿನ್ರಾನೇ) ತಿರುವೆಳ್ಳರೈ ಕ್ಷೇತ್ರದಲ್ಲಿ ನೆಲಸಿರುವ ಸ್ವಾಮಿಯೇ, (ಮುನ್) ಹಿಂದೊಂದು ಕಾಲದಲ್ಲಿ (ಪಶೈಇಲ್) ಯಾವ ದೋಷವೂ ಇಲ್ಲದ (ನಾಲ್‌ಮರೈ ಕೆಡುತ್ತ) ನಾಲ್ಕು ವೇದಗಳನ್ನೂ ಹೋಗಲಾಡಿಸಿಕೊಂಡು ದುಃಖಿಸುತ್ತಿದ್ದ (ಅಮಲರ್ ಅಯರ್ಕ್ಕು) ಕಮಲಜನಾದ ಬ್ರಹ್ಮದೇವನಿಗೆ [ಅರುಳಿ] ಕೃಪೆಮಾಡಿ (ಪರಿಮುಕಮ್‌ಆಯ್) ಹಯಗ್ರೀವಾವತಾರಿಯಾಗಿ (ಇಶೈಕೊಳ್ ವೇದನೂಲ್ ಇವ್ವೈ ಎನ್ರು) 'ಸ್ವರಪ್ರಧಾನವಾದ ವೇದಶಾಸ್ತ್ರಗಳು ಇವುಗಳೇ' ಎಂದು ಹೇಳಿ (ಪಯಂದವನೇ) ಅವುಗಳನ್ನು ಅವನಿಗೆ ಉಪದೇಶ ಮಾಡಿದವನೇ, (ಎನಕ್ಕು ಅರುಳ್‌ಪುರಿ) ನನ್ನ ಮೇಲೆ ಕೃಪೆಮಾಡಬೇಕು.

ಅಧಿಕಾರಿ ಪುರುಷನಾದ ಬ್ರಹ್ಮನಿಗೆ ಕಣ್ಣನ್ನು ಕೊಟ್ಟಹಾಗೆ ನೀನು ವೇದ ಪ್ರದಾನ ಮಾಡಲಿಲ್ಲವೋ ? ಆ ವೇದದಲ್ಲಿ ಪ್ರತಿಪಾದ್ಯವಾದ ಕೈಂಕರ್ಯದಲ್ಲಿ ಆಶೆಪಡುವ ನನಗೆ ಅದನ್ನು ನೀನು ಅನುಗ್ರಹಿಸಬೇಕು.

ವಿಪ್ರಲಂಭಾದಿ ದೋಷಗಳಿಲ್ಲದ ನಾಲ್ಕುವೇದಗಳನ್ನು 'ಧಾತಾ ಯಥಾ ಪೂರ್ವಮಕಲ್ಪಯತ್'-ಎಂದು ಹೇಳಿದಂತೆ ಬ್ರಹ್ಮದೇವನಿಗೆ ಸ್ವಾಮಿ ತಂದು ಕೊಟ್ಟ. ಸ್ವಾಮಿಯು ಹಯಗ್ರೀವರೂಪವನ್ನೆತ್ತಿ ಬಂದು ಉಪದೇಶಿಸಿದ ಅವನಿಗೆ ವೇದಶಾಸ್ತ್ರ, ಇತಿಹಾಸ ಪುರಾಣಗಳನ್ನೆಲ್ಲ. ಪರಮಭೋಗ್ಯವಾದ ತಿರುವೆಳ್ಳರೈ ಕ್ಷೇತ್ರದಲ್ಲಿರುವ ಸ್ವಾಮಿಯೇ, ನನ್ನ ಮೇಲೆ ನೀನು ದಯೆತೋರಿ ನಾನು ನಿನ್ನ ಕೈಂಕರ್ಯಮಾಡುವಂತೆ ಅನುಗ್ರಹಿಸಬೇಕು.

**ವೆಯ್ಯನಾಯ್‌ ಉಲಹೇಟುಡನ್ ನಲಿನ್ದವನ್**
**ಉಡಲಹಂ ಇರುಪಿಳವಾ**
**ಕೈಯಿಲ್ ನೀಳ್‌ಉಹಿರ್‌ಪಡೈ ಅದು ವಾಯ್‌ತ್ತವನೇ**
**ಎನಕ್ಕು ಅರುಳ್‌ಪುರಿಯೇ**
**ಮೈಯಿನಾರ್‌ತರು ವರಾಲ್‌ಇನಂ ಪಾಯ**
**ವಣ್‌ತಡತ್ತಿಡೈ ಕಮಲಂಗಳ್**
**ತೆಯ್‌ವನಾರುಂ ಒಣ್‌ಪೊಯ್‌ಹೈಹಳ್ ಶೂಟ್**
**ತಿರುವೆಳ್ಳರೈ ನಿನ್ರಾನೇ ॥೩॥**

(ಮ್ಮೈಯಿಂನ್ ಆರ್ತರುಂ) ಅಂಜನದಂತೆ ಕಪ್ಪು ಬಣ್ಣ ಹೊಂದಿರುವ (ವರಾಲ್ ಇನಂ) ವರಾಲ್ ಮೀನುಗಳ ಕೂಟಗಳು (ವಣ್‌ತಡತ್ತಿಡೈ) ಸುಂದರವಾದ ತಟಾಕಗಳಲ್ಲಿ (ಪಾಯಂ) ಚಿಮ್ಮಿನಲಿಯುತ್ತಿರುವಂಥದೂ, (ಕಮಲಂಗಳ್) ತಾವರೆಹೂಗಳು (ತೆಯ್‌ವಂನಾರುಂ) ದಿವ್ಯವಾದ ಗಂಧವನ್ನು ಹರಡುತ್ತಿರು ವಂಥದೂ, (ಒಣ್‌ಪೊಯ್‌ಹೈಹಳ್) ಸುಂದರವಾದ ಸರೋವರಗಳಿಂದ (ಶೂಟ್) ಸುತ್ತುವರಿಯಲ್ಪಟ್ಟಿರುವುದೂ ಆದ (ತಿರುವೆಳ್ಳರೈನಿನ್ರಾನೇ) ತಿರುವೆಳ್ಳರೈ ಕ್ಷೇತ್ರದಲ್ಲಿ ನೆಲಸಿರುವ ಸ್ವಾಮಿಯೇ, (ವೆಯ್ಯನಾಯ್) ಬಹಳ ಕ್ರೂರನಾಗಿದ್ದುಕೊಂಡು (ಉಲಹುಏಟ್ ಉಡನ್ ನಲಿಂದವನ್) ಸಪ್ತಲೋಕ ಗಳನ್ನೂ ಒಟ್ಟಿಗೆ ಹಿಂಸಿಸಿಕೊಂಡಿದ್ದ ಹಿರಣ್ಯಕಶಿಪುವಿನ (ಉಡಲಹಂ) ಎದೆಯು (ಇರುಪಿಳವು ಆ) ಎರಡು ಹೋಳುಗಳಾಗುವಂತೆ (ಕೈಯಿಲ್) ದಿವ್ಯಹಸ್ತಗಳಲ್ಲಿ (ನೀಳ್‌ಉಹಿರ್‌ಪಡೈ ಅದು ವಾಯ್‌ತ್ತವನೇ) ನೀಳವಾಗಿರುವ ನಖಗಳನ್ನೇ ಆಯುಧವನ್ನಾಗಿ ಹೊಂದಿದವನೇ, (ಎನಕ್ಕು ಅರುಳ್‌ಪುರಿ) ನನ್ನ ಮೇಲೆ ದಯೆ ತೋರಬೇಕು.

ಬ್ರಹ್ಮದೇವನಿಗೆ ಅಪೇಕ್ಷಿತವಾದ ವೇದವನ್ನು ಕೊಡುವುದಕ್ಕಾಗಿ ಹಯ ಗ್ರೀವನಾಗಿ ಅವತರಿಸಿದುದು ಮಾತ್ರವೇ ಅಲ್ಲ. ಒಬ್ಬ ಬಾಲಕನ ವಿರೋಧಿ ಯನ್ನು ಕಳೆದು ಹಾಕುವುದಕ್ಕಾಗಿ ನೃಸಿಂಹನಾಗಿ ಅವತರಿಸಿ ನಖಾಗ್ರದಿಂದಲೇ ವಿರೋಧಿನಿರಸನ ಮಾಡಿದವನಲ್ಲವೇ ನೀನು ! ಸಕಲಲೋಕಗಳನ್ನು ಒಂದೇ ಕಾಲದಲ್ಲಿ ಹಿಂಸಿಸಿದ ಹಿರಣ್ಯಕಶಿಪುವಿನ ದೇಹ ಎರಡು ಹೋಳಾಗಿ ಹೋಗು ವಂತೆ ಉಗುರಿನಿಂದಲೇ ಸೀಳಿ ಹಾಕಿದ ಸ್ವಾಮಿ. ಸುದರ್ಶನ ಚಕ್ರದಿಂದ ಕೆಲಸ ಮಾಡುವುದಕ್ಕಾಗದಂತೆ ಅವನು ವರಗಳನ್ನು ಪಡೆದಿದ್ದ. 'ನನ್ನ ವಿರೋಧಿ ಯನ್ನೂ ಹೋಗಲಾಡಿಸಿ ಅನುಗ್ರಹಿಸಬೇಕು' ಎಂದು ಬೇಡಿದ್ದಾರೆ ಇಲ್ಲಿ.

ವಾನ್‌ಪರಿಉಹ ಮನ್ನರ್‌ತನ್ ಉಯಿರ್‌ಶೆಹ
ಐವರ್‌ಹಳ್ಕು ಅರಶಳಿತ್ತ
ಕಾಂಬಿನ್ ಆರ್ ತಿರುವೇಂಗಡಂ ಪೊರುಪ್ಪ
ನಿನ್‌ಕಾದಲೈ ಅರುಳ್ ಎನಕ್ಕು

ಮಾಂಪೊೞಿಲ್ ತಳಿರ್ ಕೋದಿಯ ಮಡಕ್ಕುಯಿಲ್
ವಾಯತ್ ಅದು ತುವರ್ಪ್ಪ ಎಯಿತ್ತ
ತೀಮ್ ಪಲಂಗನಿ ತೇನದು ನುಹರ್
ತಿರುವೆಳ್ಳರೈ ನಿನ್ರಾನೇ ॥೪॥

(ಮಾಂಪೊೞಿಲ್) ಮಾವಿನತೋಪುಗಳಲ್ಲಿ (ತಳಿರ್ಕೋದಿಯ) ಅವುಗಳ ಚಿಗುರುಗಳನ್ನು ಆಸ್ವಾದಿಸಿದ (ಮಡಕುಯಿಲ್) ಸುಂದರವಾದ ಕೋಗಿಲೆಗಳು (ವಾಯ್ ಅದು ತುವರ್ಪ್ಪಎಯ್‌ದ) ಆದರಿಂದ ತಮ್ಮ ಬಾಯಿ ಒಗಚಾಗಲು (ತೀಮ್ ಪಲಂಗನಿ) ಸಿಹಿಯಾದ ಹಲಸಿನ ಹಣ್ಣುಗಳಲ್ಲಿರುವ (ತೇನ್ ಅದು ನುಹರ್) ಮಧುವನ್ನು ಪಾನಮಾಡುವಂತಹ (ತಿರುವೆಳ್ಳರೈನಿನ್ರಾನೇ) ತಿರುವೆಳ್ಳರೈ ಕ್ಷೇತ್ರದಲ್ಲಿರುವವನೇ, (ಪಾಮ್‌ಪರಿ) ಭಾರತ ಯುದ್ಧದಲ್ಲಿ ಮೇಲೆ ಬಂದು ಬೀಳುವ ಕುದುರೆಗಳು (ಉಹ) ಸಾಯುವಂತೆಯೂ (ಮನ್ನರ್‌ತಮ್) ಶತ್ರುರಾಜರುಗಳ (ಉಯಿರ್‌ಶೆಹ) ಪ್ರಾಣಗಳು ನಾಶವಾಗುವಂತೆಯೂ ಮಾಡಿ (ಐವರ್‌ಹಳ್ಕು) ಪಂಚಪಾಂಡವರಿಗೆ (ಅರಶು ಅಳಿತ್ತ) ರಾಜ್ಯವನ್ನು ಕೊಟ್ಟು ಉಪಕರಿಸಿದವನೂ, (ಕಾಂಬಿನ್ ಆರ್) ಬಿದಿರುಮೆಳೆಗಳಿಂದ ತುಂಬಿರುವ (ತಿರುವೇಂಗಡಂ ಪೊರುಪ್ಪ) ತಿರುವೇಂಕಟಾದ್ರಿಯಲ್ಲಿ ಇರುವವನೂ ಆದ ಮಹಿಮಾಶಾಲಿಯೇ, (ನಿನ್‌ಕಾದಲೈ) ನಿನ್ನ ವಿಷಯವಾದ ಪರಮಭಕ್ತಿಯನ್ನು (ಎನಕ್ಕು ಅರುಳ್) ನನ್ನಲ್ಲುಂಟುಮಾಡಿ ನನ್ನನ್ನು ಅನುಗ್ರಹಿಸಬೇಕು,

ಭಕ್ತಾಗ್ರೇಸರನಾದ ಪ್ರಹ್ಲಾದಕುಮಾರನಿಗಾಗಿ ನೃಸಿಂಹರೂಪ ಧರಿಸಿದು ದಷ್ಟೇ ಅಲ್ಲ. ರಾಜ್ಯಾರ್ಥಿಗಳಾಗಿದ್ದ ಪಾಂಡವರಲ್ಲಿ ಪಕ್ಷಪಾತ ತೋರಿ, ದೌತ್ಯ ಸಾರಥ್ಯಾದಿಗಳನ್ನು ಮಾಡಿ ಅವರಿಗೆ ಅಪೇಕ್ಷಿತವಾದ ರಾಜ್ಯವನ್ನೂ ಕರುಣಿಸಿ ದನಪನು. ಅಷ್ಟೇ ಅಲ್ಲದೆ ದೃಷ್ಟವಾದ ಪ್ರಯೋಜನಗಳನ್ನು ಬಯಸುವವರಿಗೆ ಅವರವರ ಇಷ್ಟಗಳನ್ನು ಕೊಡಬೇಕೆಂದು ಶ್ರೀವೆಂಕಟಾಚಲದಲ್ಲಿ ನಿಂತು ಒದಗಿದ ವನಲ್ಲವೇ ನೀನು ? ನಿನ್ನ ಶ್ರೀಪಾದಗಳಲ್ಲಿ ಕೈಂಕರ್ಯವನ್ನು ಪಡೆದುಕೊಳ್ಳು ವುದಕ್ಕೆ ಪೂರ್ವಕ್ಷಣವರ್ತಿಯಾದ ಪರಮಭಕ್ತಿಯನ್ನು ನನಗೆ ನೀನು ಕರುಣಿಸ ಬೇಕು.

ವಾಣನೇಲ್ ಒಣ್‌ಕಣ್ ಮಡವರಲ್ ಮಣ್‌ಮಹಳ್
ಅಟುಂಗ ಮುನ್ನೀರ್ ಪರಪ್ಪಿಲ್
ಏನಮಾಹಿ ಅನ್ರು ಇರುನಿಲಂ ಇಡಂದವನೇ
ಎನಕ್ಕರುಳ್ ಪುರಿಯೇ
ಕಾನಮಾಮುಲ್ಲೈ ಕಟ್ಟೈಕ್ಕರುಂಬೀರಿ
ವೆಣ್‌ಮುರುವಲ್ ಶೆಯ್‌ದು ಅಲರ್‌ಹಿನ್ರ
ತೇನಿನ್ ವಾಯ್ ಮಲರ್ ಮುರುಹು ಉಹುಕ್ಕುಂ
ತಿರುವೆಳ್ಳರೈ ನಿನ್ರಾನೇ ॥೩॥

(ಕರುಂಬಕಟ್ಟೈವಿರಿ) ಕಬ್ಬಿನ ಜಲ್ಲೆಯ ತುದಿಯವರೆಗೂ ಹಬ್ಬಿ (ವೆಣ್‌ಮುರುವಲ್‌ಶೆಯ್‌ದು ಅಲರ್‌ಹಿನ್ರ) ಸುಂದರವಾದ ಮಂದಹಾಸವನ್ನು ಬೀರುವಂತೆ ಅರಳಿರುವ (ವಕಾಕಾನ ಮುಲ್ಲೈಮಲರ್) ದೊಡ್ಡ ಕಾಡುಮಲ್ಲಿಗೆ ಹೂಗಳು (ತೇನಿನ್‌ವಾಯ್) ದುಂಬಿಗಳ ಬಾಯಿಗಳಲ್ಲಿ (ಮುರುಹು) ಮಕರಂದವನ್ನು (ಉಹುಕ್ಕುಂ) ಹರಿಯಿಸಿ ಉಕ್ಕಿಸುವಂತಹ (ತಿರುವೆಳ್ಳರೈನಿನ್ರಾನೇ) ತಿರುವೆಳ್ಳರೈ ಕ್ಷೇತ್ರದಲ್ಲಿರುವವನೇ, (ವಾನಮೇಲ್) ಹಿರಿಮೆಯುಳ್ಳ ವೇಲಾಯುಧವನ್ನು ಹೋಲುವ (ಒಣ್‌ಕಣ್) ಸುಂದರವಾದ ಕಣ್ಣುಗಳನ್ನುಳ್ಳವಳೂ (ಮಡವರಲ್) ಸ್ತ್ರೀಯರಿಗೆ ತಕ್ಕುದಾದ ಗುಣಗಳನ್ನುಳ್ಳವಳೂ ಆದ (ಮಣ್‌ಮಹಳ್) ಭೂದೇವಿಯು (ಅಟುಂಗ) ಪ್ರಲಯ ಸಮುದ್ರದಲ್ಲಿ ಮುಳುಗಿಹೋಗಿರಲು (ಅನ್ರು) ಅಂದು (ಮುನ್ನೀರ್‌ಪರಪ್ಪಿಲ್) ಪ್ರಲಯ ಪಯೋಧಿಯ ಆ ಮಹಾ ಜಲದಲ್ಲಿ (ಏನಆಹಿ) ಮಹಾವರಾಹರೂಪಿಯಾಗಿ ಇಳಿದು (ಇರುನಿಲಂ ಇಡಂದವನೇ) ವಿಶಾಲವಾದ ಭೂಮಿಯನ್ನು ಅಂಡಭಿತ್ತಿಯಿಂದ ಬಿಡಿಸಿ ಮೇಲಕ್ಕೆ ತಂದವನೇ (ಎನಕ್ಕು ಅರುಳ್‌ಪುರಿ) ನನ್ನ ಮೇಲೆ ನಿನ್ನ ದಯೆಯನ್ನು ತೋರು.

'ದ್ರೌಪದ್ಯಾ ಸಹಿತಾಸ್ಸರ್ವೇ ನಮಶ್ಚಕ್ರುರ್ಜನಾರ್ದನಂ' ಎಂದಂತೆ ತನ್ನನ್ನು ಪ್ರಾರ್ಥಿಸಿದವರಿಗೆ ಇಷ್ಟಾರ್ಥಗಳನ್ನು ಅನುಗ್ರಹಿಸಿದ ಹಾಗೆ ತನ್ನನ್ನು ಅರ್ಥಿಸದೆ ಇದ್ದ ಭೂದೇವಿಯ ಆಪತ್ತನ್ನೂ ಹೋಗಲಾಡಿಸಿದವನಲ್ಲವೇ ನೀನು? ನನ್ನ ಮೇಲೆಯೂ ನೀನು ಅನುಗ್ರಹಮಾಡಬೇಕು. ವೇಲಾಯುಧದಂತೆ ದರ್ಶನೀಯವಾದ ನೇತ್ರಗಳನ್ನುಳ್ಳವಳೂ, ಕ್ಷಮೆ ಮೊದಲಾದ ಆತ್ಮಗುಣಗಳಿಂದ ಹಿರಿಮೆ ಹೊಂದಿದವಳೂ ಆದ ಭೂದೇವಿಯ ಆಪತ್ತನ್ನು ಕಳೆದು ಹಾಕಿದ

ನವನು. ನೀರಿಗೂ ಕೆಸರಿಗೂ ಜಂಗುಪ್ಸೆ ಪಡದಂತಹ ವರಾಹವೇಷವನ್ನು ಸ್ವಾಮಿ ಪರಿಗ್ರಹಿಸಿ ಅಂಡಭಿತ್ತಿಯಿಂದ ಭೂದೇವಿಯನ್ನು ಬಿಡಿಸಿ ಮೇಲೆ ತಂದ. ಪ್ರಾರ್ಥಿಸಲೂ ಆಗದೆ ಇದ್ದ ಭೂದೇವಿಯನ್ನು ರಕ್ಷಿಸಿದ ನಿನಗೆ ನನ್ನನ್ನು ರಕ್ಷಿಸುವುದು ಒಂದು ದೊಡ್ಡ ಕೆಲಸವೋ ?' ಊರಿನ ಸನಿಹದಲ್ಲಿ ಬೆಳೆದ ಕಾಡು ಮಲ್ಲಿಗೆ ಕಬ್ಬಿನ ಗದ್ದೆಯವರೆಗೂ ಹಬ್ಬಿ ಕಬ್ಬಿನ ಜಲ್ಲೆಯ ತುದಿಯನೂ ಮುಟ್ಟಿ ಅಲ್ಲಿ ಹೂನಗು ಚೆಲ್ಲುತ್ತಾ ವಿಕಸಿಸುವುದಂತೆ. ಮಧುಪಾನಕ್ಕಾಗಿ ದುಂಬಿಗಳು ಸಮೀಪಿಸುವಾಗಲೇ ಮಕರಂದವನ್ನು ಅವುಗಳ ಬಾಯಿಗೆ ಹರಿಯುವಂತೆ ಮಾಡುತ್ತವೆಯಂತೆ.

ಪೊಂಗು ನೀಣ್ಮುಡಿ ಅಮರರ್‌ಹಳ್ ತೊಟುದೆಟಿ
ಅಮುದಿನ್ಯೆ ಕೊಡುತ್ತಳಿಪ್ಪಾನ್
ಅಂಗುಓರ್ ಆಮೈಅದಾಹಿಯೆ ಆದಿ
ನಿನ್ನಡಿಮೈಯ್ಯೆ ಅರುಳೆನಕ್ಕು
ತಂಗು ಪೇಡೈಯೊಡು ಊಡಿಯೆ ಮದುಕರಂ
ಶೈಯಲಾರ್ ಕುಟಿಲಣೈವಾನ್
ತಿಂಗಳ್ ತೋಯ್‌ ಶೆನ್ನಿಮಾಡಂ ಶೆನ್ರು ಅಣೈ
ತಿರುವೆಳ್ಳರೈ ನಿನ್ರಾನೇ ॥೬॥

(ತಂಗು) ಹೂವಿನಲ್ಲಿ ತಂಗಿದ್ದ (ಪೇಡೈಯೊಡು) ಹೆಣ್ಣು ದುಂಬಿಯೊಡನೆ (ಊಡಿಯ) ಪ್ರಣಯ ಕಲಹ ಮಾಡಿದ (ಮದುಕರಂ) ಗಂಡು ದುಂಬಿ (ಶೈಯಲಾರ್) ಸ್ತ್ರೀಯರ (ಕುಟಿಲ್) ಮುಡಿಯನ್ನು (ಅಣೈವಾನ್) ಸೇರಿ ಅಲ್ಲಿ ಮರೆಯಾಗಿರುವುದಕ್ಕಾಗಿ (ತಿಂಗಳ್‌ತೋಯ್ ಶೆನ್ನಿ) ಚಂದ್ರಮಂಡಲದ ವರೆಗೆ ಹೋಗಿ ಅದನ್ನು ಮುಟ್ಟುವ ಶಿಖರಗಳನ್ನುಳ್ಳ (ಮಾಡಂಶೆನ್ರು ಅಣೈ) ಮಹಳಿಗೆಗಳಿಗೆ ಹೋಗಿ ಅಲ್ಲಿರುವಂತಹ (ತಿರುವೆಳ್ಳರೈ ನಿನ್ರಾನೇ) ತಿರುವೆಳ್ಳರೈ ಕ್ಷೇತ್ರದಲ್ಲಿರುವವನೇ, (ಪೊಂಗು) ಪ್ರಕಾಶಿಸುವ (ನೀಳ್‌ಮುಡಿ) ನೀಳವಾದ ಕಿರೀಟಗಳನ್ನುಳ್ಳ (ಅಮರರ್‌ಹಳ್ ತೊಟುದು ಎಟಿ) ದೇವತೆಗಳು ತನಗೆ ನಮಿಸಿ ಆಶ್ರಯಿಸಲು ಅವರಿಗೆ ಕನಿಕರಿಸಿ (ಅಮುದಿನ್ಯೆ ಕೊಡುತ್ತು ಅಳಿಪ್ಪಾನ್) ಅಮೃತವನ್ನು ತಂದು ಅನುಗ್ರಹಿಸುವುದಕ್ಕಾಗಿ (ಅಂಗು) ಆಗ (ಓರ್ ಆಮೈ ಅದು ಆಹಿಯ) ವಿಲಕ್ಷಣವಾದ ಕೂರ್ಮರೂಪಿಯಾಗಿ ಅವತರಿಸಿದ (ಆದಿ)

ಕಾರಣಭೂತನೇ, (ನಿನ್ ಅಡಿಮ್ಯೆಯ್ಯೆ ಎನಕ್ಕು ಅರುಳ್) ನಿನಗೆ ನಾನು ದಾಸನಾಗಿ ನಿನ್ನ ದಾಸ್ಯವನ್ನು ಪಡೆಯುವಂತೆ ನನಗೆ ಅನುಗ್ರಹಿಸಬೇಕು.

ಭೂದೇವಿ ತನಗೆ ವಿಭೂತಿಯಾದ ಕಾರಣ ತಾನು 'ಭೂಧರ'ನಾದನೆಂದು ಹಿಂದಿನ ಪಾಶುರದಲ್ಲಿ ಹೇಳಿದರು. ಪ್ರಯೋಜನಾಂತರ ಪರರಿಗಾಗಿ ಕೂರ್ಮ ರೂಪವನ್ನು ತಳೆದು ಪರ್ವತವನ್ನು ಹೊತ್ತು ಅಮೃತವನ್ನು ದೇವತೆಗಳಿಗೆ ತಂದುಕೊಟ್ಟನೆಂದು ಇಲ್ಲಿ ಅನುಸಂಧಾನ ಮಾಡಿದ್ದಾರೆ. ಉನ್ನತವಾದ ಕಿರೀಟಗಳನ್ನು ಧರಿಸಿದ ದೇವತೆಗಳು ಆ ಸರ್ವೇಶ್ವರನ ಪಾದಗಳ ಮೇಲೆ ಬಿದ್ದು ರಕ್ಷಣೆ ಬೇಡಲು, ಅವರಿಗೆ ಅಸುರರಿಂದ ಬಂದ ದುಃಖ ತೀರುವಂತೆ ಸಂಕಲ್ಪಿಸಿ, ಮಂದರಪರ್ವತವನ್ನು ಹೊರಬಲ್ಲ ಆಮೆಯ ರೂಪ ಧರಿಸಿ, ಅಮೃತವನ್ನು ಅವರಿಗೆ ಹಂಚಿ ಅವರನ್ನು ರಕ್ಷಿಸಿದನು. ಅವರ ಸತ್ತೆಗೆ ಹೇತು ವಾದನವನು. 'ನನಗೆ ನಿಮ್ಮ ದಾಸ್ಯವನ್ನು ಕರುಣಿಸಿ ನನಗೂ ಸತ್ತೆಯುನ್ನುಂಟು ಮಾಡಬೇಕು'—ಎಂದು ಬೇಡುತ್ತಾರೆ. ಗಂಡು ದುಂಬಿಯೂ ಹೆಣ್ಣು ದುಂಬಿಯೂ ಪ್ರಣಯಕಲಹ ಮಾಡಿದಾಗ ಆ ಹೆಣ್ಣುದುಂಬಿಗೆ ತಿಳಿಯದೆ ಇರುವ ಜಾಗವನ್ನು ಹುಡುಕಿ ಅಲ್ಲಿ ಅಡಗಿಕೊಳ್ಳಲು ಗಂಡುದುಂಬಿ ಉನ್ನತ ವಾದ ಶಿಖರಗಳಿರುವ ಮಾಳಿಗೆಗಳಲ್ಲಿ ಹೋಗಿ ಅಲ್ಲಿನ ರಮಣಿಯರ ಮುಡಿ ಯಲ್ಲಿ ಮರೆಸಿಕೊಳ್ಳುವುದಂತೆ.

ಅರಿನೋಡೊರು ನಾನ್ಗುಡ್ಯೆ ನೆಡುಮುಡಿ ಅರಕ್ಕನ್
ತನ್ ಶಿರಮೆಲ್ಲಾಂ
ವೇರುವೇರುಉಹ ವಿಲ್ಲದುವಳ್ಳಿತ್ತವನೇ ಎನಕ್ಕು
ಅರುಳ್ ಪುರಿಯೇ
ಮಾರಿಲ್‌ಶೋದಿಯ ಮರತಕಪ್ಪಾಶಡ್ಯೆ ತಾಮರೈ
ಮಲರ್ ವಾರ್‌ನ್ದ
ಶೇರಲ್ ಮಾಂದಿಮಂಡು ಇನ್ನಿಶೈಮುರಲ್
ತಿರುವೆಳ್ಳಿಕ್ಕೆ ನಿನ್ರಾನೇ ॥೭॥

(ಮಾರಿಲ್‌ಶೋದಿಯ) ಅಸಮಾನವಾದ ಪ್ರಕಾಶ ಹೊಂದಿದವುಗಳಾಗಿ (ಮರತಕಂ ಪಾಶುಅಡ್ಯೆ) ಮರಕತವನ್ನು ಹೋಲುವಂತೆ ಇರುವ ಎಲೆಗಳನ್ನುಳ್ಳ (ತಾಮರೈಮಲರ್) ತಾವರೆಗಳ (ಮಲರ್) ಹೂಗಳಿಂದ (ವಾರ್‌ನ್ದ

ತೇರಲ್) ಸ್ರವಿಸುವ ಮಕರಂದವನ್ನು (ವಣಾಂದಿ) ಪಾನಮಾಡಿ (ವಂಡು) ದುಂಬಿಗಳು (ಇನ್ನಿಶೈಮುರಲ್) ಮಧುರವಾದ ಹಾಡುಗಳನ್ನು ಇಂಪಾಗಿ ಹಾಡುತ್ತಿರುವಂತಹ (ತಿರುವೆಳ್ಳರೈನಿನ್ರಾನೇ) ತಿರುವೆಳ್ಳರೈಕ್ಷೇತ್ರದಲ್ಲಿರುವವನೇ, (ಅರಕ್ಕನ್‌ತನ್) ರಾವಣಾಸುರನ (ನೆಡುಮುಡಿಉಡೈ) ನೀಳವಾದ ಕಿರೀಟ ಗಳನ್ನು ಧರಿಸಿದ (ಅರಿನೋಡು ಒರುನಾನ್ಗು ಶಿರುಎಲ್ಲಾಂ). ಹತ್ತು ತಲೆಗಳಲ್ಲಿ ಒಂದೂ ತಪ್ಪದಂತೆ (ವೇರು ವೇರು ಉಹ) ಬೇರೆಬೇರೆಯಾಗಿ ಕತ್ತರಿಸಿ ಬೀಳುವಂತೆ (ಎಲ್‌ಅದು) ಶಾರ್ಙ್ಗ ಧನುಸ್ಸನ್ನು (ವಳೈತ್ತವನೇ) ಬಗ್ಗಿಸಿ ಬಾಣವನ್ನು ಪ್ರಯೋಗಿಸಿದ ದೇವನೇ, (ಎನಕ್ಕು ಅರುಳ್‌ಪುರಿ) ನನ್ನ ವಿಷಯ ದಲ್ಲಿ ಕೃಪೆಮಾಡು.

ದೇವತೆಗಳಿಗೆ ಅಮೃತಪಾನ ಮಾಡಿಸಿದುದನ್ನು ಹಿಂದಿನ ಪಾಶುರದಲ್ಲಿ ಹೇಳಿದರು. ಆ ದೇವತೆಗಳನ್ನು ಒಕ್ಕಲೆಬ್ಬಿಸಿದ ರಾವಣನನ್ನು ಜಯಿಸಿ ಆ ದೇವತೆಗಳನ್ನು ರಕ್ಷಿಸಿದುದನ್ನು ಇಲ್ಲಿ ಹೇಳಿದ್ದಾರೆ. ರಾವಣನ ಹತ್ತು ತಲೆ ಗಳೂ ಭಿನ್ನಭಿನ್ನವಾಗಿ ಬೀಳುವಂತೆ ಬಿಲ್ಲನ್ನು ಬಳಸಿದ ನೀನು ನನ್ನ ಮೇಲೆ ದಯೆ ತೋರಬೇಕೆಂದು ಬೇಡುತ್ತಾರೆ ಆಳ್ವಾರ್ ಅವರು.

**ಮುನ್ನಿವ್ವೇಟಿಲಹು ಉಣರ್ವುಇನ್ರಿ ಇರುಳ್‌ಮಿಹ**
**ಉಂಬರ್‌ಹಳ್ ತೊಟುದು ಏತ್ತ**
**ಅನ್ನಮಾಹಿ ಅನ್ರು ಅರುಮರೈ ಪಯ್ಂದವನೇ**
**ಎನಕ್ಕರುಳ್‌ಪುರಿಯೇ**
**ಮನ್ನು ಕೇತಕೈ ಚೂತಕಂ ಎನ್ರಿವ್ವೈ ವನತ್ತಿಡೈ ಶುರುಂಬಿನಂಗಳ್**
**ತೆನ್ನವೆನ್ನ ವಂಡು ಇನ್ನಿಶೈಮುರಲ್ ತಿರುವೆಳ್ಳರೈ ನಿನ್ರಾನೇ ॥೮॥**

(ಮನ್ನು) ಯಥಾವಾಗಲೂ ಹೂ ಬಿಟ್ಟಿರುವ (ಕೇದಕೈ) ತಾಳೆಗಳೇನು (ಚೂತಕಂ) ಮಾವಿನಮರಗಳೇನು (ಎನ್ರುಇವೈ) ಮೊದಲಾದ ಈ ವೃಕ್ಷಗಳ ನ್ನುಳ್ಳ (ವನತ್ತುಇಡೈ) ತೋಪುಗಳ ನಡುವೆ (ಶುರುಂಬುಇನಂಗಳ್) 'ಶುರುಂಬು' ಎನ್ನುವ ಜಾತಿಯ ಭೃಂಗಗಳ ಸಮೂಹವು (ತೆನ್ನವೆನ್ನ) 'ತೆನ್ನ ತ್ತೆನ್ನ' ಎಂದು ಪಾಡಲು (ವಂಡು) ಸಾಧಾರಣವಾದ ದುಂಬಿಗಳು (ಇನ್ ಇಶೈ ಮುರಲ್) ಇಂಪಾದಗಾನವನ್ನು ಹಾಡುತ್ತಿರುವಂತಹ (ತಿರುವೆಳ್ಳರೈನಿನ್ರಾನೇ)

ತಿರುವೆಳ್ಳರೈ ಕ್ಷೇತ್ರದಲ್ಲಿ ನಿಂತಿರುವವನೇ (ಮುನ್) ಹಿಂದೊಂದು ಕಾಲದಲ್ಲಿ (ಇವ್ವೇಟುಲಹು) ಈ ಸಪ್ತ ಲೋಕಗಳೆಲ್ಲವೂ (ಉಣರ್ವೊನ್ರಿ) ಅರಿವಿಲ್ಲದೆ ಹೋಗಿ (ಇರುಳ್ ಮಿಹ)ಅಜ್ಞಾನಾಂಧಕಾರವು ಮುಸುಡಿದ ಸಮಯದಲ್ಲಿ(ಉಂಬರ್ ಹಳ್) ದೇವತೆಗಳು (ತೊಟುದುಏತ್ತ) ನಮಿಸಿ ಸ್ತುತಿಸಲು (ಅನ್ರು ಅನ್ನಂ ಆಹಿ) ಆಗ ಹಂಸರೂಪಿಯಾಗಿ (ಅರುಮರೈಪಯಂದವನೇ) ಶ್ರೇಷ್ಠವಾದ ವೇದಗಳನ್ನು ತಂದುಕೊಟ್ಟವನೇ, (ಎನಕ್ಕು ಅರುಳ್ಪುರಿ) ನನ್ನ ಮೇಲೆ ಕೃಪೆಮಾಡು.

ಹಿಂದೊಮ್ಮೆ ಲೋಕಗಳೆಲ್ಲಾ ಜ್ಞಾನಪ್ರಕಾಶವಿಲ್ಲದೆ ಅಜ್ಞಾನಾಂಧ ಕಾರದಲ್ಲಿ ಮುಳುಗಿದ್ದಾಗ ಬ್ರಹ್ಮಾದಿ ದೇವತೆಗಳು ತನ್ನನ್ನು ಅನನ್ಯಭಾವದಿಂದ ಪ್ರಾರ್ಥಿಸಲು ಹಂಸರೂಪಿಯಾಗಿ ಅವತರಿಸಿ ಅವರಿಗೆ ವೇದವನ್ನು ಉಪದೇಶಿಸಿ ದನು ಸ್ವಾಮಿ. ಹಯಗ್ರೀವರೂಪಿಯಾಗಿ ಉಪದೇಶಿಸಿದ ಸ್ವಾಮಿಯೇ ಹಂಸರೂಪಿಯಾಗಿಯೂ ಉಪದೇಶಿಸಿದ. ಕಲ್ಪಭೇದದಿಂದ ಇವೆರಡು ಪ್ರಕಾರ ಗಳಿಗೆ ವಿರೋಧವಿಲ್ಲವೆಂಬುದನ್ನು ಅರಿಯಬೇಕು. ತನ್ನ ಸ್ವರೂಪವನ್ನೂ ತನ್ನನ್ನು ಪಡೆಯಲು ಅನುಷ್ಠಿಸಬೇಕಾದ ಸಾಧನಗಳನ್ನೂ ತಿಳಿಸಿಕೊಡುವ ಪರಮಪ್ರಮಾಣವೂ ಪರಮೋಪಾದೇಯವೂ ಆದ ವೇದವನ್ನು ಉಪದೇಶಿಸಿ ಅನುಗ್ರಹಿಸಿದ ಆ ಕರುಣಾಕರ ಅತ್ಯಂತ ಮನೋಹರವಾಗಿ ಭೃಂಗಗಳ ಮಧುರ ಗಾನದಿಂದ ತುಂಬಿರುವ ತಿರುವೆಳ್ಳರೈ ಕ್ಷೇತ್ರ ಪರಮ ಪದದಂತೆ ಶೋಭಿಸಿ ರುವುದಂತೆ. ಅಲ್ಲಿ ನಿತ್ಯಸೂರಿಗಳೋಪಾದಿಯಲ್ಲಿ ಭೃಂಗಗಳು ಆನಂದದಿಂದ ಹಾಡುವುವಂತೆ.

ಆಂಗು ಮಾವಲಿವೇಳ್ವಿಯಿಲ್ ಇರನ್ದು ಶೆನ್ರು
ಅಹಲ್ಇಡಂ ಮುಟುದಿನೈಯುಂ
ಪಾಂಗಿನಾಲ್ ಕೊಂಡ ಪರಮ ನಿನ್‌ಪಣಿನ್ದು ಎಟುವೇನ್
ಎನಕ್ಕು ಅರುಳ್‌ಪುರಿಯೇ
ಓಂಗು ಪಿಂಡಿಯಿನ್ ಶೆಮ್ಮಲರೇರಿ ವಂಡು ಉಟಿತರ ಮಾವೇರಿ
ತೀಂಕುಯಿಲ್ ಮಿಟಟತ್ತುಂ ಪಡಪ್ಪೈ ತಿರುವೆಳ್ಳರೈ ನಿನ್ರಾನೇ
॥೯॥

(ಓಂಗು) ಉನ್ನತವಾಗಿ ಬೆಳೆದಿರುವ (ಪಿಂಡಿಯಿನ್ ಶೆಮ್‌ಮಲರ್) ಅಶೋಕಮರದ ಕೆಂಬಣ್ಣದ ಹೂಗಳ ಮೇಲೆ (ವಂಡು ಏರಿ)ದುಂಬಿಗಳು ಏರಿ (ಉಟಿತರ) ಸಂಚರಿಸಲು (ತೀಮ್‌ಕುಯಿಲ್) ಮಧುರವಾದ ಸ್ವರವನ್ನುಳ್ಳ ಕೋಗಿಲೆಗಳು (ಮಾಏರಿ) ಮಾವಿನ ಮರಗಳ ಮೇಲೇರಿ ನಿಂತು (ಮಿಟತ್ತುಂ) ಹಾಡುವಂತಿರುವಂಥ (ಪಡಪ್ಪೈ) ವಿಸ್ತಾರವಾದ ತೋಟಗಳನ್ನುಳ್ಳ (ತಿರು ವೆಳ್ಳರೈನಿನ್ರಾನೇ) ತಿರುವೆಳ್ಳರೈ ಕ್ಷೇತ್ರದಲ್ಲಿರುವ ಸರ್ವೇಶ್ವರನೇ, (ಮಾವಲಿ ವೇಳ್ವಿಯಿಲ್) ಮಹಾಬಲಿಯ ಯಾಗಭೂಮಿಯಲ್ಲಿ (ಶೆನ್ರು) ತಾನೇ ಹೋಗಿ (ಇರಂಡು) ಮೂರಡಿ ನೆಲವನ್ನು ಬೇಡಿ (ಅಂಗು) ಆಗಲೇ (ಅಹಲ್ ಇಡಂ ಮುಟಿದಿನ್ನೈಯುಂ) ಭೂಮಿಯ ವಿಸ್ತಾರವನ್ನೆಲ್ಲವನ್ನೂ (ಪಾಂಗಿನಾಲ್) ಕ್ರಮವಾಗಿ (ಕೊಂಡ ಪರಮ) ಸ್ವಾಧೀನಪಡಿಸಿಕೊಂಡ ಪುರುಷೋತ್ತಮನೇ, (ನಿನ್‌ಪಣಿಂದು ಎಟುವೇನ್ ಎನಕ್ಕು) ನಿನ್ನನ್ನು ನಮಿಸಿಯೇ ಉಜ್ಜೀವಿಸು ತ್ತಿರುವ ನನ್ನ ವಿಷಯದಲ್ಲಿ (ಅರುಳ್‌ಪುರಿ) ಕೃಪೆಮಾಡಿ ಸಲಹು.

ದೇವತೆಗಳಿಗಾಗಿ ನಿನ್ನನ್ನೇ ನೀನು ಚಿಕ್ಕವನನ್ನಾಗಿ ಮಾಡಿಕೊಂಡು ಬಲಿಯ ಯಾಗಮಂಟಪಕ್ಕೆ ಹೋಗಿ ನೆಲವನ್ನು ಯೊಚಿಸಿದೆ. ರಾವಣಾದಿ ಗಳನ್ನು ನಿಗ್ರಹಿಸಿದ ಹಾಗೆ ಅವನನ್ನು ಆಕ್ರಮಿಸದೆ ಯಾಚಕನಾಗಿ ಅವನಲ್ಲಿಗೆ ಹೋದೆ ಅವನ ಔದಾರ್ಯದ ಗುಣದಿಂದಾಗಿ. ಅವನು 'ಕೊಡಬೇಕು' ಎಂಬ ಇಚ್ಛೆಯುಳ್ಳವನಾಗಿದ್ದರಿಂದ ಇವನು 'ದೇಹಿ' ಎಂದು ಅವನನ್ನು ಕೇಳಿದ. ಸುಂದರವಾದ ತೋಟಗಳಿಂದಲೂ ವೃಕ್ಷಸಮೃದ್ಧಿಯಿಂದಲೂ, ಪಕ್ಷಿಸಂಕುಲದ ಮಧುರಗಾನದಿಂದಲೂ ಕೂಡಿರುವ ತಿರುವೆಳ್ಳರೈ ಕ್ಷೇತ್ರದಲ್ಲಿ ನಿತ್ಯವಾಸ ಮಾಡುತ್ತಿದ್ದಾನೆ ಆ ಪರಮಪುರುಷ.

**ಮಂಜುಲಾಮಣಿಮಾಡಂಗಳ್ ಶೂಟ್ ತಿರುವೆಳ್ಳರೈ**
**ಅದನ್ ಮೇಯಿ**
**ಅಂಜನಂಪುರೈಯುಂ ತಿರುಉರುವನ್ನೈ ಆದಿಯೈ ಅಮುದತ್ತೈ**
**ನೆಂಜುಲಾವಿಯ ನೀಲ್‌ವಲವನ್ ಕಲಿಕನ್ರಿಶೊಲ್**
**ಐಯಿರಂಡುಂ**
**ಎಂಜಲಿನ್ರಿ ನಿನ್ರುವಿತ್ತವಲ್ಲಾರ್ ಇಮೈಯೋರ್‌ಕ್ಕು**
**ಅರಶಾವರ್‌ಹಳೇ ॥೧೦॥**

(ಮಂಜುಉಲಾಂ) ಮೇಘಗಳು ಕವಿದುಸಂಚರಿಸುವಂತಹ (ಮಣಿಮಾಡಂಗಳ್) ನವರತ್ನ ಖಚಿತಮಾಳಿಗೆಗಳಿಂದ (ಶೂಟ್)ಸುತ್ತುವರಿಯಲ್ಪಟ್ಟ (ತಿರುವೆಳ್ಳರೈ ಅದನ್ ಮೇಯ) ತಿರುವೆಳ್ಳರೈ ಕ್ಷೇತ್ರದಲ್ಲಿ ನಿತ್ಯವಾಸಮಾಡುವವನೂ, (ಅಂಜನ ಪುರೈಯುಂ ತಿರುಉರುವನೈ) ಅಂಜನದಂತೆ ದಿವ್ಯವಾದ ದೇಹ ಕಾಂತಿಯುಳ್ಳವನೂ (ಆದಿಯೈ) ಸಕಲಜಗತ್ಕಾರಣನಾದವನೂ (ಅಮು ದತ್ತೈ) ಅಮೃತದಂತೆ ಭೋಗ್ಯನಾದವನೂ ಆದ ಸರ್ವೇಶ್ವರನನ್ನು (ನಂಜು ಲಾವಿಯ ವೇಲ್‌ವಲವನ್) ವಿಷವು ತಂಗಿರುವ ವೇಲಾಯುಧವನ್ನು ಬಳಸು ವುದರಲ್ಲಿ ನಿಪುಣರಾದ (ಕಲಿಕನ್ರಿ ಶೊಲ್) ತಿರುಮಂಗೈ ಆಳ್ವಾರ್‌ರವರು ಅನು ಗ್ರಹಿಸಿದ (ಐಇರಂಡುಂ) ಈ ಹತ್ತು ಪಾಶುರಗಳನ್ನು ತೆಗೆದುಕೊಂಡು (ಎಂಜಿಲ್ ಇನ್ರಿ) ಕೊರೆ ಇಲ್ಲದಂತೆ (ನಿನ್ರು) ಮನೋಭಾವವನ್ನು ಹೊಂದಿ (ವಿತ್ತವಲ್ಲಾರ್) ಸ್ತೋತ್ರ ಮಾಡಬಲ್ಲವರು (ಇಮ್ಮೈಯೋರ್‌ಕ್ಕು) ನಿತ್ಯಸೂರಿಗಳಿಗೂ (ಅರಶು ಆವರ್‌ಹಳ್) ಆದರಣೀಯರಾಗುತ್ತಾರೆ.

ಸಂಚರಿಸುವ ಮೇಘಗಳು ಸವರಿಕೊಂಡು ಹೋಗುವಂತೆ ಇರುವುವಂತೆ ಆ ದಿವ್ಯ ಕ್ಷೇತ್ರವಾದ ತಿರುವೆಳ್ಳರೈನಲ್ಲಿರುವ ಮಣಿಮಂದಿರಗಳು. ಅಲ್ಲಿ ಆ ಲೋಕನಾಥ ನಿತ್ಯವಾಸ ಮಾಡುತ್ತಿದ್ದಾನೆ. ಅವನು ಸನ್ನಿಹಿತನಾಗದೆ ಹೋದರೂ ಅವನನ್ನು ಬಿಡುವುದಕ್ಕಾಗದಂತೆ ಇದೆ ಅವನ ಮೈಕಾಂತಿ. ಪ್ರಾಪ್ತಿಯಾಗದೆ ಇದ್ದರೂ ಅವನ ಭೋಗ್ಯತೆ ಅವನನ್ನು ಮರೆಯುವುದಕ್ಕಾಗ ದಂತೆ ಮಾಡುತ್ತಿದೆ. ಭಗವದ್ಭಾಗವತ ದ್ವೇಷಿಗಳಿಗೆ ಆಳ್ವಾರ್‌ರವರ ಕೈಯಲ್ಲಿ ರುವ ವೇಲಾಯುಧ ಸಂಚರಿಸುವ ವಿಷದೋಪಾದಿ ಇದೆಯಂತೆ. ಈ ಹತ್ತು ಪಾಶುರಗಳನ್ನು ಒಂದನ್ನೂ ಬಿಡದೆ ಹಾಡುವವರನ್ನು ನಿತ್ಯಸೂರಿಗಳು ಆದರಿಸುವ ರಂತೆ. ಶ್ರೀವೈಕುಂಠನಾಥನನ್ನು ಆದರಿಸುವುದಕ್ಕಿಂತ ಅತಿಶಯವಾಗಿ ಇವರನ್ನು ಆ ಸೂರಿಗಳು ಆದರಿಸುವರಂತೆ.

### ಐದನೆಯ ಪತ್ತು—ನಾಲ್ಕನೆಯ ತಿರುಮೊಳಿ

# 'ಉಂದಿಮೇಲ್'

## ಪ್ರವೇಶ

'ನಿನ್ನ ಶ್ರೀಪಾದಗಳನ್ನು ಸೇವಿಸುವ ಬಗೆಯನ್ನು ತಿಳಿಸು', 'ಕೃಪೆ ಮಾಡು' ಎಂದು ಆರ್ತರಾಗಿ ಆಳ್ವಾರ್ರವರು ಭಗವಂತನನ್ನು ಬೇಡಿದರು. 'ನೀವಿಷ್ಟು ವಿಹ್ವಲರಾಗಿ ಬೇಡಬೇಕೇ? ನಾನು ನಿಮಗೆ ಉಪಕಾರ ಮಾಡಿಲ್ಲವೇ? ಶ್ರೀರಂಗದಲ್ಲಿ ಬಂದು ಶಯಿನಿಸಿಕೊಂಡು ಸನ್ನಿಹಿತನೇ ಆಗಿದ್ದೇನಲ್ಲಾ' ಎಂದು ಸ್ವಾಮಿಯು ತನ್ನನ್ನು ತೋರಿಸಿಕೊಟ್ಟನು. ಅದನ್ನು ಅನುಸಂಧಾನ ಮಾಡಿ ಹೃಷ್ಟರಾದರು ಆಳ್ವಾರ್ರವರು. ಅರಿವುಳ್ಳವರು ಆ ಶ್ರೀರಂಗದಲ್ಲಿ ಪ್ರಾಪ್ಯ ಬುದ್ಧಿಯನ್ನು ಹೊಂದಿ ಎಡೆಬಿಡದೆ ಅದನ್ನು ಸೇವಿಸುವರೆಂದು ಅನುಭವಿಸಿ ಆ ಶ್ರೀರಂಗನಾಥನನ್ನು ಅನುಭವಿಸಿ ಹಾಡುತ್ತಾರೆ.

**ಉಂದಿಮೇಲ್ ನಾನ್ಮುಹನೈ ಪಡೈತ್ತಾನ್ ಉಲಹುಉಂಡವನ್**
**ಎಂದೈ ಪೆಮ್ಮಾನ್ ಇಮೈಯೋರ್‌ಹಳ್**
**ಕಾದ್ಯೈಕ್ಕು ಇಡಂ ಎನ್ಬರಾಲ್**
**ಶಂದಿನೋಡು ಮಣಿಯುಂ ಕೊಟ್ಟಿಕ್ಕುಂ ಪುನಲ್ ಕಾವಿರಿ**
**ಅಂದಿ ಪೋಲುಂ ನಿರತ್ತಾರ್**
**ವಯಲ್ ಶೂಟ್ ತೆನ್ನರಂಗಮೇ ॥೧॥**

(ಶಂದಿನೋಡು) ಗಂಧದ ಕೊರಡುಗಳೊಡನೆ (ಮಣಿಯುಂ) ನವರತ್ನಗಳನ್ನು (ಕೊಟ್ಟಿಕ್ಕುಂ) ತಳ್ಳಿಕೊಂಡು ಬಂದು ಪ್ರವಹಿಸುವ (ಪುನಲ್) ತೀರ್ಥವನ್ನುಳ್ಳ (ಕಾವಿರಿ) ಕಾವೇರಿ ನದಿಯಿಂದಲೂ (ಅಂದಿಪೋಲುಂ) ಸಂಧ್ಯಾಕಾಲವನ್ನು ಹೋಲುವ (ನಿರತ್ತು ಆರ್ ವಯಲ್) ವರ್ಣವನ್ನುಳ್ಳ ಗದ್ದೆಗಳಿಂದಲೂ (ಶೂಟ್) ಸುತ್ತುವರಿಯಲ್ಪಟ್ಟ (ತೆನ್ ಅರಂಗಂ) ಶ್ರೀರಂಗಕ್ಷೇತ್ರವು (ಉಂದಿ ಮೇಲ್) ತನ್ನ ಶ್ರೀನಾಭಿಯಲ್ಲಿ (ನಾನ್ಮುಹನೈ ಪಡೈತ್ತಾನ್) ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದವನೂ (ಉಲಹು ಉಂಡವನ್) ಪ್ರಲಯಕಾಲದಲ್ಲಿ

ಲೋಕಗಳನ್ನೆಲ್ಲಾ ಭುಜಿಸಿದವನೂ (ಎನ್ದ್ಯೆ ಪೆರುಮ್ಮಾನ್) ನಮ್ಮ ಕುಲನಾಥ ನಾದವನೂ (ಇಮ್ಮೆಯಿಯೋರ್‌ಹಳ್ ತಾದ್ಯೆಕ್ಕು) ನಿತ್ಯಸೂರಿಗಳಿಗೆ ನಾಥನೂ ಆದ ಪರಮಾತ್ಮನಿಗೆ (ಇಡಂಎನ್ಬರ್) ವಾಸಸ್ಥಲ ಎಂದು ಹೇಳುತ್ತಾರೆ.

'ವಿಚಿತ್ರಾ ದೇಹಸಂಪತ್ತಿಃ ಈಶ್ವರಾಯ ನಿವೇದಿತುಂ' ಎಂದು ಹೇಳಿದಂತೆ ತಮಗೆ ಕರಣಕಳೇಬರ ಪ್ರದಾನ ಮಾಡಿ ಉಪಕಾರ ಮಾಡಿದ ಪ್ರಭು ತನ್ನ ಸೇವೆಯನ್ನು ಕೈಕೊಳ್ಳಲಾರನೇ ?' ಎಂದು ಅನುಸಂಧಾನ ಮಾಡುತ್ತಾರೆ ಭಗ ವಂತನ ಸ್ರಷ್ಟೃತ್ವವನ್ನು. 'ಇವನು ಯಾರೋ ?' ಎಂದಿರಬೇಡಿ. ಇವನೇ ಚತುರ್ಮುಖನನ್ನು ಸೃಜಿಸಿದವನು. ಸಮಷ್ಟಿ ಸೃಷ್ಟಿಯನ್ನೆಲ್ಲಾ ತಾನೇ ಮಾಡಿ ಮತಿಹೀನರು 'ಬ್ರಹ್ಮದೇವ ಈ ಲೋಕ ಸೃಜಿಸಿದನು', ಎಂದು ಹೇಳುವುದ ಕ್ಕಾಗುವಂತೆ ಆ ಬ್ರಹ್ಮನನ್ನು ಸೃಜಿಸಿ, ಅವನಲ್ಲಿ ತಾನೇ ಇದ್ದುಕೊಂಡು ವ್ಯಷ್ಟಿ ಸೃಷ್ಟಿಯನ್ನು ಮಾಡಿದ ಮಹಾನುಭಾವ ಇವನು. 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ' ಎಂದು ಹೇಳಿದಂತೆ ಪ್ರಲಯ ಕಾಲದಲ್ಲಿ ಈ ಲೋಕ ವನ್ನು ಉಂಡವನೂ ಇವನೇ. ಸರ್ವಸಮಾಶ್ರಯಣೀಯನಾದವನೂ ಇವನೇ. ಅಸ್ಪೃಷ್ಟಸಂಸಾರಗಂಧರಾದ ನಿತ್ಯಸೂರಿಗಳಿಗೆ ನಿರ್ವಾಹಕನಿವನು. ನಿತ್ಯ ಸೂರಿಗಳೂ ಈ ಕ್ಷೇತ್ರವನ್ನು ಬಯಸಿ ಇಲ್ಲಿ ಬಂದು ಇವನನ್ನು ಸೇವಿಸುವ ರಷ್ಟೇ ? ಪವಿತ್ರವಾದ ಕಾವೇರಿಯಿಂದ ಆವೃತವಾದ ಈ ದಿವ್ಯಕ್ಷೇತ್ರ ಪರಮ ಭೋಗ್ಯವಾದುದು. ಸಂಧ್ಯಾಕಾಲದ ವರ್ಣದಂತೆ ಹೊಂಬಣ್ಣದ ಪೈರುಗಳಿಂದ ತುಂಬಿದ ಗದ್ದೆಗಳಿಂದ ಸುತ್ತುವರಿಯಲ್ಪಟ್ಟಿದೆ. 'ಅಂದಿಪೋಲ್ ನಿರತ್ತು ಆಡ್ಯೆಯುಂ' ಎಂದು ಹೇಳಿದಂತೆ ಆ ಸ್ವಾಮಿಯನ್ನು ಸ್ಮರಿಸುವುದಕ್ಕೆ ಸಹಾಯಕ ವಾಗಿದೆ. ಇಂಥ ಸುಂದರ ಕ್ಷೇತ್ರ ನಮ್ಮ ಸ್ವಾಮಿಯು ಶಯನಿಸಿರುವ ದೇಶವಾಗಿದೆ.

**ವೈಯ್ಯಂ ಉಂಡು ಆಲಿಲ್ಯೆ ಮೇವುಂಮಾಯನ್ ಮಣಿನೀಣ್ಮುಡಿ**
**ಪೈಕೊಳ್ ನಾಹತ್ತಣ್ಯೆಯಾನ್ ಪಯಿಲುಂ ಇಡಂ ಎನ್ಬರಾಲ್**
**ತೈಯಲ ನಲ್ಲಾರ್ ಕುಟಲ್‌ಮಾಲ್ಯೆಯುಂ**
**ಮತ್ತವರ್ ತಡಮುಲ್ಯೆ**
**ಶೆಯ್ಯ ಶಾಂದುಂ ಕಲಂದು ಇಟಿ**
**ಪುನಲ್ ಶೂಟ್ ತೆನ್ನರಂಗಮೇ ॥೨॥**

ನಲ್‌ತ್ತೈಯಲಾರ್) ಒಳ್ಳೆಯ ಸ್ತ್ರೀಯರ (ಕುಟಲ್‌ಮಹಳೈಯರ್) ಶಿರಸ್ಸಿನಲ್ಲಿ ಧರಿಸಿದ ಹೂವಮಾಲೆಗಳೂ (ಮಂತ್ತು) ಮಂತ್ತು (ಅವರ್ ತಡಮುಲ್ಲೈಶೆಯ್ದ್ ಶಾಂದುಂ) ಅವರ ಸ್ತನತಟಗಳಲ್ಲಿ ಪೂಸಿದ ಒಳ್ಳೆಯ ಚಂದನವೂ ಆದ ಇವು ಗಳೊಡನೆ (ಕಲಂದು ಇಟಿ) ಸೇರಿ ಪ್ರವಹಿಸುವ (ಪುನಲ್ ಶೂಟ್) ಕಾವೇರಿಯ ತೀರ್ಥದಿಂದ ಸುತ್ತುವರಿಯಲ್ಪಟ್ಟ (ತೆನ್‌ಅರಂಗಂ) ಶ್ರೀರಂಗವು (ವೈಯ್ಯಂ ಉಂಡು) ಪ್ರಲಯಕಾಲದಲ್ಲಿ ಲೋಕವನ್ನೆಲ್ಲಾ ಭುಜಿಸಿ (ಆಲ್ಲೈಇಲೈಮೇಲ್ವುಂ) ಆಲದೆಲೆಯ ಮೇಲೆ ಶಯನಿಸುವ (ಮಾಯನ್) ಆಶ್ಚರ್ಯ ಶಕ್ತಿ ಯುಕ್ತನೂ (ಮಣಿನೀಳ್‌ಮುಡಿ) ರತ್ನಖಚಿತವಾದುದೂ ನೀಳವಾದುದೂ ಆದ ಕಿರೀಟವನ್ನು ಧರಿಸಿದವನೂ (ಪೈಕೊಳ್‌ನಾಹತ್ತು ಅಣ್ಣೈಯಾನ್) ಹೆಡೆಬಿಚ್ಚಿದ ಆದಿಶೇಷನನ್ನು ಹಾಸುಗೆಯನ್ನಾಗಿ ಹೊಂದಿದವನೂ ಆದ ಪರಮಾತ್ಮನು (ಮಯಿಲುಂ ಇಡಂಎನ್ಬರ್) ನಿತ್ಯವಾಸಮಾಡುವ ಸ್ಥಾನವೆಂದು ಹೇಳುವರು.

ಅವಾಂತರಪ್ರಲಯದಲ್ಲಿ ಈ ಲೋಕಗಳಿಗೆ ದುಃಖವುಂಟಾಗದಂತೆ ತನ್ನ ಬಾಯಿಂದ ತಾನೇ ಉಂಡು ತನ್ನ ಉದರದಲ್ಲಿಟ್ಟುಕೊಂಡು ಎಳೆಯ ಆಲ ದೆಲೆಯ ಮೇಲೆ ಶಯನಿಸಿದ ಆಶ್ಚರ್ಯಭೂತನವನು. ಆಧಿರಾಜ್ಯ ಪ್ರಕಾಶಕ ವಾದ ಕಿರೀಟವನ್ನು ಶಿರಸ್ಸಿನಲ್ಲಿ ಧರಿಸಿರುವನವನು. ತನ್ನ ಸ್ಪರ್ಶದಿಂದಲೇ ವಿಕಸಿತವಾದ ಹೆಡೆಗಳನ್ನುಳ್ಳ ಅನಂತನ ಮೇಲೆ ಶಯನಿಸಿರುವವನೂ ಇವನೇ. ಅವನು ನಿತ್ಯವಾಸ ಮಾಡುವ ದಿವ್ಯದೇಶ ಇದು. ಉತ್ತಮ ಸ್ತ್ರೀಯರು ಬ್ರಾಹ್ಮಮುಹೂರ್ತದಲ್ಲಿ ಸ್ನಾನಮಾಡಲು ಕಾವೇರಿಯಲ್ಲಿ ಇಳಿಯುವರಂತೆ. ಅವರು ಮುಡಿದ ಹೂವಮಾಲೆಗಳು, ಪೂಸಿದ ಚಂದನ ಇವುಗಳಿಂದ ಕದಡಿದ ಪ್ರವಾಹ ಆ ಊರಿನ ಸುತ್ತ ಪ್ರವಹಿಸುತ್ತಿರುತ್ತದೆ.

**ಮಂಡು ಇವೈಯೈಂ ಅಳಪ್ಪಾನ್ ಶೆನ್ರುಮಾವಲಿ**
**ಕ್ಕೈಯಿಲ್ ನೀರ್**
**ಕೊಂಡ ಆಟಿತ್ತಡಕ್ಕೈ ಕ್ಕುರಳನ್ ಇಡಂ ಎನ್ಬರಾಲ್**
**ವಂಡು ಪಾಡುಂ ಮದುವಾರ್ ಪುನಲ್ ವಂದಿಟಿ ಕಾವಿರಿ**
**ಅಂಡನಾರುಂ ಪೊಟಿಲ್ ಶೂಟ್ನ್ದು ಅಟಿಹಾರ್ ತೆನ್ನರಂಗಮೇ**
**॥ ೩ ॥**

(ವಂಡುಪಾಡುಂ) ದುಂಬಿಗಳು ಹಾಡುತ್ತಿರುವ (ಮಂದುಮಾರ್) ಮಕರಂದವು ಸ್ರವಿಸುತ್ತಿರುವ (ಪುನಲ್‌ವಂದು ಇಟಿ) ತೀರ್ಥವು ಬಂದು ಪ್ರವಹಿಸುವ (ಕಾವಿರಿ) ಕಾವೇರಿ ನದಿಯಿಂದಲೂ, (ಅಂಡಂ ನಾರುಂ ಪೊಟಿಲ್) ಆಕಾಶದ ವರೆಗೂ ಪರಿಮಳಿಸುವ ತೋಪುಗಳಿಂದಲೂ (ಶೂಟ್‌ನ್ದು) ಸುತ್ತುವರಿಯು ಲ್ಪಟ್ಟು (ಅಟಹು ಆರ್) ಸೌಂದರ್ಯವು ತಂಗಿರುವ (ತೆನ್‌ಅರಂಗಂ) ಶ್ರೀರಂಗ ಕ್ಷೇತ್ರವು (ಮುಂಡು) ಹಿಂದೊಂದು ಕಾಲದಲ್ಲಿ (ಇವ್ವೈಯುಂ ಅಳಪ್ಪಾನ್) ಈ ಭೂಮಿಯನ್ನು ಅಳೆದು ವಶಪಡಿಸಿಕೊಳ್ಳುವುದಕ್ಕಾಗಿ (ಶೆನ್ರು) ಹೋಗಿ (ಮಾವಲಿ ಕೈಯಿಲ್) ಮಹಾಬಲಿಯ ಕೈಯ್ಯಿಂದ (ನೀರ್) ದಾನ ಜಲವನ್ನು (ಆಟಿತಡು ಕೈಕೊಂಡ) ಶ್ರೀಸುದರ್ಶನವನ್ನು ಹಿಡಿಯಬಲ್ಲ ವಿಶಾಲವಾದ ಹಸ್ತದಿಂದ ತೆಗೆದುಕೊಂಡ (ಕುರಳನ್) ವಾಮನಮೂರ್ತಿಯ (ಇಡುಎನ್ಬರ್) ವಾಸಸ್ಥಾನ ಎನ್ನುತ್ತಾರೆ.

ದೇಹಾದ್ಯುಪಕರಣಗಳನ್ನು ಕರುಣಿಸಿಯೂ, ಹೊಟ್ಟೆಯಲ್ಲಿಟ್ಟುಕೊಂಡು ರಕ್ಷಿಸಿಯೂ ಉಪಕಾರ ಮಾಡಿದಂತೆ ತಮ್ಮನ್ನು ಅವನದನ್ನಾಗಿ ಮಾಡಿಕೊಂಡ ಉಪಕಾರವನ್ನು ಸ್ಮರಿಸಿದ್ದಾರೆ ಇಲ್ಲಿ. ಮಹಾಬಲಿಯಿಂದ ಅಪಹೃತವಾಗಿದ್ದ ಭೂಮಿಯನ್ನು ಮತ್ತೆ ಪಡೆದುಕೊಳ್ಳುವುದಕ್ಕಾಗಿ ಬಲಿಯ ಯಾಗಶಾಲೆಗೆ ತಾನೇ ಹೋಗಿ ಶ್ರೀ ಸುದರ್ಶನವನ್ನು ಹಿಡಿಯತಕ್ಕ ಕೈಯ್ಯಿಂದ ದಾನಧಾರೆ ಸ್ವೀಕರಿಸಿದ ಶ್ರೀವಾಮನನಿರುವ ದೇಶ ಇದು ಎನ್ನುತ್ತಾರೆ. ಮಧುಪಾನದಿಂದ ಮತ್ತರಾದ ದುಂಬಿಗಳು ಹಾಡುವುದಕ್ಕೆ ತಕ್ಕುದಾದ ಮಧುಪ್ರವಾಹವು ಬಂದು ಸೇರುವ ಕಾವೇರಿಯಿಂದಲೂ ಅಂಡಾವಕಾಶವನ್ನೆಲ್ಲಾ ಪರಿಮಳದಿಂದ ವ್ಯಾಪಿಸ ಬಲ್ಲ ತೋಪುಗಳಿಂದಲೂ ಸುತ್ತುವರಿಯಲ್ಪಟ್ಟ ತೆನ್ನರಂಗವು ಲೋಕೈಕವೀರ ನಾದ ಆ ಸ್ವಾಮಿಯ ವಾಸಸ್ಥಳವಾಗಿದೆ.

ವಿಳೈತ್ತ ವೆಮ್‌ಪೋರ್ ವಿರಲ್ ವಾಳರಕ್ಕನ್ ನಗರ್ ಪಾಟ್‌ಪಡ
ವಳೈತ್ತ ವಲ್‌ವಿಲ್ ತಡಕ್ಕೈಯವನುಕ್ಕು ಇಡಂ ಎನ್ಬರಾಲ್
ತುಳೈಕ್ಕೈಯಾನೈ ಮರುಪ್ಪುಂ ಅಹಿಲುಂ
ಕೊಣರ್‌ನ್ದುನ್ದಿ ಮುನ್
ತಿಳೈಕ್ಕುಂ ಶೆಲ್ವಪ್ಪುನಲ್ ಕಾವಿರಿ ಶೂಟ್ ತೆನ್ನರಂಗಮೇ
॥೪॥

(ತುಳ್ಳಿಕ್ಕೈ) ತುದಿಗೈಯನ್ನುಳ್ಳ (ಯಾನೈಮರುಪ್ಪುಂ) ಆನೆಗಳ ದಂತಗಳನ್ನೂ (ಅಹಿಲುಂ) ಅಹಿಲ್‌ಮರಗಳನ್ನೂ (ಕೊಣರ್‌ನ್ದು ಮುನ್‌ಉಂದಿ) ತಳ್ಳಿಕೊಂಡು ಬಂದು ಮುಂದೆ ತಳ್ಳಿ (ತಿಳೈಕ್ಕುಂ) ಲೀಲಾರಸವನ್ನನುಭವಿಸುವ (ಶೆಲ್ವಂಪುನಲ್) ದಿವ್ಯವಾದ ತೀರ್ಥವನ್ನುಳ್ಳ (ಕಾವಿರಿಶೂಟಿ) ಕಾವೇರಿಯಿಂದ ಸುತ್ತುವರಿಯಲ್ಪಟ್ಟ (ತೆನ್‌ಅರಂಗಂ) ಶ್ರೀರಂಗ ಕ್ಷೇತ್ರವು (ವೆವರ್‌ಪೋರ್) ಭಯಂಕರವಾದ ಯುದ್ಧವನ್ನು (ವಿಳೈತ್ತ) ಬೆಳೆಯಿಸಿದ (ವಿರಲ್) ಬಲಿಷ್ಠನೂ (ವಾಳ್ ಅರಕ್ಕನ್) ಖಡ್ಗವನ್ನು ಆಯುಧವನ್ನಾಗಿ ಉಳ್ಳವನೂ ಆದ ರಾವಣನ (ನಗರ್) ನಗರವಾದ ಲಂಕೆಯು (ಪಾಳ್‌ಪಡ) ಹಾಳು ಬೀಳುವಂತೆ (ವಳೈತ್ತ ವಲ್‌ವಿಲ್ ತಡಕ್ಕೈಯವನುಕ್ಕು) ಬಗ್ಗಿಸಲ್ಪಟ್ಟ ದೊಡ್ಡ ಬಿಲ್ಲನ್ನು ತನ್ನ ವಿಶಾಲವಾದ ಕೈಯಲ್ಲಿಉಳ್ಳ ಪರಮಾತ್ಮನಿಗೆ (ಇಡಂ ಎನ್ಪರ್) ನಿತ್ಯವಾಸಸ್ಥಳ ಎನ್ನುತ್ತಾರೆ.

ಬಹಳ ಕ್ರೂರವಾದ ಯುದ್ಧವನ್ನು ಬೆಳೆಸಿ, ದರ್ಪಯುಕ್ತನಾಗಿ ಅದರಿಂದ ದಾರಿತಪ್ಪಿ ನಡೆಯುವವನಾಗಿದ್ದ ಸಾಯುಧನಾಗಿದ್ದ ರಾಕ್ಷಸನ ನಗರವು 'ಶ್ಮಶಾನಸದೃಶವಾಗಲಿ' ಎಂದು ಹೇಳಿದಂತೆಯೇ ನಾಶವಾಗುವಂತೆ ಮಹಾ ಧನುಸ್ಸನ್ನು ಪ್ರಯೋಗಿಸಿದವನೂ ಆ ಧನುಸ್ಸಿಗೆ ಆಶ್ರಯವಾಗಲು ತಕ್ಕುದಾದ ಶ್ರೀಹಸ್ತಗಳನ್ನೂ ಉಳ್ಳ ಚಕ್ರವರ್ತಿ ತಿರುಮಹನ್ ಶಯನಿಸಿರುವ ದೇಶ ಇದು. 'ಸಹಪತ್ನ್ಯಾ ವಿಶಾಲಾಕ್ಷ್ಯಾ ನಾರಾಯಣಮುಪಾಗಮಂತ್.' ಎಂದು ಹೇಳಿದಂತೆ ಶ್ರೀರಾಮನಿಗೆ ಉಪಾಸ್ಯನಾದ ಶ್ರೀರಂಗನಾಥನನ್ನು ರಾಮನಾಗಿ ಹೇಳುವುದು ಹೇಗೆ ಎಂದರೆ 'ಶೆರುವಿಲೇ ಅರಕ್ಕರ್ ಕೋನೈಚ್ಚೆತ್ತ ನಮ್ ಶೇವಕನಾರ್ ಮರುವಿಯ ಪೆರಿಯ ಕೋಯಿಲ್'–ಎಂದು ಹೇಳಿರುವುದಕ್ಕನುಗುಣವಾಗಿದೆ. ಕಾವೇರಿ ಆನೆಯ ಕೊಂಬುಗಳನ್ನೂ ಅಹಿಲನ್ನೂ ಕೊಚ್ಚಿಕೊಂಡುಬಂದು 'ತೆಗೆದುಕೊಳ್ಳುವರುಂಟೋ' ಎಂದು ಕೊಡುವರಂತೆ ತಳ್ಳಿ ತನ್ನ ಶಕ್ತಿಯನ್ನು ಕಂಡು ತಾನೇ ನಲಿಯುವುದಂತೆ! ಒಂದು ಅಂಬಿನಿಂದ ಲಂಕೆಯನ್ನು ನಾಶಪಡಿಸಲು ಶಕ್ತನೇ ಆಗಿದ್ದರೂ ತನ್ನ ಬಲವನ್ನು ತೋರಿ ಶರಪರಂಪರೆಯಿಂದ ಆ ಚಕ್ರವರ್ತಿ ತಿರುಮಹನ್ ಆಟವಾಡಿದಂತೆ ಅಲೆಗಳನ್ನು ಮೇಲೆಮೇಲೆ ಏರಿಸಿ ಈ ಕಾವೇರಿಯೂ ಆಡುವುದಂತೆ!

ವಂಬು ಉಲಾವಿ್ ಕೂಂದಲ್ ವಂಡೋದರಿ
ಕಾದಲನ್ ವಾನ್‌ಪುಹ
ಅಂಬು ತನ್ನಾಲ್ ಮುನಿಂದ ಅಟಿಹನಿಡಂ ಎನ್ಬರಾಲ್
ಉಂಬರ್‌ಕೋನುಂ ಉಲಹೇಟುಂ ವಂದು
ಈಂಡಿ ವಣಂಗುಂ ನಲ್
ಶೆವಿ್‌ಪೊನ್ ಆರುಂ ಮದಿಳ್ ಶೂಟ್‌ನ್ದು
ಅಟಿಹಾರ್ ತೆನ್ನರಂಗಮೇ ॥೫॥

(ಉಂಬರ್‌ಕೋನುಂ) ದೇವನಿರ್ವಾಹಕನಾದ ಬ್ರಹ್ಮದೇವನೂ (ಉಲಹಂ ಏಟುಂ) ಸಪ್ತಲೋಕಗಳೂ (ವಂದು) ಸಮೀಪಿಸಿ (ಈಂಡಿ) ಗುಂಪುಗುಂಪಾಗಿ (ವಣಂಗುಂ) ನಮಿಸಲ್ಪಡುವಂಥದೂ (ನಲ್‌ಶೆಮ್‌ಪೊನ್ ಆರುಂ ಮಾದಿಳ್ ಶೂಟ್‌ನ್ದು) ಒಳ್ಳೆಯ ಶ್ರೇಷ್ಠವಾದ ಚಿನ್ನದೊಡನೆ ವ್ಯಾಪ್ತವಾದ ಪ್ರಾಕಾರ ಗಳಿಂದ ಸಂತ್ಸ್ಮಾವರಿಯಲ್ಪಟ್ಟು (ಅಟಿಹಂಆರ್) ಸೌಂದರ್ಯವು ನೆಲಸಿರುವ (ತೆನ್ ಅರಂಗಂ) ಶ್ರೀರಂಗ ಕ್ಷೇತ್ರವು (ವಂಬು ಉಲಾಯ್‌ಕೂಂದಲ್) ಪರಿಮಳ ಬೀಸುತ್ತಿರುವ ತಲೆಗೂದಲನ್ನುಳ್ಳ (ವಂಡೋದರಿಕಾದಲನ್) ಮಂಡೋದರಿಯ ಪತಿಯಾದ ರಾವಣನು (ವಾನ್‌ಪುಹ) ವೀರಸ್ವರ್ಗವನ್ನು ಹೊಂದುವಂತೆ (ಅಂಬುತನ್ನಾಲ್) ಬಾಣಗಳಿಂದ (ಮುನಿಂದ) ಕನಲಿ ಕೊಂದು ಹಾಕಿದಂತಹ (ಅಟಿಹನ್) ವೀರಶ್ರೀಯನ್ನುಳ್ಳ ಶ್ರೀರಾಮಚಂದ್ರನ (ಇಡಂಎನ್ಬರ್) ವಾಸ ಸ್ಥಾನ ಎನ್ನುತ್ತಾರೆ.

ರಾವಣನೊಡನೆ ನೇರವಾಗಿ ಯುದ್ಧಮಾಡಿ ಬಾಣಗಳನ್ನು ಬಿಟ್ಟು ಅವನನ್ನು ನಾಶಪಡಿಸಿ ವೀರಶ್ರೀಯಿಂದ ಪೂರ್ಣನಾದ ಶ್ರೀರಾಮನು ಇರುತ್ತಿ ರುವ ದೇಶ ಇದು ಎಂದು ಹೇಳುತ್ತಾರೆ. ದೇವತೆಗಳಿಗೆ ನಿರ್ವಾಹಕನಾದ ಬ್ರಹ್ಮದೇವನೂ ಅವನು ಸೃಜಿಸಿದ ಜಗತ್ತಿನಲ್ಲಿರುವವರೂ ಹಿಂಡುಹಿಂಡಾಗಿ ಬಂದು ಆಶ್ರಯಿಸುವುದಕ್ಕಾಗುವಂತಹ ಕ್ಷೇತ್ರ ಇದು. ಒಳಗೆ ಮಲಗಿರುವ ಅನರ್ಘವಾದ ವಸ್ತುವಿಗೆ ರಕ್ಷಣೆ ಒದಗಿಸುವಂತಹ ಪ್ರಾಕಾರಗಳಿಂದ ಸುತ್ತು ವರಿಯಲ್ಪಟ್ಟು ದರ್ಶನೀಯವಾಗಿರುವ ಶ್ರೀಕ್ಷೇತ್ರ ಇದು.

ಕಲ್ಲೈ ಉಡುತ್ತ ಅಹಲ್ ಅಲ್‌ಕುಲ್ ವನ್
ಸೇಯ್‌ಮಹಳ್ ತಾಯೆನ
ಮುಲ್ಲೈಕೊಡುತ್ತಾಳ್ ಉಯಿರುಂಡವನ್
ವಾಟ್ ಇಡಂ ಎನ್ಬರಾಲ್
ಕುಲ್ಲೈ ಎಡುತ್ತ ಕದಲಿ ಪೊಟಿಲ್ ಊಡಂ ವಂದುಂದಿ ಮುನ್
ಅಲ್ಲೈ ಎಡುಕ್ಕುಂ ಪುನಲ್‌ಕಾವಿರಿ
ಶೋಟ್ ತೆನ್ನರಂಗಮೇ ॥೬॥

(ಕುಲ್ಲೈಎಡುತ್ತ) ಗೊನೆಗಳು ಮೇಲಿರುವಂತಹ (ಕದಲಿಪೊಟಿಲ್ ಊಡಂ) ಬಾಳೆಯ ತೋಪುಗಳಿನೊಳಗೆ (ವಂದು) ಹೊಕ್ಕು ಆ ಮರಗಳನ್ನು ಬೇರೊಡನೆ ಕಿತ್ತುಕೊಂಡು ಬಂದು (ಮುನ್‌ಉಂದಿ) ಮುಂದೆತಳ್ಳಿ (ಅಲ್ಲೈಎಡುಕ್ಕುಂ) ಅಲೆಗಳನ್ನೇಳಿಸಿ ಅಪ್ಪಳಿಸುತ್ತಿರುವ (ಪುನಲ್) ತೀರ್ಥವನ್ನುಳ್ಳ (ಕಾವಿರಿ ಶೋಟ್) ಕಾವೇರಿಯಿಂದ ಸುತ್ತುವರಿಯಲ್ಪಟ್ಟ (ತೆನ್ ಅರಂಗಮ್) ಶ್ರೀರಂಗ ಕ್ಷೇತ್ರವು (ಕಲ್ಲೈಉಡುತ್ತ) ಪಟ್ಟೆಯ ಸೀರೆಯನ್ನು ಧರಿಸಿದ (ಅಹಲ್ ಅಲ್ ಕುಲ್) ವಿಶಾಲವಾದ ನಿತಂಬವನ್ನುಳ್ಳ (ತಾಯ್ ಎನ) ತಾಯಿಯಾದ ಯಶೋದೆಯೇ ಇವಳು ಎನ್ನುವಂತಹ ರೀತಿ ಬಂದು (ಮುಲ್ಲೈಕೊಡುತ್ತಾಳ್) ಸ್ತನ್ಯಪಾನಮಾಡಿಸಿದ (ವನ್‌ಪೇಯ್‌ಮಹಳ್) ಬಲಿಷ್ಠಳಾದ ಪೂತನಿ ಎಂಬ ರಾಕ್ಷಸಿಯ (ಉಯಿರ್ ಉಂಡವನ್) ಪ್ರಾಣವನ್ನು ಹಿಂಡಿ ಹಿಂಡಿ ಉಂಡ ಶ್ರೀ ಕೃಷ್ಣಪರಮಾತ್ಮನು (ವಾಟ್‌ಇಡಂಎನ್ಬರ್) ಬಾಳುವ ದಿವ್ಯದೇಶ ಎಂದು ಹೇಳುತ್ತಾರೆ.

ಪೂತನಿ ಯಶೋದೆಯು ಹಾಗೆಯೇ ಅಲಂಕಾರ ಮಾಡಿಕ್ಕೊಂಡು ಅವಳಂತೆಯೇ ರೂಪ ಸೌಂದರ್ಯವನ್ನೂ ಉಡುಗೆಯ ಸೊಗಸನ್ನೂ ಹೊಂದಿ ಬಂದಳು. ಅವಳಿಗಿಂತ ಈ ಪೂತನಿಗೆ ಅಧಿಕವಾಗಿದ್ದುದು ಒಂದುಂಟು. ಅದಾದರೂ ಅವಳ ಬಲ ಹಾಗೂ ಕ್ರೌರ್ಯ, ಅವಳು ಕೃಷ್ಣನಿಗೆ ಮೊಲೆಯೂಡಿ ಸದೆ ಹೇಗೆ ಆತ್ಮಧಾರಣ ಮಾಡುವುದಕ್ಕಾಗದೆ ಬಂದಳೋ ಹಾಗೆಯೇ ಕೃಷ್ಣನೂ ಅವಳ ಪ್ರಾಣವನ್ನು ಹೀರದೆ ಧಾರಣಮಾಡಲಾರದಾದನಂತೆ! ಅಂಥ ವಿರೋಧಿ ಗಳನ್ನು ಹೋಗಲಾಡಿಸುವುದಕ್ಕಾಗಿ ಅವನು ಒಲಿದು ಬಂದುನಿಂತ ದೇಶ ಇದು.

ತನ್ನನ್ನು ಆಶೆಪಟ್ಟವರುಗಳೊಡನೆ ವಿಹರಿಸಲು ಅವನು ಬಂದು ನೆಲಸಿರುವ ದೇಶ ಇದು.

ಕೃಷ್ಣನು ಇಂದ್ರನ ಉದ್ಯಾನದಿಂದ ಪಾರಿಜಾತವನ್ನು ಕಿತ್ತುಕೊಂಡು ಬಂದ ಹಾಗೆ ಗೊನೆಬಿಟ್ಟ ಬಾಳೆಮರಗಳ ತೋಪಿನೊಳಗೆ ನುಗ್ಗಿ ಬುಡಸಹಿತ ಆ ಮರಗಳನ್ನು ಕೊಚ್ಚಿಕೊಂಡು ಬಂದು ಮುಂದೆ ತಳ್ಳುವ ಪ್ರವಾಹವನ್ನುಳ್ಳ ಕಾವೇರಿಯಿಂದ ಸುತ್ತುವರಿಯಲ್ಪಟ್ಟ ದಿವ್ಯದೇಶ ಇದು.

**ಕಂಜನ್ ನೆಂಜುಂ ಕಡುಮಲ್ಲರುಂ ಶಕಟಮುಂ ಕಾಲಿನಾಲ್**
**ತುಂಜವೆನ್ರು ಶುಡರಾಟಿಯೊನ್ ವಾಟ್ ಇಡಂ ಎನ್ಬರಾಲ್**
**ಮಂಜು ಶೇರ್ ಮಾಳಿಹೈ ನೀಡಹಿಲ್ ಪುಹೈಯುಂ**
**ಮಾಮರೈಯೋರ್**
**ಶೆಂಶೊಲ್ ವೇಳ್ವಿಪ್ಪುಹೈಯುಂ**
**ಕಮಟುಂ ತೆನ್ನರಂಗಮೇ ॥ ೭ ॥**

(ಮಂಜುಶೇರ್) ಮೇಘಮಂಡಲವನ್ನು ಮುಟ್ಟುವ (ಮಾಳಿಹೈ) ಮಹಾಳಿಗೆ ಮನೆಗಳಲ್ಲಿ ಉಂಟಾದ (ನೀಡು ಅಹಿಲ್ ಪುಹೈಯುಂ) ದಟ್ಟವಾದ ಅಹಿಲ್ ಮರದ ಹೊಗೆಯೂ (ಮಾಮರೈಯೋರ್) ಶ್ರೇಷ್ಠರಾದ ವೈದಿಕ ಬ್ರಾಹ್ಮಣರುಗಳು (ಶೆಮ್ ಶೊಲ್ ವೇಳ್ವಿ) ವೇದದಲ್ಲಿ ವಿಧಿಸಿದಂತೆ ನಡೆಸುವ ಯಾಗಗಳಲ್ಲಿ ಉಂಟಾದ (ಪುಹೈಯುಂ) ಹೋಮಧೂಮವೂ ಸೇರಿ (ಕಮಟುಂ ತೆನ್ ಅರಂಗಂ) ಪರಿಮಳಿಸುತ್ತಿರುವ ಶ್ರೀರಂಗಕ್ಷೇತ್ರವು (ಕಂಜನ್ ನೆಂಜುಂ) ಕಂಸನ ಮನಸ್ಸನ್ನೂ (ಕಡುಮಲ್ಲರುಂ) ಬಲಿಷ್ಠರಾದ ಮಲ್ಲರುಗಳನ್ನೂ (ಶಕಟಮುಂ) ಶಕಟಾಸುರನನ್ನೂ (ತುಂಜ) ನಾಶವಾಗುವಂತೆ (ಕಾಲಿನಾಲ್ ವೆನ್ರು) ಶ್ರೀಪಾದದಿಂದ ಜಯಿಸಿದವನಾದ (ಶುಡರ್ ಆಟಿಯನ್) ಜಾಜ್ವಲ್ಯಮಾನವಾದ ಸುದರ್ಶನ ಚಕ್ರವನ್ನು ಧರಿಸಿರುವ ಪರಮಾತ್ಮನು (ವಾಟ್ ಇಡಂ ಎನ್ಬರ್) ನಿತ್ಯವಾಸ ಮಾಡುವ ಸ್ಥಳ ಎನ್ನುತ್ತಾರೆ.

ಅತಿಕ್ರೂರವಾದ ಮನಸ್ಸುಳ್ಳ ಕಂಸನನ್ನೂ, ಅವನ ಕೆಲಸವನ್ನು ಮಾಡುವುದರಲ್ಲಿ ಅವನಿಗಿಂತ ಕ್ರೂರರುಗಳಾದ ಮಲ್ಲರನ್ನೂ, ಕ್ರೌರ್ಯವು ಕಾಣದ ಹಾಗೆ ಮರೆಸಿಕೊಂಡು ಬಂದ ಶಕಟನನ್ನೂ ತನ್ನ ಶ್ರೀಪಾದದಿಂದ

ನಾಶಪಡಿಸಿ 'ತಿರುಕ್ಕಾಲಾಂಡಪೆರುಮಾನ್' ಎಂದು ಹೇಳಿಸಿಕೊಂಡ ಆ ಸರ್ವೇಶ್ವರ. ಮೇಘಪದದವರೆಗೂ ಹೋದ ಮಹಾಳಿಗೆಗಳಲ್ಲಿ ಹಾಕಿದ ಅಹಿಲ್ ಮರದ ಧೂಪ ದಿಂದಲೂ, ಅಲ್ಲಿನ ವಿಪ್ರರು ನಡೆಸುವ ಯಾಗಗಳಲ್ಲಿ ಎದ್ದ ಹೋಮ ಧೂಮ ದಿಂದಲೂ ಆ ಕ್ಷೇತ್ರವೆಲ್ಲಾ ತುಂಬಿ ಹೋಗಿ ಪರಿಮಳಿಸುತ್ತಿರುವುದಂತೆ. ಅಂಥ ದಿವ್ಯಕ್ಷೇತ್ರ ಶ್ರೀರಂಗನಾಥನ ನಿತ್ಯವಾಸಸ್ಥಳ.

**ಏನಮಾಯ್ ಮೀನಾಯ್ ಆಮೈಯುಮಾಯ್ ಅರಿಯುಮಾಯ್ ಕುರಳುಮಾಯ್**
**ತಾನುಮಾಯ್ ತರಣಿತ್ತಲೈವನ್ ಇಡಮ್ ಎನ್ಬರಾಲ್**
**ವಾನುಮ್ ಮಣ್ಣುಮ್ ನಿರೈಯ ಪುಹುಂದು ಈಂಡಿ ವಣಂಗುಮ್ ನಲ್**
**ತೇನುಮ್ ಪಾಲುಮ್ ಕಲಂದನ್ನವರ್ ಶೇರ್ ತೆನ್ನರಂಗಮೇ ॥೮॥**

(ವಾನುಂ) ದೇವಲೋಕದಲ್ಲಿರುವವರೂ (ಮಣ್ಣುಂ)ಭೂಲೋಕದಲ್ಲಿರುವವರೂ (ನಿರೈಯ ಪುಹುಂದು) ಅಸಂಖ್ಯಾತವಾಗಿ ಬಂದು ಸೇರಿ (ಈಂಡಿ) ಒಂದಾಗಿ (ವಣಂಗುಂ) ಸೇವಿಸುವಂಥದೂ (ನಲ್‌ತೇನುಂ ಪಾಲುಂ) ಮಧುರವಾದ ಜೇನೂ ಹಾಲೂ (ಕಲಂದನ್ನವರ್) ಒಂದಾಗಿ ಸೇರಿದಂತೆ ಏಕರಸರಾಗಿರುವ ಭಕ್ತರುಗಳು (ಶೇರ್) ಸೇರಿರ ತಕ್ಕದೂ ಆದ (ತೆನ್ ಅರಂಗಂ) ಶ್ರೀರಂಗವು (ಏನಂ ಮೀನ್ ಆಮೈಯೊಡುಂ ಅರಿಯುಂ ಕಿರುಕುರಳುಂ ಆಯ್) ವರಾಹ, ಮತ್ಸ್ಯ, ಕೂರ್ಮ, ನರಸಿಂಹ, ವಾಮನನಾಗಿಯೂ ಅವತರಿಸಿದವನೂ (ತಾನುಂ ಆಯು) ಮತ್ತು ಶ್ರೀರಾಮನಾಗಿಯೂ ಅವತರಿಸಿದವನಾದ (ತರಣಿ ತಲೈವನ್) ಸರ್ವಲೋಕೇಶ್ವರನ (ಇಡಮ್ ಎನ್ಬರ್) ನಿತ್ಯವಾಸಸ್ಥಲ ಎನ್ನುತ್ತಾರೆ.

ಅನೇಕ ಅವತಾರಗಳನ್ನು ಮಾಡಿ ರಕ್ಷಕನಾದವನು ಆ ಅವತಾರ ಕಾಲಗಳ ನಂತರಕಾಲದಲ್ಲಿಯೂ ಭಕ್ತರಿಗೆ ಎಂದೆಂದೂ ಲಭಿಸುವಂತೆ ಇಲ್ಲಿ ಸನ್ನಿಹಿತ ನಾಗಿದ್ದಾನೆಂದು ಅನುಭವಿಸಿದ್ದಾರೆ. ಪ್ರಲಯ ಕಾಲದಲ್ಲಿ ಜಗತ್ತನ್ನು ಉದ್ಧರಿಸು ವುದಕ್ಕಾಗಿ ಶ್ರೀವರಾಹನಾಗಿ, ಮುಳುಗಿ ಹೋದ ಶ್ರುತಿಗಳನ್ನುದ್ಧರಿಸಲು ಮತ್ಸ್ಯರೂಪಿಯಾಗಿ, ಮಂದರಪರ್ವತ ಮುಳುಗದೆ ಇರುವುದಕ್ಕಾಗಿ ಕೂರ್ಮ ರೂಪಿಯಾಗಿ, ಹೀಗೆ ಒಂದು ರೂಪಧರಿಸಿ ಒದಗಿದುದಷ್ಟೇ ಅಲ್ಲದೆ ಒಂದರೊಡ ನೊಂದು ಸೇರಿದ ಎರಡು ರೂಪಗಳನ್ನು ಸೇರಿಸಿಕೊಂಡು ಶ್ರೀನೃಸಿಂಹನಾಗಿ, ಅಂಡವನ್ನು ವ್ಯಾಪಿಸಿ ಬೆಳೆಯುವುದಕ್ಕಾಗುವಂತೆ ವಾಮನ ರೂಪಿಯಾಗಿ

ಅನಂತರ ಶ್ರೀರಾಮನಾಗಿ ಅವತರಿಸಿದನು ಆಸರ್ವೇಶ್ವರ. ನಿತ್ಯಸೂರಿಗಳೂ ಸಂಸಾರಿಗಳೂ ಸಮರಸವಾಗಿ ಬೆರೆತು ಅವನನ್ನು ಸೇವಿಸುವರು ಈ ದಿವ್ಯ ಕ್ಷೇತ್ರದಲ್ಲಿ.

ಶೇಯೆನ್ ಎನ್ರುಂ ಮಿಹ ಪೆರಿಯೆನ್ ನುಣ್
ನೇರ್‌ಮೈಯೆನ್ ಆಯ, ಇವಳ್
ಮಾಯೈಯೆಯಾರುಂ ಅರಿಯಾವಹೈಯಾನ್ ಇಡಂ ಎನ್ಬರಾಲ್
ವೇಯಿನ್ ಮುತ್ತುಂ ಮಣಿಯುಂ ಕೊಣರ್ನ್ದು
ಆರ್‌ಪುನಲ್ ಕಾವಿರಿ
ಆಯೆ ಪೊನ್ ಮಾಮದಿಳ್ ಶೂಳ್ನ್ದು
ಅಣಿಹಾರ್ ತೆನ್ನರಂಗಮೇ ॥೯॥

(ವೇಯಿನ್ ಮುತ್ತುಂ) ಬಿದಿರುಗಳಿಂದ ಉದುರಿದ ಮುತ್ತುಗಳನ್ನೂ, (ಮಣಿಯುಂ) ರತ್ನಗಳನ್ನೂ (ಕೊಣರ್ನ್ದು) ತಳ್ಳಿಕೊಂಡು ಬಂದು (ಆರ್ ತುಂಬಿರುವ ಪುನಲ್‌ಕಾವಿರಿ) ತೀರ್ಥವನ್ನುಳ್ಳ ಪವಿತ್ರವಾದ ಕಾವೇರಿಯಿಂದಲೂ (ಪೊನ್‌ಮಾಮದಿಳ್) ಸುಂದರವಾದ ಉನ್ನತಪ್ರಾಕಾರಗಳಿಂದಲೂ (ಶೂಳ್ನ್ದು) ಸುತ್ತುವರಿಯಲ್ಪಟ್ಟು (ಅಣಿಹಾರ್) ಸೌಂದರ್ಯವು ನೆಲಸಿರುವ (ತೆನ್ ಅರಂಗಂ) ಶ್ರೀರಂಗ ಕ್ಷೇತ್ರವು (ಎನ್ರುಂಶೇಯನ್) ಎಂದೆಂದೂ ಎಟುಕದೆ ಇರುವವನೂ (ಮಿಹಪೆರಿಯನ್) ಮಹಾಪುರುಷನಾದವನೂ, (ನುಣ್‌ನೇರ್ ಮೈಯನ್) ಸೂಕ್ಷ್ಮವಾದುದಕ್ಕಿಂತಲೂ ಸೂಕ್ಷ್ಮವಾದ ಸ್ವರೂಪವುಳ್ಳವನೂ (ಆಯ) ಆಗಿರುವನೆಂದು ಹೇಳಬಹುದಾದ (ಇಮಾಯೈ) ಈ ಆಶ್ಚರ್ಯವನ್ನು (ಆರುಂ ಅರಿಯಾವಹೈಯಾನ್) ಯಾರೂ ಅರಿಯುವುದಕ್ಕಾಗದಂತೆ ಇರುವವ ನಾದ ಸರ್ವೇಶ್ವರನ (ಇಡಂಎನ್ಬರ್) ನಿತ್ಯವಾಸ ಸ್ಥಾನವೆಂದು ಹೇಳುತ್ತಾರೆ.

ಸುದೂರದಲ್ಲಿದ್ದು ಸರ್ವೇಶ್ವರನಾಗಿರುವ ಸ್ಥಿತಿಯುಳ್ಳವನೂ, ಸೂಕ್ಷ್ಮ ವಾದುದಕ್ಕಿಂತ ಸೂಕ್ಷ್ಮವಾದ ಪದಾರ್ಥಗಳೆಲ್ಲವನ್ನೂ ವ್ಯಾಪಿಸಿ ಧಾರಣ ಮಾಡಿರುವ ಸ್ಥಿತಿಯುಳ್ಳವನೂ ಆಗಿದ್ದಾನೆ ಆಸರ್ವೇಶ್ವರ. ಎಷ್ಟೇ ಜ್ಞಾನ ಶಕ್ತ್ಯಾದಿಗಳನ್ನುಳ್ಳವರೂ ಸಹ ಅವನ ಈ ಆಶ್ಚರ್ಯಶಕ್ತಿಯೋಗವನ್ನು ಅರಿಯಲಾರದವರಾಗಿದ್ದಾರೆ. ಅಂಥ ಪರಮಾತ್ಮನು ಇರುತ್ತಿರುವ ದೇಶ ಈ

ಶ್ರೀರಂಗಕ್ಷೇತ್ರ ಎಂದು ಹೇಳುತ್ತಾರೆ. ಸಹ್ಯಾದ್ರಿಯಲ್ಲಿರುವ ಬಿದಿರುಗಳಿಂದ ಉದುರುವ ಮುತ್ತುಗಳನ್ನೂ, ಅಲ್ಲಿನ ಮಣಿಗಳನ್ನೂ ಕೊಚ್ಚಿಕೊಂಡು ಬಂದು ದಡದ ಮೇಲೆ ಗುಡ್ಡೆ ಹಾಕುವ ಕಾವೇರಿ ನದಿಯಿಂದ ಸುತ್ತುವರಿಯಲ್ಪಟ್ಟಿರುವ ದೇಶ ಇದು. ಒಳಗೆ ಶಯನಿಸಿರುವ ಅನರ್ಘವಾದ ವಸ್ತುವಿಗೆ ರಕ್ಷಣೆಯಾಗಲು ತಕ್ಕ ಸ್ಪೃಹಣೀಯವಾದ ಆ ಪ್ರಾಕಾರಗಳಿಂದ ಪರಿವೃತವಾದ ದರ್ಶನೀಯವಾದ ಶ್ರೀಕ್ಷೇತ್ರ ಇದು.

ಅಲ್ಲಿಮಾದರ್ ಅಮರುಂ ತಿರುಮಾರ್ವನ್ ಅರಂಗತ್ತೈ
ಕಲ್ಲಿನ್ ಮನ್ನು ಮದಿಳ್ ಮಂಗೈಯರ್‌ಕೋನ್
ಕಲಿಕನ್ರಿ ಶೊಲ್
ನೆಲ್ಲಿಶೈ ಮಾಲೈಹಳ್ ನಾಲಿರಂಡುಂ ಇರಂಡುಂ ಉಡನ್
ವಲ್ಲವರ್ ತಾಮ್ ಉಲಹಾಂಡು ಪಿನ್ ವಾನುಲಹಾಳ್ವರೇ
॥೧೦॥

(ಅಲ್ಲಿಮಾದರ್ ಅಮರುಂ) ಹೂವಿನಲ್ಲಿ ಹುಟ್ಟಿದ ಶ್ರೀದೇವಿಯು ಹೊಂದಿಕೊಂಡು ತಂಗಿರುತ್ತಿರುವ (ತಿರುಮಾರ್ವನ್ ಅರಂಗತ್ತೈ) ಶ್ರೀಮದ್ಯುಕ್ತವಾದ ವಕ್ಷಃ ಸ್ಥಳವನ್ನುಳ್ಳ ಸರ್ವೇಶ್ವರನ ಶ್ರೀರಂಗ ಕ್ಷೇತ್ರವನ್ನು ಕುರಿತು (ಕಲ್ಲಿನ್ ಮನ್ನುಮದಿಳ್) ಕಲ್ಲಿನಿಂದ ಕಟ್ಟಿದ ದೃಢವಾದ ಪ್ರಾಕಾರವನ್ನುಳ್ಳ (ಮಂಗೈಯರ್‌ಕೋನ್) ತಿರುಮಂಗೈನಗರಿಯಲ್ಲಿರುವವರಿಗೆ ನಿರ್ವಾಹಕರಾದ (ಕಲಿಕನ್ರಿ ಶೊಲ್) ಆಳ್ವಾರ್ ಅನುಗ್ರಹಿಸಿದ (ನಲ್‌ಇಶೈಮಾಲೈಹಳ್) ಒಳ್ಳೆಯ ಗಾನದಿಂದ ಕೂಡಿದ ನುಡಿಮಾಲೆಯಾದ (ನಾಲಿರುಂಡುಂ ಇರುಂಡುಂ) ಈ ಹತ್ತುಪಾಶುರಗಳನ್ನೂ (ಉಡನ್ ವಲ್ಲವರ್‌ತಾಮ್) ಅರ್ಥಯುಕ್ತವಾಗಿ ಅನುಸಂಧಾನ ಮಾಡುವವರು (ಉಲಹುಆಂಡು) ಈ ಲೋಕವನ್ನು ಅನುಭವಿಸಿ (ಪಿನ್‌ವಾನ್ ಉಲಹು ಆಳ್ವರ್) ಈ ದೇಹವು ಹೋದಮೇಲೆ ಪರಮಪದಾನುಭವವನ್ನು ಹೊಂದುವವರಾಗುತ್ತಾರೆ.

ಪುಷ್ಪವಾಸಿನಿಯಾದ ಶ್ರೀದೇವಿಯು ನೆಲಸಿರುವ ದಿವ್ಯವಕ್ಷಃಸ್ಥಳವನುಳ್ಳ ಶ್ರೀರಂಗನಾಥನ ಶ್ರೀರಂಗಕ್ಷೇತ್ರವನ್ನು ಕುರಿತು ಕವೀಶ್ವರರಾದ ತಿರುಮಂಗೈ ಆಳ್ವಾರ್ ಹಾಡಿದ ಪ್ರಬಂಧ ಇದು. 'ಈ ವಕ್ಷಃ ಸ್ಥಳವನ್ನು ಬಿಟ್ಟು ಹಳೆಯ

ಕುಸುಮದಲ್ಲಿ ಹೋಗಿ ಇರಬೇಕೆಂದಾಗುವುದಾದರೆ ಏನು ಮಾಡುವುದು ?'' ಎಂದು ಹೆದರುವಂತಹ ವಕ್ಷಃಸ್ಥಲವನ್ನುಳ್ಳವನ್ನು ಆ ಸ್ವಾಮಿ. 'ಅಹಲಹಿಲ್ಲೇನ್' ಎಂದು ತಾನೇ ಪ್ರಸಿದ್ಧವಾಗಿರುವುದು ? ಈ ದಿವ್ಯ ಪ್ರಬಂಧವನ್ನು ಆದರಿಸಿ ಇದರ ಅಭಿಪ್ರಾಯವನ್ನೂ ಆಸ್ವಾದಿಸಿ ಅನುಭವಿಸಬಲ್ಲವರು ಈ ಶ್ರೀರಂಗ ದಲ್ಲಿದ್ದು ಶ್ರೀರಂಗನಾಥನನ್ನು ಅನುಭವಿಸಿ, ತಮ್ಮ ಆಶ್ರಿತರನ್ನೆಲ್ಲಾ ಭಗವತ್ಪರರ ನ್ನಾಗಿ ಮಾಡಿಕೊಂಡಿದ್ದು ಈ ದೇಹ ಹೋದಮೇಲೆ ಪರಮಪದದಲ್ಲಿ ಆ ಪರಮಾತ್ಮನ. ನಿತ್ಯಾನುಭವವನ್ನು ಹೊಂದುವವರಾಗುತ್ತಾರೆ.



ಐದನೆಯಪತ್ತು — ಐದನೆಯ ತಿರುಮೊಳಿ

# 'ವೆರುವಾದಾಳ್'

## ಪ್ರವೇಶ

ಶ್ರೀರಂಗದ ಭೋಗ್ಯತಾತಿಶಯಕ್ಕೆ ಮಾರು ಹೋಗಿ ಪರಮಪ್ರಾಪ್ಯವನ್ನು ಪಡೆಯಲು ತ್ವರೆಪಟ್ಟರು ಆಳ್ವಾರ್ ಅವರು. ತನ್ನನ್ನು ಬಿಡದೆ ರಕ್ಷಿಸುವವನೋ ಸನ್ನಿಹಿತನೇ ಆಗಿದ್ದಾನೆ. ಅವನನ್ನು ಪಡೆಯುವ ಅಪೇಕ್ಷೆಯೂ ತೀವ್ರವಾಗಿದೆ. ಆದರೂ ಅಭಿಮತವಾದ ಕೈಂಕರ್ಯ ಕೂಡಲೇ ಲಭಿಸದ ಕಾರಣ ಉಂಟಾದ ತೀವ್ರವಾದ ಅವಸಾದದಿಂದಲೂ, ಭಗವದ್ವಿರಹವನ್ನು ಸಹಿಸಿಕೊಳ್ಳುವುದ ಕ್ಕಾಗದೆ ಹೋದುದರಿಂದಲೂ, ಭಗವಂತನಿಗಾಗಿ ಹಂಬಲಿಸುವ ನಾಯಕಿಯ ಭಾವವನ್ನು ಅನುಸಂಧಾನ ಮಾಡಿದರು ಆಳ್ವಾರ್ರವರು. ಅಲ್ಲಿಯೂ ತನ್ನ ಸ್ಥಿತಿಯನ್ನು ತಾನೇ ನೇರವಾಗಿ ಹೇಳಿಕೊಳ್ಳುವುದಕ್ಕೆ ಶಕ್ತಳಾಗದೆ ಹೋಗಿ ಆ ನಾಯಕಿಯ ತಾಯಿಯ ದೆಶೆಯನ್ನು ಹೊಂದಿದವರಾದರು. 'ಇವಳ ಈ ಸ್ಥಿತಿಯನ್ನು ನೋಡಿಕೊಂಡು ಇರಲಾರೆ; ಅವನನ್ನು ಇವಳೊಡನೆ ಕೂಡಿಸುವ ದಾರಿಯನ್ನೂ ಕಾಣೆ; ಇವಳು ನೋಯದಂತೆ ಮಾಡುವ ಬಗೆಯನ್ನೂ ಕಾಣೆ ;

ನಾನೇನು ಮಾಡಬಲ್ಲೆ !' ಎಂದು ನೋಯುವ ತಾಯಿಯ ಮಾತುಗಳಾಗಿವೆ ಈ ಪಾಶುರಗಳು.

ಪೆರುಮಾದಾಳ್ ವಾಯ್ ವೆರುವಿ
ವೇಂಗಡಮೇ ವೇಂಗಡಮೇ ಎನ್ಗಿನ್ರಾಳ್‌ಆಲ್
ಮರುವಾಳಾಲ್ ಎನ್ ಕುಡಂಗಾಲ್, ವಾಳ್‌ನೆಡುಂಗಣ್
ತುಯಿಲ್ ಮರಂದಾಳ್, ವಂಡು ಆರ್ ಕೊಂಡಲ್
ಉರುವಾಳನ್ ವಾನವರ್‌ತವರ್ ಉಯಿರ್‌ಆಳನ್
ಒರುತಿರೈನೀರ್ ಪೌವ್ವಂಕೊಂಡ
ತಿರುವಾಳನ್ ಎನ್‌ಮಗಳ್ಳೆ ಶೆಯ್‌ದನಕಳ್
ಎಂಗನಂ ನಾನ್ ಶಿಂದಿಕ್ಕೇನೇ ॥೧॥

(ನನ್ನ ಕುವರಿಯು) (ಪೆರುಮಾದಾಳ್) ಅಂಜದವಳಾಗಿ (ವಾಯ್‌ವೆರುವಿ) ಬಾಯಿಂದ ಕನವರಿಸುವವಳಾಗಿ (ವೇಂಗಡಮೇ ವೇಂಗಡಮೇ ಎನ್ಗಿನ್ರಾಳ್) ವೇಂಗಡವೇ, ವೇಂಗಡವೇ ಎಂದು ಹೇಳುತ್ತಾಳೆ. (ಎನ್‌ಕುಡಂಗಾಲ್‌ಮರು ವಾಳ್) ನನ್ನ ಮಡಿಲಿನಲ್ಲಿ ಹೊಂದಿರುವುದಿಲ್ಲ. (ವಾಳ್‌ನೆಡುಕಣ್) ಕತ್ತಿಯನ್ನು ಹೋಲುವ ನೀಳವಾದ ಕಣ್ಣುಗಳಲ್ಲಿ (ತುಯಿಲ್‌ಮರಂದಾಳ್) ನಿದ್ರೆಮಾಡುವುದನ್ನು ಮರೆತಳು. (ವಂಡು) ದುಂಬಿಯಂತೆಯೂ (ಆರ್‌ಕೊಂಡಲ್) ನೀರುಂಡ ಮೇಘ ದಂತೆಯೂ (ಉರು ಆಳನ್) ದಿವ್ಯಮಂಗಳ ವಿಗ್ರಹವನ್ನುಳ್ಳವನೂ, (ವಾನವರ್ ತವರ್ ಉಯಿರ್ ಆಳನ್) ನಿತ್ಯಸೂರಿಗಳಿಗೆ ಉಸಿರಾಗಿರುವವನೂ, (ಒಲಿ ತಿರೈ ನೀರ್) ಘೋಷಿಸುವ ಅಲೆಗಳ ನೀರು ತುಂಬಿರುವ (ಪೌವಂ ಕೊಂಡ) ಸಮುದ್ರದಿಂದ ಮೂಡಿ ಬಂದ (ತಿರು ಆಳನ್) ಶ್ರೀದೇವಿಯನ್ನು ಆಳುವವನೂ ಆದ ಸರ್ವೇಶ್ವರನು (ಎನ್‌ಮಹಳ್ಳೆ) ನನ್ನ ಮಗಳನ್ನು ಕುರಿತಂತೆ (ಶೆಯ್‌ದನಹಳ್) ಮಾಡಿದುದನ್ನು (ನಾನ್ ಎಂಗನಂ ಶಿಂದಿಕ್ಕೇನ್) ನಾನು ನೆನೆಯುವುದಕ್ಕಾದರೂ ಶಕ್ಯವಾಗುವುದೇ ?

'ವಿಧೇರಿಕ್ಷ್ವಾಕುಲಬ್ಧಾಯ ವಿಭೀಷಣಕೃತೇ ಪುನಃ । ದತ್ತಾಯ'— ಎಂದು ತಾನೇ ಹೇಳಿರುವುದು ಶ್ರೀರಂಗನಾಥನ ಆಗಮನವನ್ನು, ಹೀಗಿರಲು ಇಲ್ಲಿ 'ವೇಂಕಟಾದ್ರಿ'ಯನ್ನು ಹೇಳಿರುವುದೇಕೆ ? ತಿರುಪ್ಪಾಣಾಳ್ವಾರವರು

'ಅಮಲನಾದಿ ಪಿರಾನ್'ನಲ್ಲಿ ಪರಮಪದವನ್ನೂ ತಿರುಮಲೆಯನ್ನೂ ತಿರುವ ರಂಗವಾಗಿ ಅನುಭವಿಸಿದನಂತರ ಲೋಕಗಳನ್ನು ಅಳೆದವನನ್ನೂ ಕಾಕುತ್ಸ್ಥನನ್ನೂ ಅನುಭವಿಸಿ ತಿರುವೇಂಗಡವನ್ನು ಅನುಸಂಧಾನವಮಾಡಿ, ನರಸಿಂಹ ರೂಪಿಯನ್ನೂ, ಆಲದೆಲೆಯಮೇಲೆ ಶಯನಿಸಿದವನನ್ನೂ, 'ವೆಣ್ಣೈಯುಂಡವಾಯನ್' ಆದ ಶ್ರೀ ಕೃಷ್ಣನನ್ನೂ ಅನುಭವಿಸಿ 'ಇನ್ನ ಮಂದನ್ನೈ ಕಂಡಕಣ್ಗಳ್ ಮತ್ತೊನ್ರಿನೈ ಕಾಣಾವೇ' ಎಂದು ಅತಿಮಾತ್ರವಾದ ಪ್ರಾವಣ್ಯವನ್ನು ಶ್ರೀರಂಗನಾಥನಲ್ಲಿ ತೋರಿದರಷ್ಟೇ ? ತಿರುಮಂಗೈಆಳ್ವಾರ್ ಅವರೂ ಸಹ ಆ ಎಲ್ಲ ಅವತಾರ ಗಳನ್ನೂ ರಂಗನಾಥನೆಂದು ಅನುಸಂಧಾನ ಮಾಡಿದ್ದಾರೆ. ಅಂದು ಶ್ರೀರಂಗ ನಾಥ ದಕ್ಷಿಣದ ಬಾಗಿಲಿನಿಂದ ಹೊಕ್ಕು ಶಯನಿಸಿದನು ಇಲ್ಲಿ. ಭಟ್ಟರವರು 'ತಿರುವಾಶರ್ಕಳಾಲೆ ಪುಹುಂದತಾಹ ಅನುಭವಮ್ ಉಂಡಾಯಿತ್ತು' ಎಂದು ಹೇಳಿದರಂತೆ ಅಮಲನಾದಿ ಪಿರಾನ್ ಪ್ರಬಂಧದ ಅನುಭವದ ಬಗೆಗೆ.

ಈ ನನ್ನ ಮಗಳು ತನ್ನಿಂದ ಮರೆಸಬಹುದಾದುದನ್ನೆಲ್ಲಾ ಮರೆಸಿದಳು. ಈಗ ಇದನ್ನು ಮರೆಸಲಾಗದವಳಾದಳು. ಪರತ್ವವನ್ನೂ ವ್ಯೂಹವನ್ನೂ ವಿಭವವನ್ನೂ ಬಿಟ್ಟು ಬಿಟ್ಟು ಸ್ವಾಮಿ ಒಲಿದು ನಿಂತಿರುವ ದಿವ್ಯದೇಶಗಳನ್ನು ಕುರಿತು ಕನವರಿಸುತ್ತಾಳೆ. ಆ ಮಾತು ಬಹಳ ಆಕರ್ಷಕವಾಗಿದೆಯಂತೆ. 'ಸೀತೇತಿ ಮಧುರಾಂ ವಾಣೀಂ' ಎಂದಂತೆ ಅವನು ಕನವರಿಸಬೇಕಾಗಿರುವಾಗ ಹಾಗೆ ಇವಳು ಬಾಯಿ ಬಾಯಿ ಬಿಡುವಂತಾಯಿತು. 'ನಿನ್ನ ಮಡಿಲಿನಲ್ಲಿ ಅವಳನ್ನು ಇಟ್ಟುಕೊಂಡು ಸಮಾಧಾನ ಮಾಡಬಹುದಲ್ಲಾ'—ಎಂದು ಕೇಳಿದರೆ ತಾಯಿ ಹೇಳುತ್ತಾಳೆ–'ಹಾಗಾಗುವುದಿಲ್ಲವಲ್ಲ ! ತಾಯಿಯ ಮಡಿಲಲ್ಲಿಯೂ ಸಮಾಧಾನ ಹೊಂದಲಾರದವಳಾಗಿದ್ದಾಳೆ ಇವಳು. ನನ್ನ ಮಡಿಲನ್ನು ಬಿಟ್ಟು ಬೇರೆ ಅರಿಯದೆ ಇದ್ದವಳು ಈಗ ನನ್ನ ಮಡಿಲಿನಲ್ಲಿ ಇರಲಾರದಾಗಿದ್ದಾಳೆ'.— ಎಂದು. ಹೋಗಲಿ ಹಾಸುಗೆಯಲ್ಲಾದರೂ ಮಲಗಿ ನಿದ್ರಿಸುವಳೋ ? ದೊಡ್ಡ ಊರಿಂದ ಒಕ್ಕಲೆತ್ತಿಕ್ಕೊಂಡು ಹೋದ ಹಾಗೆ ನಿದ್ರೆ ಇವಳ ವಿಶಾಲ ವಾದ ಕಣ್ಣಿಂದ ಒಕ್ಕಲೆತ್ತಿಕ್ಕೊಂಡು ಹೊರಟು ಹೋಗಿದೆ,

'ಸರ್ವರಸನು' ಎಂದು ಹೇಳುವ ಆ ಸ್ವಾಮಿಯನ್ನು ನಿತ್ಯಮುಕ್ತರೆಂಬ ಭೃಂಗಗಳು ಮುತ್ತಿಕೊಂಡು ಅನುಭವಿಸುವರು. ಅರ್ಧಕ್ಷಣವೂ ಅವರು ಅವನನ್ನು ಅನುಭವಿಸದೆ ಇರಲಾರರು. ಸಮುದ್ರದಲ್ಲಿ ಅಂತರ್ಹಿತೆಯಾಗಿದ

ಶ್ರೀದೇವಿಯನ್ನು ಸಮುದ್ರ ಮಥನಮಾಡಿ ಪಡೆದುಕೊಂಡನು ಆ ಸರ್ವೇಶ್ವರ. ಇದೆಲ್ಲವೂ ನನ್ನ ಮಗಳನ್ನು ನೋಯಿಸಲು ಮಾಡಿದ ವ್ಯಾಪಾರವಾಗಿದೆ. ಇವನು ಇವಳನ್ನು ಪಡೆಯಲು ಮಾಡಿದ ಈ ವ್ಯಾಪಾರಗಳನ್ನು ನಾನು ನೆನೆಯುವುದಕ್ಕಾದರೂ ಆಗುವುದೋ ?

**ಕಲೈ ಆಳಾ ಅಹಲ್ ಅಲ್‌ಕುಲ್‌ಕನೆವಳೈಯುಂ ಕೈ ಆಳಾ**
**ಎನ್ ಶೆಯ್‌ಹೇನ್ ನಾನ್**
**ವಿಲೈ ಆಳಾ ಅಡಿಯೇನೈ ವೇಂಡುದಿಯೋ ವೇಂಡಾಯೋ**
**ಎನ್ನುಂ ಮೆಯ್ಯಂ**
**ಮಲೈಯಾಳನ್ ವಾನವರ್‌ತಮ್ ತಲೈ ಆಳನ್**
**ಮರಾಮರಂ ಏಟ್ ಎಯ್‌ದ ವೆನ್ರಿ**
**ಶಿಲೈಯಾಳನ್ ಏನ್‌ಮಹಳೈ ಶೆಯ್‌ದನಹಳ್**
**ಎಂಗನೆಂ ನಾನ್ ಶಿಂದಿಕ್ಕೇನೇ ॥೨॥**

(ಅಹಲ್ ಅಲ್‌ಕುಲ್) ವಿಶಾಲವಾದ ನಿತಂಬವು (ಕಲೈ ಆಳಾ) ವಸ್ತ್ರವನ್ನು ಧರಿಸಿ ನಿಲ್ಲುವುದಿಲ್ಲ. (ಕೈ) ಕೈಗಳಾದರೋ (ಕನಂ ವಳೈಯುಂ ಆಳಾ) ಚಿನ್ನದ ಬಳೆಗಳನ್ನು ಆಳುವುದಿಲ್ಲ. (ನಾನ್ ಎನ್‌ಶೆಯ್‌ಹೇನ್) ಇದಕ್ಕಾಗಿ ನಾನು ಏನನ್ನು ಮಾಡಬಲ್ಲೆ ? (ಅಡಿಯೇನೈ) "ದಾಸಿಯಾಗಿರುವ ನನ್ನನ್ನು (ವಿಲೈ ಆಳ್ ಆ ವೇಂಡುದಿಯೋ) ಮತ್ತೊಬ್ಬರಿಗೆ ಮಾರುವುದಕ್ಕರ್ಹವಾದ ಕೆಲಸ ದವಳನ್ನಾಗಿ ಸ್ವೀಕರಿಸಲು ಮನಸ್ಸು ಮಾಡುವಿಯೋ ? (ವೇಂಡಾಯೋ) ಮಾಡುವಿದಿಲ್ಲವೋ ?" (ಎನ್ನುಂ) ಎಂದು ಹೇಳುತ್ತಾಳೆ. (ಮೆಯ್ಯಂ ಮಲೈ ಆಳನ್) ತಿರುಮೆಯ್ಯಮೆಂಬ ಬೆಟ್ಟವನ್ನು ವಾಸಸ್ಥಾನವನ್ನಾಗಿ ಉಳ್ಳವನೂ, (ವಾನವರ್‌ತಮ್ ತಲೈಯಾಳನ್) ನಿತ್ಯಸೂರಿಗಳಿಗೆ ನಿರ್ವಾಹಕನಾಗಿರುವವನೂ (ಏಟ್‌ಮರಾಮರಂ ಎಯರ್‌ದ) ಸಪ್ತಸಾಲವೃಕ್ಷಗಳನ್ನು ನಾಶಪಡಿಸಿದ (ವೆನ್ರಿ) ಜಯವನ್ನುಳ್ಳ (ಶಿಲೈ ಆಳನ್) ಬಾಣವನ್ನು ಉಳ್ಳವನೂ ಆದ ಪರಮಾತ್ಮನು (ಎನ್‌ಮಹಳೈ ಶೆಯ್‌ದನಹಳ್ ಎಂಗನಂ ನಾನ್ ಶಿಂದಿಕ್ಕೇನ್) ನನ್ನ ಕುವರಿ ಯನ್ನು ಕುರಿತಂತೆ ಮಾಡಿದುದನ್ನು ನನ್ನಿಂದ ನೆನೆಯುವುದಕ್ಕಾದರೂ ಆಗುವುದೋ ?

ಮೊದಲು ವಿಶಾಲವಾಗಿದ್ದ ನಿತಂಬ ಪ್ರದೇಶ ಈಗ ವಿರಹಕೃಶವಾದ ಕಾರಣ ವಸ್ತ್ರವನ್ನು ಧರಿಸುತ್ತಿಲ್ಲ. ಶ್ಲಾಘ್ಯವಾದ ಬಳೆಗಳೂ ಕೈಸಲ್ಲಿ ತಂಗುವು ದಿಲ್ಲಿ ; ಜಾರಿ ಹೋಗುತ್ತಿವೆ. 'ಕನವಳ್ಳಿ ಅಹಂಮಮಂಕೃತಿಹಳ್' ಎಂಬಂತೆ ತ್ಯಾಜ್ಯವಾದ ಇವೆರಡೂ ಬೇರೆಯ ಆಕಾರದಿಂದ 'ದಾಸೋಹಂ' ಎನ್ನುವಂತೆ ಉಪಾದೇಯಗಳಾಗುವುದರಿಂದ ಕೈಂಕರ್ಯವಮಾಡಲು ಅರ್ಹವಾದ ಉಪಾ ಯಾಥಾತ್ಮ್ಯವಸಾಯಂಕ್ಕೆ ಅಪೇಕ್ಷಿತಗಳೇ ಎಂಬ ಸ್ವಾಪದೇಶವೂ ಇಲ್ಲಿ ಸೂಚಿತ ವಾಗಿದೆ. 'ನಾನಿವಳ ಬಗೆಗೆ ಏನು ಮಾಡಬಲ್ಲೆ ?' ಎನ್ನುತ್ತಾಳೆ ತಾಯಿ. ವಸ್ತ್ರವೂ ಬಳೆಯೂ ತಂಗುವಂತೆ ಮಾಡುವೆನೋ ? ಇವಳು ಅವನಿಗಾಗಿ ಹಂಬಲಿಸದಂತೆ ಮಾಡುವೆನೋ ? ಅವನು ಇವಳನ್ನು ದಾಸಿಯನ್ನಾಗಿ ಸ್ವೀಕರಿಸುವಂತೆ ಮಾಡುವೆನೋ ? 'ವಿಲೈಯಾಳಾ' ಎಂಬುವುದಕ್ಕೆ ಎರಡು ಬಗೆಯ ಅರ್ಥಗಳುಂಟು. 'ನಿನ್ನಿಂದಲೂ ಮತ್ತೊಬ್ಬರದನ್ನಾಗಿ ಮಾಡುವುದ ಕ್ಕಾಗದ ಅನನ್ಯಾರ್ಹಳಾದ ನನ್ನನ್ನು' ಎಂದು ಒಂದು ಅರ್ಥ. 'ಕೂಲಿಯಾಳಾಗಿ ನಿನಗೆ ಕ್ರಯವಿಕ್ರಯಾರ್ಹೆಯಾದ ಇಷ್ಟವಿನಿಯೋಗಾರ್ಹಳಾದ ನನ್ನನ್ನು' ಎಂದು ಮತ್ತೊಂದು ಅರ್ಥ. ನಾನು ಜೀವಿಸುವಂತಾಗಲು ನನ್ನನ್ನು ಸ್ವೀಕರಿಸುವಿಯೋ ? ಇಲ್ಲವೋ ? ಇಲ್ಲವಾದರೆ ನಾನು ಜೀವಿಸಿರಲಾರೆ. 'ನ ಚಾಸ್ಯ ಮಾತಾ ನ ಪಿತಾ ನ ಚಾನ್ಯಃ ಸ್ನೇಹಾದ್ವಿಶಿಷ್ಟೋಽಸ್ತಿ ಮಯಾಸ ಮೋವಾ । ತಾವದ್ಧ್ಯಹಂದೂತ ಜಿಜೀವಿಷೇಯಂ ಯಾವತ್ಪ್ರವೃತ್ತಿಂ ಶೃಣುಮಾಂ ಪ್ರಿಯಸ್ಯ ॥ ಎಂದು ಸೀತಾ ದೇವಿಯು ಹೇಳಿದಳಷ್ಟೇ ? 'ಅಹಂ ಶಿಷ್ಯಾ ಚ ದಾ ಸೀ ಚ' ಎನ್ನುವಂತೆ ಕ್ರಯವಿಕ್ರಯಾರ್ಹವಾಗಿರುವಂತೆ ನನ್ನನ್ನು ಸ್ವೀಕರಿಸ ಲಾರೆಯಾ ? ಹೀಗೆ ಮಾಡಿದವರು ಯಾರು ಎಂದರೆ ಹೇಳುತ್ತಾಳೆ, 'ನಿತ್ಯಸೂರಿ ಗಳಿಗೆ ನಿರ್ವಾಹಕನಾಗಿ, ಸೌಲಭ್ಯವನ್ನು ತೋರಿಸಿ ತಿರುಮಯ್ಯದಲ್ಲಿ ಬಂದು ನಿಂತು ಸನ್ನಿಹಿತನಾದವನು—ಎಂದು' ಸಪ್ತಸಾಲಗಳನ್ನು ಒಂದೇ ಬಾಣದಿಂದ ಭೇದಿಸಿದವನು ಅವನು. ವಿಜಯಶ್ರೀಕರವಾದ ಧನುಸ್ಸನ್ನುಳ್ಳವನು ; ವಿಶ್ವಾಸವಿಲ್ಲದವರೂ ವಿಶ್ವಾಸ ತೋರುವ ಹಾಗೆ ಮಾಡಿದವನವನು. ಪ್ರಣ ಯಿತ್ವ ನಿರ್ವಹಣ ಶಕ್ತಿ ಅವನದು. ನನ್ನ ಮಂಗಳನ್ನು ಪಡೆಯಲು ಅವನು ಮಾಡಿದ ಈ ವ್ಯಾಮೋಹಕರವಾದ ವ್ಯಾಪಾರವನ್ನು ನಾನು ನೆನೆಯುವುದ ಕ್ಕಾದರೂ ಆದೀತೋ ?

ಮಾನಾಯ್ ಮೆನ್ ನೋಕ್ಕಿ ವಾಳ್ ನೆಡುಂ ಕಣ್ಣೀರ್
ಮಲ್ಹುಂ ವಳೈಯುಂ ಶೋರುಂ
ತೇನಾಯ್ ನರುಂತುೞಾಯ್ ಅಲಂಗಲಿನ್ ತಿರಂ
ಪೇಶಿ ಉರಂಗಾಳ್ ಕಾಣ್ಮಿನ್
ಕಾನಾಯನ್ ಕಡಿಮನೈಯಿಲ್ ತಯಿರುಂಡು
ನೆಯ್ ಪರುಹ ನಂದನ್ಪೆತ್ತ
ಆನಾಯನ್ ಎನ್ ಮಹಳೈ ಶೆಯ್ದನಹಳ್
ಅಮ್ಮನೈಮೀರ್ ಅರಿಹಿಲೇನೇ ॥೩॥

(ಮಾನ್ ಆಯ ಮೆನ್ ನೋಕ್ಕಿ) ಜಿಂಕೆಯ ನೋಟವನ್ನು ಹೋಲುವ ನೋಟವನ್ನುಳ್ಳ ನನ್ನ ಮಗಳು (ವಾಳ್ನೆಡು ಕಣ್ನೀರ್ ಮಲ್ಹುಂ) ಪ್ರಕಾಶವನ್ನು ಚೆಲ್ಲುವ ನೀಳವಾದ ಕಣ್ಣುಗಳಲ್ಲಿ ಕಣ್ಣೀರನ್ನು ತುಂಬಿಕೊಂಡಿದ್ದಾಳೆ. (ವಳೈಯುಂ ಶೋರುಂ) ಇವಳ ಬಳೆಗಳು ಕೈಯಿಂದ ಜಾರಿ ಹೋಗುತ್ತಿವೆ. (ತೇನಾಯ ನರು ತುೞಾಯ್) ಮಕರಂದವನ್ನು ತುಂಬಿಕೊಂಡು ಅಧಿಕವಾದ ಸೌಗಂಧ್ಯ ಹೊಂದಿರುವ ತುಲಸಿಯ (ಅಲಂಗಲಿನ್ ತಿರಂ) ಮಾಲೆಯ ಪ್ರಕಾರಗಳನ್ನು (ಪೇಶಿ) ಹೇಳಿಕೊಂಡು (ಉರಂಗಾಳ್) ನಿದ್ದೆ ಮಾಡದೆ ಇರುವವಳಾಗಿದ್ದಾಳೆ. (ಕಾಣ್ಮಿನ್) ಈ ಸ್ಥಿತಿಯನ್ನು ಕಣ್ಣಿಂದ ನೋಡಿ. (ಕಾನ್ ಆಯನ್) ಕಾಡಿನಲ್ಲಿ ತಿರಿಯುವವನೂ (ಕಡಿಮನೈಯಿಲ್) ಕಾವಲಿಟ್ಟಿದ್ದ ಮನೆಗಳಲ್ಲಿಯೂ (ತಯಿರ್ ಉಂಡು) ಮೊಸರನ್ನು ಉಂಡು (ನೆಯ್ ಪರುಹ) ತುಪ್ಪವನ್ನು ಕುಡಿಯುವಂತಹ (ನಂದನ್ ಪೆತ್ತ ಆಣ್ ಆಯನ್) ನಂದಗೋಪನು ಪಡೆದು ಕೊಂಡ ಗೋಪಾಲ ಕೃಷ್ಣನಾದ ಪರಮಾತ್ಮನು (ಎನ್ಮಹಳೈ ಶೆಯ್ದನಹಳ್) ನನ್ನ ಮಗಳ ಬಗೆಗೆ ಮಾಡಿದ ಪ್ರಕಾರಗಳನ್ನು (ಅಮ್ಮನೈಮೀರ್ ಅರಿಹಿಲೇನ್) ತಾಯಂದಿರಾ, ನಾನು ಅರಿಯಲಾರದವಳಾಗಿದ್ದೇನೆ.

ಮುಗ್ಧವಾದ ಮತ್ತು ಮೃದುವಾದ ನೋಟವನ್ನು ಬೀರುವವಳು ಇವಳು. ಒಂದು ನೋಟದಿಂದಲೇ ಅವಳಿಗೆ ಒಬ್ಬನು ವಶನಾಗಿ ಹೋಗ ಬೇಕಾಗಿದೆ. ಆ ಕಣ್ಣುಗಳಲ್ಲಿ ಕಣ್ಣೀರಿನ ಕೋಡಿ ಹರಿಯುತ್ತಿದೆ. ಕಣ್ಣೀರು ನಿಲ್ಲುವಂತಿಲ್ಲ. ಕೈಯಲ್ಲಿ ಬಳೆಯೂ ನಿಲ್ಲುವಂತಿಲ್ಲ. ನಿದ್ರೆಯಿಂದ ಹೊತ್ತನ್ನು ಕಳೆಯಬಹುದೋ ಎಂದರೆ ಅದೂ ಇಲ್ಲ. ಅವನ ತುಲಸೀ ಮಾಲೆಯ

ಚೆಲುವನ್ನು ನೆನೆದು ನೆನೆದು 'ಎಂಥ ಮಧು ಪ್ರವಾಹ', 'ಎಂಥ ಮನೋಹರ ವಾದವರ್ಣ', 'ದಳದ ಚೆಲುವು ಎಂಥದೋ' 'ಎಂಥ ತಂಪು', 'ಎಂಥ ಸುಗಂಧ' ಎಂದೆಂದು ಹೇಳುತ್ತಾ ಇರುತ್ತಾಳೆ. ಅವನೋ ಕಾಡಿನಲ್ಲಿ ವಾಸಿಸುವುದಕ್ಕೂ, ಕಾಡುಮರಗಳ ಗುಣ ಅರಿಯುವುದಕ್ಕೂ, ನಂದನ ಮನೆಯಲ್ಲಿ ತುಪ್ಪ ಹಾಲು ಭುಜಿಸುವುದಕ್ಕೂ, ಹಸುಮೇಯಿಸುವುದಕ್ಕೂ ತಿಳಿದವನಾಗಿ ತಿರಿಯುತ್ತಿರುತ್ತಾನೆ. ಅಂಥವನು ನಾಗರಿಕರ ವ್ಯಾಪಾರದಲ್ಲಿ ತೊಡಗುವುದೇ ? ಕಾಡು ಮರದ ವಿಷಯ ಅರಿಯುವವನು ಹೆಂಗಳೆಯರನ್ನು ಅರಿಯಬಲ್ಲನೇ ? ಹೆಚ್ಚಾದ ತಪಸ್ಸನ್ನು ಮಾಡಿ ಚಕ್ರವರ್ತಿ 'ದೇಶವನ್ನಾಳುವ ಒಬ್ಬ ಮಗ ಬೇಕು' ಎಂದು ವ್ರತ ಹಿಡಿದಹಾಗೆ 'ಹಾಲು ಮೊಸರು ಬೆಣ್ಣೆಗಳು, ವ್ಯರ್ಥವಾಗಿ ಹೋಗಬಾರದು, ಅದನ್ನೆಲ್ಲಾ ಭುಜಿಸುವ ಒಬ್ಬ ಮಗ ಬೇಕು' ಎಂದು ಇದಕ್ಕಲ್ಲವೇ ಇವನನ್ನು ಪಡೆದದ್ದು ! 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದು ಹೇಳುವ ಭಗವದುತ್ಕರ್ಷವನ್ನಾದರೂ ಸ್ವಲ್ಪ ಅರಿಯಬಹುದು. ಆದರೆ ಪ್ರಣಯಧಾರೆಯಲ್ಲಿ ಅವನು ನನ್ನ ಮಗಳ ಬಗೆಗೆ ಮಾಡಿದುದನ್ನು ನನ್ನಿಂದ ಏನೂ ಅರಿಯುವುದಕ್ಕಾಗುತ್ತಿಲ್ಲ. ಹೀಗೆ ತಾಯಿ ಮಗಳ ಸ್ಥಿತಿಯ ಬಗೆಗೆ ನೋಯುತ್ತಾಳೆ.

> ತಾಯ್ ವಾಯಿಲ್‌ಶೊಲ್ ಕೇಳಾಳ್ ತನ್‌ಆಯ್‌ತ್ತೋಡು
> ಅಣೈಯಾಳ್ ತಡಮೆನ್ ಕೊಂಗೈಯೇ
> ಆರಚ್ಚಾನ್ದಣಿಯಾಳ್ ಎಂಪೆರುಮಾನ್
> ತಿರುವರಂಗಂ ಎಂಗೇ ಎನ್ನುಂ
> ಪೇಯ್ ಮಾಯೆ ಮುಲೈಯುಣ್ಡು ಇವ್ವುಲಹುಂಡ
> ಪೆರುವಯಿತ್ತನ್ ಪೇಶಿಲ್‌ನಂಗಾಯ್
> ಮಾಮಾಯನ್ ಎನ್‌ಮಹಳೈ ಶೆಯ್‌ದನಹಳ್
> ಮಂಗೈಮೀರ್ ಮದಿಕ್ಕಿಲೇನೇ ॥೪॥

(ನಂಗಾಯ್) ತಾಯಿಯರೇ, (ತಾಯ್‌ವಾಯಿಲ್‌ಶೊಲ್) ತಾಯಿಯಾದ ನನ್ನ ಮಾತುಗಳನ್ನು (ಕೇಳಾಳ್) ನನ್ನ ಮಗಳು ಕೇಳುವುದಿಲ್ಲ. (ತನ್‌ಆಯ ತ್ತೋಡು) ತನ್ನ ಗೆಳತಿಯರೊಡನೆ (ಅಣೈಯಾಳ್) ಸೇರುವುದಿಲ್ಲ, (ತಡಮೆನ್

ಕೊಂಗೈಯೋ) ವಿಶಾಲವೂ ಮೃದುವೂ ಆದ ತನ್ನ ಸ್ತನಗಳನ್ನು (ಆರ ಶಾಂದು ಅಣಿಯಾಳ್)ಮೊದಲಿನಂತೆ ಚೆಲುವಾಗಿ ಶ್ರೀಗಂಧದಿಂದ ಅಲಂಕರಿಸಿಕೊಳ್ಳುತ್ತಿಲ್ಲ. (ಎಂಬೆರುಮಾನ್ ತಿರುವರಂಗಂ ಎಂಗೇ ಎನ್ನುಂ) 'ನನ್ನ ಸ್ವಾಮಿ ಇರುತ್ತಿರುವ ತಿರುವರಂಗ ಎಲ್ಲಿ' ಎನ್ನುತ್ತಾಳೆ. (ಪೇಯ್‌ಮಾಯಮುಲೈಉಂಡು) ರಕ್ಕಸಿ ಆದ ಪೂತನಿಯು ಸಾಯುವಂತೆ ಸ್ತನ್ಯಪಾನ ಮಾಡಿ (ಇವ್ವುಲಹು ಉಂಡ ಪೆರುವಯಿತ್ತನ್) ಈ ಲೋಕಗಳನ್ನೂ ಭುಜಿಸಿದ ದೊಡ್ಡ ಉದರವನ್ನುಳ್ಳ (ಮಾಮಾಯನ್) ಅತ್ಯಂತ ಆಶ್ಚರ್ಯಭೂತನಾದವನು (ಎನ್‌ಮಹಳ್ಸೆಯ್‌ದನಹಳ್) ನನ್ನ ಮಗಳಿಗೆ ಮಾಡಿದುದನ್ನು (ಪೇಶಿಲ್) ಹೇಳ ಹೊರಟರೆ ಮುದಿಕ್ಕಿಲೇನ್) ಇಷ್ಟೆಂದು ಹೇಳುವುದಕ್ಕಾಗದೆ ಹೋಗುತ್ತಿದ್ದೇನೆ.

ಅವಳಿಗೆ ಪ್ರಿಯವನ್ನೇ ಬಯಸುವ ತಾಯಿಯಾದ ನನ್ನ ಮಾತಿನಂತೆ ಈ ಮಗಳು ನಡೆಯುವುದಿಲ್ಲ. ಅದನ್ನು ಕೇಳುವುದಿಲ್ಲ. ಯಾವಾಗಲೂ ಪ್ರಿಯವನ್ನೇ ಹೇಳುವ ಗೆಳತಿಯರ ಜೊತೆಗಾದರೂ ಹೊಂದಿಕೊಂಡು ಇರಬಹುದಲ್ಲಾ ? ಅವರನ್ನು ಉಪೇಕ್ಷಿಸಬಹುದೇ ? ಅವರೊಡನೆಯೂ ಸೇರುವುದಿಲ್ಲ. ಅವಳು ತನ್ನ ದೇಹಾಲಂಕರಣವನ್ನೂ ಉಪೇಕ್ಷಿಸುತ್ತಿದ್ದಾಳೆ. ತನ್ನ ಸ್ತನಮಂಡಲವನ್ನು ಚಂದನದಿಂದ ಸಿಂಗರಿಸಿಕೊಳ್ಳುತ್ತಲೂ ಇಲ್ಲ. ನನಗೆ ತಕ್ಕ ಸ್ವಾಮಿಯಾದವನು ನನ್ನ ಸೇವೆಯನ್ನು ಕೈಕೊಳ್ಳುವ ಸ್ಥಾನವಾದ 'ಶ್ರೀರಂಗಕ್ಷೇತ್ರ' ಎಲ್ಲಿ ಎನ್ನುತ್ತಾಳೆ. ಕಂಡ ಕಂಡವರನ್ನೆಲ್ಲಾ ಹೀಗೆ ಕೇಳುತ್ತಿದ್ದಾಳೆ. ತಾಯಿಯನ್ನೂ ಉಳಿದವರನ್ನೂ ಉಪೇಕ್ಷಿಸುವಂತೆ ನಿರುಪಾಧಿಕಬಂಧುವಾದವನೂ ತನ್ನಲ್ಲಿ ಭಾವಬಂಧವನ್ನು ಉಂಟು ಮಾಡಿದವನೂ ಆದವನು ಇರುವ ದೇಶ ಯಾವುದು ಎನ್ನುತ್ತಾಳೆ.

ಪೂತನಿಯ ಸ್ತನ್ಯಪಾನಮಾಡಿ ವಿರೋಧಿನಿರಸನ ಮಾಡಿದಂತೆ ಲೋಕವನ್ನೆಲ್ಲಾ ಉಂಡು ಅನುಕೂಲರಕ್ಷಣವನ್ನೂ ಮಾಡಿದವನವನು. ಇದನ್ನು ಮಾಡಬಹುದು, ಇದನ್ನು ಮಾಡಬಾರದು ಎಂದು ಅರಿಯದೆ ಇವಳ ಬಗೆಗೆ ಇವನು ಮಾಡಿದುದನ್ನು ಪರಿಚ್ಛೇದಿಸುವುದಕ್ಕೆ ನಾನು ಅಶಕ್ತಳಾಗಿದ್ದೇನೆ— ಎನ್ನುತ್ತಾಳೆ ನಾಯಕಿಯ ತಾಯಿ.

ಪೂಣ್ ಮುಲೈಮೇಲ್ ಶಾನ್ದಣಿಯಾಳ್ ಪೊರುಕಯಲ್ ಕಣ್
ಮೈ ಎಟುದಾಳ್ ಪೂವೈ ಪೇಣಾಳ್
ಏಣರಿಯಾಳ್ ಎತ್ತನೈಯುಂ ಎಂಬೆರುಮಾನ್
ತಿರುವರಂಗಂ ಎಂಗೇ ಎನ್ನುಂ
ನಾಣ್ ಮಲರಾಳ್ ನಾಯಹನಾಯ್
ನಾಂ ಅರಿಯವಾಯಪ್ಪಾಡಿ ವಳರ್ನ್ದ ನಂಬಿ
ಆಣ್ ಮಹನಾಯ್ ಎನ್ ಮಹಳೈ ಶೆಯ್ ದನಹಳ್
ಅಮ್ಮನೈಮೀರ್ ಅರಿಹಿಲೇನೇ ॥೫॥

(ಪೂಣ್‌ಮುಲೈಮೇಲ್) ಆಭರಣಗಳಿಂದ ಅಲಂಕೃತವಾದ ಸ್ತನಮಂಡಲದ ಮೇಲೆ (ಶಾನ್ದಣಿಯಾಳ್) ಚಂದನವನ್ನು ಹಚ್ಚಿಕೊಳ್ಳುವುದಿಲ್ಲ. (ಪೊರುಕಯಲ್‌ಕಣ್) ಒಂದರೊಡನೊಂದು ಜಗಳವಾಡುವ ಎರಡು ಮೀನುಗಳ ಹಾಗೆ ಇರುವ ಕಣ್ಣುಗಳಿಗೆ (ಮೈಎಟುದಾಳ್) ಕಾಡಿಗೆಯನ್ನಿಟ್ಟುಕೊಳ್ಳುವುದಿಲ್ಲ. (ಪೂವೈಪೇಣಾಳ್) ತಾನು ಬೆಳೆಸಿಕೊಂಡಿರುವ ಪೂವೈ ಪಕ್ಷಿಯನ್ನೂ ಆದರಿಸುವುದಿಲ್ಲ. (ಎತ್ತನೈಯುಂ ಏಣರಿಯಾಳ್) ಯಾವ ವಸ್ತುವನ್ನೂ ಮನಸ್ಸಿನಲ್ಲಿ ನೆನೆಯುವುದಿಲ್ಲ. (ಎನ್‌ತಿರು ಅರಂಗಂ ಎಂಗೇ ಎನ್ನುಂ) 'ನನ್ನ ಸ್ವಾಮಿಯ ಶ್ರೀರಂಗ ಎಲ್ಲಿ' ಎಂಬ ಮಾತನ್ನೇ ಆಡಿಕೊಂಡಿರುತ್ತಾಳೆ. (ನಾಳ್‌ಮಲರಾಳ್ ನಾಯಕನ್‌ಆಯ್) ಕಮಲಸಂಭವೆಯಾದ ಶ್ರೀದೇವಿಗೆ ವಲ್ಲಭನಾದವನೂ, (ನಾಮ್ ಅರಿಯ ಆಯ್‌ಪ್ಪಾಡಿ ವಳರ್ನ್ದನಂಬಿ) ನಮಗೆಲ್ಲಾ ತಿಳಿಯುವಂತೆ ನಂದಗೋಕುಲದಲ್ಲಿ ಬೆಳೆದವನೂ ಆದ ಪರಮಾತ್ಮನು (ಆಣ್‌ಮಹನ್‌ಆಯ್) ದೊಡ್ಡ ಪುರುಷನಾಗಿದ್ದುಕೊಂಡು (ಎನ್‌ಮಹಳೈಶೆಯ್‌ದನಹಳ್ ಅಮ್ಮನೈಮೀರ್ ಅರಿಹಿಲೇನ್) ನನ್ನ ಮಗಳ ಬಗೆಗೆ ಮಾಡಿದುದನ್ನು, ಎಲೈ ತಾಯಂದಿರಾ, ನಾನರಿಯಲಾರದವಳಾಗಿದ್ದೇನೆ.

ಮುತ್ತಿನಹಾರಗಳಿಂದ ಅಲಂಕೃತವಾದ ಸ್ತನಮಂಡಲ ಅವಳದು. ಆ ಸ್ತನಮಂಡಲವೇ ಆಭರಣವಾಗಿದೆ. ಅದಕ್ಕೆ ಶ್ರೀಗಂಧವನ್ನು ಲೇಪಿಸಿಕೊಳ್ಳುತ್ತಿಲ್ಲ ಅವಳು. ಅವಳ ಕಣ್ಣುಗಳಿಗೆ ಯಾವುದರಿಂದಲೂ ಏನೂ ಚೆಲುವು ಆಗ ಬೇಕಾದುದಿಲ್ಲ. ಹೋಗಲಿ, ಮಂಗಳಾರ್ಥವಾಗಿ ಅಂಜನವನ್ನು ಇಟ್ಟುಕೊಳ್ಳ ಬಹುದಲ್ಲಾ! ಅದನ್ನೂ ಮಾಡುವುದಿಲ್ಲ. ಯಾವ ಲೀಲೋಪಕರಣವನ್ನೂ

ಆದರಿಸಲು. 'ಅನುಸಂಧಾನ ಮಾಡತಕ್ಕ ಪದಾರ್ಥ ಇದು'—ಎಂದು ಲೋಕ ಯಾತ್ರೆಯಲ್ಲಿ ಯಾವುದನ್ನೂ ಅನುಸಂಧಾನ ಮಾಡುವುದಿಲ್ಲ. ಅವನನ್ನು ಹೇಳಬೇಕಾದರೆ 'ಶ್ರಿಯಃ ಪತಿ' ಎಂದು ಒಬ್ಬಳನ್ನು ಮುಂದಿಟ್ಟುಕೊಂಡು ತಾನೇ ಹೇಳಬೇಕು? ಹೀಗೆ ನನ್ನ ಮಗಳಿಗೆ ಅವನು ಮಾಡಿದರೆ ಆ ದೇವಿ ಅಭಿಮುಖ್ಯ ತೋರುವಳೋ? ಅವಳಿಂದ ತಾನೇ ಇವನ ಸ್ವರೂಪ? ಅದನ್ನರಿಯದೆ ಹೀಗೆ ಮಾಡಬಹುದೇ? ಹೆಂಗಳೆಯರಿಗೆ ಕೈಯಾಳಾಗಿ ಅವರಿಂದ ತನ್ನನ್ನು ಪೂರ್ಣನೆಂದು ನೆನೆಯುವವನಲ್ಲವೇ ಅವನು? ಹೀಗೆ ಇಲ್ಲಿ ಬಂದಾಗ 'ಪತಿಂ ವಿಶ್ವಸ್ಯ' ಎಂದು ಪ್ರಭುತ್ವವನ್ನು ತೋರುತ್ತಾನೆ! ಇವಳೊಬ್ಬಳ ವಿಷಯದಲ್ಲಿ ತಗ್ಗಿ ನಡೆದರೆ ಅವರ ಪತಿತ್ವಕ್ಕೆ ಕೊರೆಯಾಗುವುದೋ?

ತಾದಾಡು ವನಮಾಲೈ ತಾರಾನೋ
ಎನ್ರೆನ್ರೇ ತಳರ್ನ್ದಾಳ್ ಕಾಣ್ವಿನ್
ಯಾದಾನುಂ ಒನ್ರುರೈಕ್ಕಿಲ್
ಎಂಬೆರುಮಾನ್ ತಿರುವರಂಗಮೆನ್ನುಂ, ಪೂಮೇಲ್
ಮಾದಾಳನ್ ಕುಡಮಾಡಿ ಮದುಶೂದನ್
ಮನ್ನರ್ಕ್ಕಾಯ್ ಮುನ್ನಂ ಶೆನ್ರ
ತೂದಾಳನ್ ಎನ್ನುಹಳ್ಳಿ ಶೆಯ್ದನಹಳ್
ಎಂಗನಂ ನಾನ್ ಶೊಲ್ಲುಹೇನೇ ॥೬॥

(ತಾದು ಆಡು) ಮಕರಂದ ತುಂಬಿರುವ (ವನಮಾಲೈತಾರಾನೋ) ವನ ಮಾಲೆಯನ್ನು ನನಗಿತ್ತು ಕರುಣಿಸಲಾರನೋ? (ಎನ್ರು ಎನ್ರುತಳರ್ನ್ದಾಳ್) ಎಂದು ಅನೇಕ ಸಲ ಹೇಳಿ ಸೊರಗಿ ಹೋದಳು. (ಯಾದಾನುಂ ಒನ್ರು ಉರೈಕ್ಕಿಲ್) ಅವಳಿಗೆ ಸಮಾಧಾನವುಂಟಾಗುವಂತೆ ಏನಾದರೂ ಒಂದು ಮಾತನ್ನು ಹೇಳಿದರೆ ಅದಕ್ಕೆ ಮಾರುತ್ತರವಾಗಿ (ಎಂಬೆರುಮಾನ್ ತಿರುವರಂಗಂ ಎನ್ನುಂ) 'ನಮ್ಮ ಸ್ವಾಮಿಯ ಶ್ರೀರಂಗ' ಎನ್ನುವ ಮಾತನ್ನೇ ಹೇಳುತ್ತಾಳೆ. (ಪೂಮೇಲ್ ಮಾದು ಆಳನ್) ಕುಸುಮದಲ್ಲಿ ಆವಿರ್ಭವಿಸಿದ ಶ್ರೀದೇವಿಗೆ ವಲ್ಲಭನೂ, (ಕುಡಮ್ ಆಡಿ) ಘಟನರ್ತನವನ್ನು ಮಾಡಿದವನೂ, (ಮದುಶೂದನ್) ಮಧುವೆಂಬ ಅಸುರನನ್ನು ಕೊಂದವನೂ (ಮುನ್ನಂ ಮನ್ನರ್ಕ್ಕು ಆಯ್ ತೂದು ಶೆನ್ರು) ಹಿಂದೊಂದು ಕಾಲದಲ್ಲಿ ಪಂಚಪಾಂಡವರಿಗಾಗಿ ದೌತ್ಯವನ್ನು

ನಡೆಸಿದವನೂ ಆದ (ಆಳನ್) ಸ್ವಾಮಿಯು (ಎನ್ ಮಹಳೈಶೆಯ್‌ದನಹಳ್ ನಾನ್ ಎಂಗನಂ ಶೊಲ್ಲುಹೇನ್) ನನ್ನ ಮಗಳ ವಿಷಯದಲ್ಲಿ ಮಾಡಿದುದನ್ನು ನಾನು ಹೇಗೆ ಹೇಳಬಲ್ಲೆ ?

'ತಾಯಿಯಾದ ನೀನು ನಾನಾಮುಖವಾಗಿ ಹಿತವನ್ನು ಹೇಳಿ ಅವಳ ಅವಸಾದವನ್ನು ಕಳೆಯಬೇಡವೇ ?' ಎಂದು ಹೇಳಿದರೆ ತಾಯಿ ಹೇಳುತ್ತಾಳೆ– 'ನಾವು ಏನನ್ನು ಹೇಳಿದರೂ ಅದು ಅವಳ ಕಿವಿಗೆ ಬೀಳುವುದೇ ಇಲ್ಲ. 'ತಿರುವರಂಗಂ' ಎಂಬುದನ್ನು ಬಿಟ್ಟು ಬೇರೆ ಮಾತನ್ನು ಅವಳು ಆಡುತ್ತಿಲ್ಲ. ನಾನೇನು ಹೇಳಲಿ ?'—ಎಂದು.

ವನದಲ್ಲಿ ಉಂಟಾದ ಮಾಲೆ ಅದು. ಅದರ ಮಕರಂದವಾಗಲೀ ಹೊಸತನವಾಗಲೀ ಸ್ವಲ್ಪವೂ ಕುಂದದೇ ಇರುತ್ತಿದೆ. ಅವನ ದೇಹ ಸ್ಪರ್ಶದಿಂದ ಅದು ಇನ್ನೂ ಪಲ್ಲವಿತವಾಗುತ್ತಿದೆ. 'ಅದನ್ನು ಕೊಡುವುದಿಲ್ಲವಲ್ಲ ! ಓ' ಎಂದು ವಿಷಾದವನ್ನು ಸೂಚಿಸುತ್ತಾಳೆ ನಾಯಕಿ. 'ಇಷ್ಟು ಪ್ರಾವಣ್ಯ ಹೊಂದಕೂಡದು,' 'ಇದು ನಿನ್ನ ಕುಲಕ್ಕೆ ತಕ್ಕುದಲ್ಲ,' 'ಅವನು ಸ್ತ್ರೀವಶನು' ಎಂದೆಂದು ಹಿತವಚನ ಹೇಳಿದರೆ ಅವಳು ಉತ್ತರವಾಗಿ–'ನನ್ನನ್ನು ಅನನ್ಯಾರ್ಹೆಯನ್ನಾಗಿ ಮಾಡಿದವನು ಇರುತ್ತಿರುವ ದೇಶ ಶ್ರೀರಂಗ'—ಎಂದು ಹೇಳುತ್ತಾಳೆ.

ಒಬ್ಬಳನ್ನು 'ಅನಪಾಯಿನಿ'ಯನ್ನಾಗಿ ಮಾಡಿರುವವನಲ್ಲವೇ ಅವನು ? 'ಅಗಲಿಕೆ' ಎಂದರೇನೆಂದು ತಿಳಿಯದಂತೆ ಮಾಡುವವನಲ್ಲವೇ ಅವನು ? ಆಶ್ರಿತ ವಿರೋಧಿ ನಿರಸನವೇ ಅವನ ವ್ರತವಲ್ಲವೋ ? ತಾನು ಒಲಿದವರಿಗಾಗಿ ತನ್ನನ್ನೇ ಕಷ್ಟಕ್ಕೊಳಪಡಿಸಿಕೊಳ್ಳುವವನು ಅವನು. ಈಗ ಇವಳನ್ನು ಹೀಗೆ ಅವನು ಪಾಡು ಪಡಿಸುತ್ತಿರುವುದನ್ನು ಯಾವ ಮಾತುಗಳಲ್ಲಿ ನಾನು ವರ್ಣಿಸಬಲ್ಲೆ ?

ವಾರಾಳುಂ ಇಳಂಕೊಂಗೈ ವಣ್ಣಂ
ವೇರು ಆಯಿನ ಆರು ಎಣ್ಣಾಳ್, ಎಣ್ಣಿಲ್
ಪೇರಾಳನ್ ಪೇರಲ್ಲಾಲ್ ಪೇಶಾಳ್
ಇಪ್ಪೆಣ್ ಪೆತ್ತೇನ್ ಎನ್‌ಶೆಯ್‌ ಹೇನ್ ನಾನ್

ತಾರಾಳನ್ ತಣ್ ಕುಡಂದೈನಹರಾಳನ್
ಐವರ್ಕ್ಕು ಆಯ್ ಅಮರಿಲ್ ಉಯರ್ತ್ತ
ತೇರಾಳನ್ ಎನ್ ಮಹಳೈಶೆಯ್ ದನಹಳ್
ಎಂಗನಂ ನಾನ್ ಶೆಪ್ಪುಹೇನೇ ॥೭॥

(ವಾರ್ ಆಳುಂ ಇಳಂಕೊಂಗೈ) ಕಂಚುಕವನ್ನು ಕಟ್ಟಿ ಅಡಗಿಸಬಹುದಾದ ಎಳೆಯ ಸ್ತನಗಳ (ವಣ್ಣಂ ವೇರು ಆಯಿನ ಆರು ಎಣ್ಣಾಳ್) ಬಣ್ಣವು ವಿವರ್ಣವಾದ ಬಗೆಯನ್ನು ನೆನೆಯುವುದಿಲ್ಲ. (ಪೇರಾಳನ್ ಪೇರ್ ಅಲ್ಲಾಲ್ ಪೇಶಾಳ್) ಸರ್ವೇಶ್ವರನ ಶ್ರೀನಾಮಗಳನ್ನು ಬಿಟ್ಟು ಬೇರಾವುದನ್ನೂ ಹೇಳುವುದಿಲ್ಲ. (ಇಪ್ಪೆಣ್ ಪೆತ್ತೇನ್ ನಾನ್ ಎನ್ ಶೆಯ್ ಹೇನ್) ಇಂಥ ಹೆಣ್ಣನ್ನು ಹೆತ್ತ ನಾನು ಏನನ್ನು ಮಾಡಬಲ್ಲೆ ? (ತಾರ್ ಆಳನ್) ಮಾಲೆಯನ್ನು ಧರಿಸಿಕೊಂಡಿರುವವನೂ, (ತಣ್ ಕುಡಂದೈನಹರಾಳನ್) ತಂಪಾಗಿರುವ ತಿರುಕ್ಕುಡಂ ದೈನಗರವನ್ನಾಳುವವನೂ, (ಐವರ್ಕ್ಕು ಆಯ್) ಪಂಚಪಾಂಡವರಿಗಾಗಿ (ಅಮರಿಲ್ ಉಯರ್ತ್ತ ತೇರಾಳನ್) ಮಹಾಭಾರತ ಸಂಗ್ರಾಮದಲ್ಲಿ ತೇರನ್ನು ನಡೆಸಿದವನೂ ಆದ ಸ್ವಾಮಿಯು (ಎನ್ ಮಹಳೈ ಶೆಯ್ ದನಹಳ್ ಎಂಗನಂ ನಾನ್ ಶೆಪ್ಪುಹೇನ್) ನನ್ನ ಮಗಳ ವಿಷಯದಲ್ಲಿ ಮಾಡಿದುದನ್ನು ಹೇಗೆ ತಾನೇ ಹೇಳಲಿ ?

ಅವನಲ್ಲಿ ಉಂಟಾದ ಭಾವಾತಿಶಯದ ಕಾರಣ 'ವಿಸಸ್ಮಾರ ತದಾತ್ಮಾನಂ' ಎಂದಂತೆ ಸ್ವವಿಷಯದಲ್ಲಿ ಅರಿವಿಲ್ಲದವಳಾಗಿದ್ದಾಳೆ. ತನ್ನ ದೆಶೆಯನ್ನೇ ಎಣಿಸದವಳು ಮತ್ತೊಂದನ್ನೂ ಗಮನಿಸುವುದಿಲ್ಲವಷ್ಟೇ ? ಸರ್ವೇಶ್ವರನಾದ ಭಗವಂತನ ಶ್ರೀನಾಮಗಳನ್ನು ಬಿಟ್ಟು ಮತ್ತೇನನ್ನೂ ಹೇಳುವುದಿಲ್ಲ. 'ಅವಾಪ ಪರಮಾಂ ಕಾಷ್ಠಾಂ ಮನಸಶ್ಚಾಪಿ ಸಂಯಮೇ'. ಸ್ವವಿಷಯದಲ್ಲಿಯೂ ಇತರ ವಿಷಯದಲ್ಲಿಯೂ ವಿರಕ್ತಿಯೂ ಭಗವದ್ವಿಷಯದಲ್ಲಿ ಪ್ರೀತಿಯೂ ಬದಲಾಗದೇ ಇರುವಂತಹ ಒಬ್ಬ ಹೆಣ್ಣುಮಗಳನ್ನು ನನ್ನಂತೆ ಪಡೆದವರು ಯಾರಾದರೂ ಉಂಟೋ ? ತಾಯಿಯ ಅನುಸಂಧಾನ ಇದು. ರಕ್ಷಣೆ ಮಾಡುವುದನ್ನೇ ವ್ರತವನ್ನಾಗಿ ಹೊಂದಿರುವ ಅವನು ಸ್ತ್ರೀವಧೆ ಮಾಡುತ್ತಿದ್ದಾನಲ್ಲಾ ! ದೋಷ ಯುಕ್ತರೂ ಅಪರಾಧಿಗಳೂ ಆದವರನ್ನು ರಕ್ಷಿಸುವುದಕ್ಕಾಗಿ ಇಲ್ಲಿ ಬಂದು ಸಾನ್ನಿಧ್ಯ ನೀಡಿದವನಲ್ಲವೇ ಅವನು ? ತನ್ನನ್ನು ಆಶ್ರಯಿಸಿದವರಿಗಾಗಿ ತನ್ನನ್ನೇ ಗಂಡಾಂತರಕ್ಕೆ ಒಳಪಡಿಸಿಕೊಳ್ಳುವವನಲ್ಲವೇ ಅವನು ?

ಆಗ ಭೀಷ್ಮಾದಿಗಳ ಅಂಬಿಗೆ ತನ್ನನ್ನು ಲಕ್ಷ್ಯವನ್ನಾಗಿಪಡಿಸಿಕೊಂಡ ಹಾಗೆ ಈಗ ತನಗೋಸ್ಕರ ಇವಳನ್ನು ಕಾಮಶರಕ್ಕೆ ಗುರಿಪಡಿಸುತ್ತಿದ್ದಾನೆ ! ಈಗ ಇವಳನ್ನು ಕಷ್ಟಕ್ಕೊಳಗಾಗಿಸಿದ ರೀತಿಯನ್ನು ನನ್ನಿಂದ ಹೇಳುವುದಕ್ಕಾಗುವುದೋ ?

ಉರವು ಆದುಂ ಇಲಳ್ ಎನ್ರು ಒಟಿಯೊಾದು
ಪಲರ್ ಏಶುಂ ಅಲರ್ ಆಯಿತ್ತಾಲ್
ಮರವಾದೆ ಎಪ್ಪೊಟುದುಂ ಮೊಾಯವನೇ
ಮಾದವನೇ ಎನ್ಗಿನ್ರಾಳಾಲ್
ಪಿರವಾದ ಪೇರಾಳನ್ ಪೆಣ್ಣಾಳನ್
ಮಣ್ಣಾಳನ್ ವಿಣ್ಣೋರ್ ತಂಗಳ್
ಅರವಾಳನ್ ಎನ್‌ಮಹಳ್ಳೆ ಶೆಯ್‌ದನಹಳ್
ಅಮ್ಮನೈಮೀರ್ ಅರಿಹಿಲೇನೇ ॥೮॥

(ಉರವು ಆದುಂ ಇಲಳ್) ತಾಯಿ ತಂದೆ ಎಂಬುವ ಸಂಬಂಧವನ್ನು ಸ್ವಲ್ಪವೂ ಹೊಂದಿಲ್ಲ, (ಎನ್ರು ಎನ್ರು ಪಲರ್) ಎಂದು ಮತ್ತೆ ಮತ್ತೆ ಹೇಳಿಕೊಂಡು ಅನೇಕರು (ಒಟಿಯಾದು ಏಶುಂ ಅಲರ್ ಆಯಿತ್ತು) ಯಾವಾಗಲೂ ನಿಂದಿಸು ವಂತಹ ಅಪವಾದ ಬೆಳೆದುಬಿಟ್ಟಿತು. ಈ ನನ್ನ ಹೆಣ್ಣು ಮಗಳಾದರೋ (ಮರವಾದೆ) ಮರೆಯದೆ (ಎಪ್ಪೊಟುದುಂ ಮಾಯವನೇ ಮಾದವನೇ ಎನ್ಗಿ ನ್ರಾಳ್) ಎಲ್ಲ ಕಾಲವೂ ಆಶ್ಚರ್ಯ ಗುಣಚೇಷ್ಟಿತನಾದ ಮಾಯನೇ, ಮಾಧವನೇ ಎಂದು ಹೇಳುತ್ತಿರುತ್ತಾಳೆ. (ಪಿರವಾದ) ಕರ್ಮಾಧೀನವಾದ ಜನ್ಮವಿಲ್ಲದ (ಪೇರಾಳನ್) ಹಿರಿಮೆ ಹೊಂದಿದವನೂ (ಪೆಣ್‌ಆಳನ್) ಹೆಣ್ಣಾಗಿ ಹುಟ್ಟಿದ ವರನ್ನೆಲ್ಲಾ ತನಗಾಗಿ ಉಳ್ಳವನೂ (ಮಣ್ ಆಳನ್) ಭೂಲೋಕದಲ್ಲಿರುವ ವರನ್ನೆಲ್ಲಾ ಆಳುವವನೂ (ವಿಣ್ಣೋರ್ ತಂಗಳ್ ಅರವಾಳನ್) ನಿತ್ಯಸೂರಿ ಗಳಿಗೆ ಪರಮ ಧಾರ್ಮಿಕನೂ ಆದ ಪರಮಾತ್ಮನು (ಎನ್‌ಮಹಳ್ಳೆಶೆಯ್‌ದನ ಹಳ್ ಅಮ್ಮನೈಮೀರ್ ಅರಿಹಿಲೇನ್) ನನ್ನ ಮಗಳ ವಿಷಯದಲ್ಲಿ ಮಾಡಿದು ದನ್ನು, ಎಲೈ ತಾಯಂದಿರೇ, ನಾನು ಅರಿಯಲಾರದವಳಾಗಿದ್ದೇನೆ.

ಭಗವಂತನ ಚಿಂತನೆಯಲ್ಲಿ ತನ್ನನ್ನೇ ಮರೆತ ಇವಳು ಇತರರ ಸಂಬಂಧ ವನ್ನೇ ಹೊಂದಿಲ್ಲದವಳಾಗಿದ್ದಾಳೆ. 'ಪಿತಾ ನಾಮ ಮೂರ್ತಃ ಶಿರೋರೋಗಃ'

ಎಂಬುವಂತಾಯಿತು ಇವಳಿಗೆ. ಕೃಷ್ಣಪ್ರೇಮದ ಪರಾಕಾಷ್ಠೆಯಲ್ಲಿರುವವಳು ಇವಳು. 'ಕಾಚಿದಾವಸಥಸ್ಯಾಂತೇ ಸ್ಥಿತ್ವಾ ದೃಷ್ಟ್ವಾ ಬಹಿರ್ಗುರುಂ । ತನ್ಮಯತ್ವೇನ ಗೋವಿಂದಂ ದಧ್ಯೌ ಮೀಲಿತಲೋಚನಾ ॥ ಎಂದೂ 'ಯಯೌ ಚ ಕಾಚಿತ್ ಪ್ರೇಮಾಂಧಾ ತತ್ಪಾರ್ಶ್ವಂ ಅವಿಳಂಬಿತಂ' ಎಂದೂ ಹೇಳಿರುವಂತಾಯಿತು ಇವಳ ದೆಶೆ. 'ಪ್ರೇಮದಿಂದ ಕತ್ತಲೆ ಕವಿದಿತು. ಆ ಕತ್ತಲೆಯೇ ದಾರಿ ತೋರಿಸಲು ಅವಳು ಅವನ ಬಳಿ ಸಾರಿದಳು'—ಎಂದು ಕಂಡು ಬರುತ್ತದೆ. ಅವಳನ್ನು ಎಲ್ಲರೂ ನಿಂದಿಸುತ್ತಿರಬೇಕಾದರೆ ಅವಳು ಹೇಳುವುದೇನು ಎಂದರೆ 'ಆಶ್ಚರ್ಯ ಗುಣಚೇಷ್ಟಿತನೇ, ಮಾಧವನೇ'—ಎಂದು: 'ನಿನ್ನನ್ನು ಪರಮ ಪ್ರಣಯಿಯನ್ನಾಗಿ ಮಾಡುವ ಶ್ರೀದೇವಿಗೆ ವಲ್ಲಭನೇ'—ಎಂದು ಹೇಳಿಕೊಳ್ಳುತ್ತಾಳೆ.

ಆಶ್ರಿತರಿಗಾಗಿ ನೂರಾರು ಬಗೆಯಲ್ಲಿ ಜನಿಸಿದರೂ 'ನಾನೇನೂ ಮಾಡಲಾಗಲಿಲ್ಲವಲ್ಲ! 'ಋಣಂ ಪ್ರವೃದ್ಧಂ ಇವ'-ಎಂದು ಹೇಳುವ ಸ್ವಭಾವದವನಾಗಿ ಆಶ್ರಿತರ ಬಗೆಗೆ ವ್ಯಾಮೋಹವನ್ನುಳ್ಳವನು ಅವನು. ತನ್ನನ್ನು ಸ್ಮರಿಸಿದವರ ಜನ್ಮವನ್ನು ಕಳೆದು ಹಾಕುವ ಪ್ರಭಾವವುಳ್ಳ ಶ್ರೀನಾಮಂಗಳನ್ನು ಉಳ್ಳವನು. ದುಃಖನಿವರ್ತಕವಾದ ಆ ನಾಮಂಗಳು ಇವಳಿಗೆ ದುಃಖವನ್ನುಂಟು ಮಾಡುತ್ತಿವೆ! 'ರಕ್ಷಿತಾ ಜೀವಲೋಕಸ್ಯ' ಎಂಬುವ ಹಿರಿಮೆ ಇವನದು ತನ್ನ ಆನೃಶಂಸ್ಯವನ್ನು ಕೊಂಡಾಡದ ನಿತ್ಯಸೂರಿಗಳಿಗೆ ನಿತ್ಯವೂ ಸೇವೆಯನ್ನು ಕೊಡುವವನು ಇವನು. ಇವಳ ಬಗೆಗೆ ಅವನು ಮಾಡಿದ ಆನೃಶಂಸ್ಯ ವ್ಯಾಪಾರಗಳನ್ನು ನನ್ನಿಂದ ಹೇಳಿ ಮುಗಿಸುವುದಕ್ಕಾಗುವುದಿಲ್ಲ!—

ಪಂದೋಡು ಕೞಲ್ ಮರುವಾಳ್ ಪೈಂಗಿಳಿಯುಮ್
ಪಾಲೂಟ್ಟಾಳ್ ಪಾವೈಪೇಣಾಳ್
ವಂದಾನೋ ತಿರುವರಂಗಂ ವಾರಾನೋ
ಎನ್ರೆನ್ರೇ ವಳೈಯುಂ ಶೋರುಂ
ಶಂದೋಹನ್ ಪೌೞಿಯನ್ ಐನ್ದು ಅೞಲ್ ಓಂಬು
ತೈತ್ತಿರೀಯನ್ ಶಾಮವೇದಿ
ಅನ್ದೋ ವನ್ದು ಎನ್ಮಹಳೈ ಶೆಯ್ದನಹಳ್
ಅಮ್ಮನೈಮೀರ್ ಅರಿಹಿಲೇನೇ ॥೯॥

(ಪೆಂದೋಡು ಕಟಲ್ ಮರುವಾಳ್) ನನ್ನ ಮಗಳು ಚೆಂಡನ್ನೂ ಕಾಲಂದುಗೆ ಯನ್ನೂ ಮುಟ್ಟುವುದಿಲ್ಲ. (ಪೈಕಿಳಿಯುಂಪಾಲೂಟ್ಟಾಳ್) ತನ್ನ ಚೆಲುವಾದ ಗಿಳಿಗೆ ಹಾಲನ್ನು ಕುಡಿಸುವುದೂ ಇಲ್ಲ. (ಪಾವೈಪೇಣಾಳ್) ಆಟಕ್ಕೆ ತಕ್ಕು ದಾದ ಮರದ ಬೊಂಬೆಯ ಕಡೆ ನೋಡುವುದೂ ಇಲ್ಲ. (ತಿರುವರಂಗಂ ವಂದಾನೋ ವಾರಾನೋ ಎನ್ರು ಎನ್ರೇ) ಶ್ರೀರಂಗನಾಥನು ಬಂದುಬಿಟ್ಟನೇ ? ಬರಲಾರನೋ ? ಎಂದು ಹೇಳಿಕ್ಕೊಂಡು (ವಳೈಯುಂ ಶೋರುಂ) ಕೈಬಳೆಗಳು ಜಾರಿ ಬೀಳುತ್ತಿರಲು ನಿಂತೇ ಇದ್ದಾಳೆ. (ಶಂದೋಹನ್) ಛಾಂದೋಗ್ಯೋಪ ನಿಷತ್ಪ್ರತಿಪಾದ್ಯನೂ (ಪೌಟಿಯನ್) ಕೌಷೀತಕಿ ಬ್ರಾಹ್ಮಣ ಪ್ರತಿಪಾದ್ಯನೂ, (ಐನ್ದು ಅಟಲ್ ಓಮ್ಬಿ) ಪಂಚಾಗ್ನಿಗಳಿಂದ ಆರಾಧಿಸಲ್ಪಡುವವನೂ, (ತೈತ್ತಿ ರೀಯನ್) ತೈತ್ತಿರೀಯೋಪನಿಷತ್ಪ್ರತಿಪಾದ್ಯನೂ (ಶಾಮವೇದಿ) ಸಾಮವೇದ ಪ್ರತಿಪಾದ್ಯನೂ ಆದ ಪರಮಾತ್ಮನು (ವಂದು) ಈ ಜಾಗಕ್ಕೆ ಬಂದು (ಎನ್ ಮಹಳೈ ಶೆಯ್‌ದನಹಳ್ ಅಮ್ಮನ್ಮೀರ್, ಅರಿಹಿಲೇನ್, ಅನ್ದೋ) ನನ್ನ ಮಗಳ ವಿಷಯದಲ್ಲಿ ಮಾಡಿದುದನ್ನು, ತಾಯಿಯರೇ, ನಾನು ತಿಳಿಯಲಾರದವ ಳಾಗಿದ್ದೇನೆ !

ನಿದ್ರಿಸುವ ಸಮಯದಲ್ಲಿಯೂ ನನ್ನ ಮಗಳು ಚೆಂಡನ್ನೂ ಗೆಜ್ಜೆಯನ್ನೂ ಕೈ ಬಿಡದೆ ಇದ್ದವಳು ಈಗ ಅವುಗಳನ್ನು ಮುಟ್ಟುವುದೂ ಇಲ್ಲ. ತನ್ನ ಮುದ್ದಿನ ಗಿಳಿಗೂ ಹಾಲೂಡಿಸುವುದಿಲ್ಲ. ಆಟದ ಬೊಂಬೆಯನ್ನು ಕಣ್ಣೆತ್ತಿಯೂ ನೋಡುವುದಿಲ್ಲ. 'ಬಾಲ್ಯೇ ಕ್ರೀಡನಕಾಸಕ್ತಾಃ ಯೌವ್ವನೇ ವಿಷಯೋನ್ಮುಖಾಃ! ಅಜ್ಞಾ ನಯಂತ್ಯಶಕ್ತ್ಯಾ ಚ ವಾರ್ಧಕ್ಯಂ ಸಮುಪಸ್ಥಿತಾಃ ॥ ತಸ್ಮಾದ್ಬಾಲ್ಯೇ ವಿವೇಕಾತ್ಮಾ ಯತೇತ ಶ್ರೇಯಸೇ ಸದಾ !' ಎಂಬುವುದಕ್ಕನುಗುಣವಾಗಿ ಎಲ್ಲ ವನ್ನೂ ಬಿಟ್ಟಂತೆ ಕಾಣುತ್ತದೆ. ಹೀಗೆ ಬಿಟ್ಟವರು ಯಾರಾದರೂ ಉಂಟೋ ಎಂದರೆ 'ಪರಿತ್ಯಕ್ತಾಮಯಾಲಂಕಾ' ಎಂದು ವಿಭೀಷಣನ ಬಗೆಗೆ ಕಾಣಬಹುದು. ಅವನೇ ಪ್ರಾಪ್ಯವೆಂಬ ಅರಿವು ಮೂಡಲು ಉಳಿದವೆಲ್ಲಾ ಪ್ರಾಪ್ಯಾಭಾಸಗಳಾಗಿ ತ್ಯಾಜ್ಯವಾಗುವುವಷ್ಟೇ ? ಅವನು ಬರುವುದು ನಿಶ್ಚಿತವೆಂದೇ ಇದ್ದಾಳೆ. ಅವನು ಬಂದು ಮುಖ ತೋರನೇ ? ನಾನು ಈ ದೇಹವನ್ನೇ ನಿಮ್ಮನ್ನೇ ಬಿಟ್ಟು ಹೋಗುವುದಷ್ಟೇಯೇ ? ಆಟದ ಬೊಂಬೆಗಳೋಪಾದಿ ಕೈಬಳೆಯೂ ಕಳಚಿ

ಬಿದ್ದಿತು. 'ಅನುರಾಗೇಣ ಶೈಥಿಲ್ಯಮಸ್ಯಾಸು ವ್ರಜತೋ ಹರೇಃ । ಶೈಥಿಲ್ಯಮುಪಯಶಾಂತ್ಯಾಶು ಕರೇಷು ವಲಯಶಾನ್ಯಪಿ ॥' ಎಂಬುವಂತಾಯಿತು.

ಈ ಕೆಲಸವನ್ನು ಒಬ್ಬ ಅಜ್ಞನು ಮಾಡಿದ್ದರೆ ಸಹಿಸಿಕೊಳ್ಳಬಹುದಾಗಿತ್ತು. 'ವೇದೈಶ್ಚ ಸರ್ವೈರಹಮೇವ ವೇದ್ಯಃ ವೇದಾಂತವಿದ್ವೇದವಿದೇವ ಚಾಹಂ'—ಎನ್ನುವ ಹಿರಿಮೆಯುಳ್ಳ ಸರ್ವಜ್ಞನೇ ಈ ರೀತಿ ಮಾಡಿದವನು! ಒಬ್ಬನು ಅವಿವೇಕಿ ಮಾಡುವಂತೆ ಸರ್ವಜ್ಞನು ಮಾಡಿದರೆ ನಾನೆಲ್ಲಿ ತಾನೇ ಹೋಗಿ ಸೇರಬಲ್ಲೆ? ಅವನೇ ಬಂದು ಹೀಗೆ ಮಾಡಿಬಿಟ್ಟು ತಾನೇ ಉಪೇಕ್ಷಿಸಬಹುದೇ?

ಶೇಲ್ ಉಹಳುಂ ವಯಲ್ ಪುಡೈಶೂಟ್
ತಿರುವರಂಗತ್ತಮ್ಮಾನೈ ಶಿಂದೈಶೆಯ್‍ದ
ನೀಲಮಲರ್‍ಕಣ್ ಮಡವಾರ್ ನಿರೈಅಟಿವೈ
ತಾಯ್‍ಮೊೞಿಂದ ಅದನೈ ನೇರಾರ್
ಕಾಲವೇಲ್ ಪರಕಾಲನ್ ಕಲಿಕನ್ರಿ
ಒಲಿಮಾಲೈ ಕತ್ತುವಲ್ಲಾರ್
ಮಾಲೈಶೇರ್ ವೆಣ್‍ಕುಡೈಕೀೞ್ ಮನ್ನರಾಯ್
ಪೊನ್ನುಲಹಿಲ್ ವಾೞ್‍ವರ್‍ತಾಮೇ ॥೧೦॥

(ಶೇಲ್‍ಉಹಳುಂ) ಮೀನುಗಳು ಚಿಮ್ಮಿನಲಿಯುತ್ತಿರುವಂಥ (ವಯಲ್‍ಪುಡೈಶೂಟ್) ಗದ್ದೆಗಳಿಂದ ಸುತ್ತಲೂ ಸುತ್ತುವರಿಯಲ್ಪಟ್ಟಿರುವ (ತಿರು ಅರಂಗತ್ತು ಅಮ್ಮಾನೈ) ಶ್ರೀರಂಗದಲ್ಲಿರುವ ಸ್ವಾಮಿಯನ್ನು (ಶಿಂದೈಶೆಯ್‍ದ) ಧ್ಯಾನಿಸಿಕೊಂಡಿರುವ (ನೀಲಮಲರ್‍ಕಣ್‍ಮಡವಾರ್) ಕನ್ನೈದಿಲೆಯಂತೆ ಕಣ್ಣುಗಳನ್ನುಳ್ಳ ಪರಕಾಲನಾಯಕಿಯು (ನಿರೈಅಟಿವೈ) ಲಜ್ಜೆ, ನಾಣು ಇವುಗಳು ಅಳಿದುದನ್ನು ಕುರಿತು (ತಾಯ್ ಮೊೞಿನ್ದ ಅದನೈ) ತಾಯಿ ಹೇಳಿದ ಮಾತುಗಳ ರೂಪದಲ್ಲಿ (ನೇರಾರ್ ಕಾಲನ್) ಶತ್ರುಗಳಿಗೆ ಯಮನಂತಹವರೂ, (ವೇಲ್) ವೇಲಾಯುಧ ಧಾರಿಗಳೂ (ಪರಕಾಲನ್) ಪರಕಾಲರೆನ್ನುವ ಶ್ರೀ ನಾಮವನ್ನುಳ್ಳವರೂ, ಆದ (ಕಲಿಕನ್ರಿ) ತಿರುಮಂಗೈ ಆೞ್ವಾರ್ ಅವರು (ಒಲಿಮಾಲೈ) ಹಾಡಿದ ಈ ನುಡಿಮಾಲೆಯನ್ನು (ಕತ್ತುವಲ್ಲವರ್‍ತಾಮ್) ಓದಿ ಅರಿಯಬಲ್ಲವರು (ಮಾಲೈಶೇರ್ ವೆಣ್‍ಕುಡೈಕೀೞ್) ನುತ್ತಿನ ಸರಗಳು

ತೂಗಾಡುವ ಶ್ವೇತಚ್ಛತ್ರದ ನೆರಳಿನಲ್ಲಿ (ಮನ್ನವರ್‌ಆಯ್) ರಾಜರುಗಳಾಗಿದ್ದು ಕೊಂಡು ಈ ಲೋಕದ ಐಶ್ವರ್ಯವನ್ನು ಅನುಭವಿಸಿದ ನಂತರ (ಪೊನ್‌ಉಲ ಹಿಲ್‌ವಾಟ್‌ವರ್) ಪರಮಪದದಲ್ಲಿ ನಿತ್ಯಾನುಭವವನ್ನು ಮಾಡುವವರಾಗು ತ್ತಾರೆ.

ತಿರ್ಯಕ್ಕುಗಳೂ ಸಹ ನಲಿದಾಡುವಂತಹ ಗದ್ದೆಗಳಿಂದ ಸಂತೃಪ್ತಿಯರಿಯ ಲ್ಪಟ್ಟ ಶ್ರೀರಂಗದಲ್ಲಿರುವ ಸರ್ವೇಶ್ವರನನ್ನು ಧ್ಯಾನಿಸುತ್ತಾ ತನ್ಮಯಳಾದ ಪರಕಾಲ ನಾಯಕಿ ತನ್ನ ಸ್ತ್ರೀತ್ವವನ್ನು ಅಳಿಸಿಕೊಂಡ ಬಗೆಯನ್ನು ಅವಳ ತಾಯಿಯು ನುಡಿಗಳಲ್ಲಿ ನಿರೂಪಿಸಿದ್ದಾರೆ ಆಳ್ವಾರ್ ಅವರು. ಈ ಆತ್ಮ ಸಂದರ್ಭ ವನ್ನು ಸಮೀಚೀನರಾದ ಆಚಾರ್ಯರ ಉಪದೇಶದಿಂದ ಅರಿಯುವವರು ಪರಮಾತ್ಮನ ಶ್ವೇತಚ್ಛತ್ರಿಯ ನೆರಳಲ್ಲಿ ಸಾರುವವರಾಗಿ, ಅವನ ಕೈಯಿಂದಲೇ ಮಾಲೆಯನ್ನು ಪಡೆಯಬಲ್ಲ ಸ್ವರೂಪಟ್ಟುಗಳಾಗಿ ಶ್ರೀವೈಕುಂಠದಲ್ಲಿ ಭಗವಂತನ ನಿತ್ಯಾನುಭವವನ್ನು ಮಾಡುವವರಾಗಿ ಬಾಳುತ್ತಾರೆ.

ತಿರುಮಂಗೈ ಆಳ್ವಾರ್ ತಿರುವಡಿಹಳೇ ಶರಣಂ